

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕನ್ನಡ ಎಂ.ಫಿಲ್ ಪದವಿಯ ಭಾಗವಾಗಿ ಸಾದರಪಡಿಸಿದ ನಿಬಂಧ

# "ಸುಬ್ಬಣ್ಣ - ಸಂಧ್ಯಾರಾಗ - ಒಂದು ತೌಲನಿಕ ಅಧ್ಯಯನ"


ನಿಬಂಧಕಾರರು:

**ಎಂ. ಎಸ್. ಅಶೋಕ ಶೆಟ್ಟಿ**

ಕನ್ನಡ ಎಂ.ಫಿಲ್

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು.

ಮಾರ್ಗದರ್ಶಕರು:

**ಡಾ. ಎಸ್. ಮಹೇಶ್ವರಿ**

ಉಪನ್ಯಾಸಕರು

ಜೆ.ಎಸ್.ಎಸ್. ಸ್ನಾತಕೋತ್ತರ ವಿಭಾಗ

ಚಾಮರಾಜನಗರ






ಕನ್ನಡ ವಿಶ್ವವಿದ್ಯಾಲಯ, ಹಂಪಿ

229



ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕನ್ನಡ ಎಂ.ಫಿಲ್ ಪದವಿಯ ಭಾಗವಾಗಿ ಸಾದರಪಡಿಸಿದ ನಿಬಂಧ

# "ಸುಬ್ಬಣ್ಣ – ಸಂಧ್ಯಾರಾಗ – ಒಂದು ತೌಲನಿಕ ಅಧ್ಯಯನ"


ನಿಬಂಧಕಾರರು:

**ಎಂ. ಎನ್. ಅರ್ಚನ ತೇಜಸ್ವಿ**

ಕನ್ನಡ ಎಂ.ಫಿಲ್

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು.

ಮಾರ್ಗದರ್ಶಕರು:

**ಡಾ॥ ಎನ್. ಮಹೇಶ್ವರಿ**

ಉಪನ್ಯಾಸಕರು

ಜೆ.ಎಸ್.ಎಸ್. ಸ್ನಾತಕೋತ್ತರ ವಿಭಾಗ

ಚಾಮರಾಜನಗರ



ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಮಾರ್ಗದರ್ಶಕರ ಪ್ರಮಾಣ ಪತ್ರ

ನಮ್ಮ ಸಂಸ್ಥೆಯ ಕನ್ನಡ ಎಂ.ಫಿಲ್ ಪದವಿಯ ವಿದ್ಯಾರ್ಥಿಯಾದ, **ಎಂ. ಎನ್. ಅರ್ಚನ ತೇಜಸ್ವಿ** ಅವರು ನನ್ನ ಮಾರ್ಗದರ್ಶನದಲ್ಲಿ **"ಸುಬ್ಬಣ್ಣ – ಸಂಧ್ಯಾರಾಗ –ಒಂದು ತೌಲನಿಕ ಅಧ್ಯಯನ"** ಎಂಬ ಶೀರ್ಷಿಕೆಯ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಈ ವಿಶ್ವವಿದ್ಯಾನಿಲಯಕ್ಕೆ, ಅಥವಾ ಬೇರೆ ಯಾವುದೇ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 27-02-02

ಸ್ಥಳ : ಮೈಸೂರು

**ಮಾರ್ಗದರ್ಶಕರು**

ಉಪನ್ಯಾಸಕರು

ಜೆ.ಎಸ್.ಎಸ್. ಸ್ನಾತಕೋತ್ತರ ವಿಭಾಗ

ಚಾಮರಾಜನಗರ

# ಅಭ್ಯರ್ಥಿಯ ಘೋಷಣಾ ಪತ್ರ

**ಡಾ॥ ಎನ್. ಮಹೇಶ್ವರಿ** – ಉಪನ್ಯಾಸಕರು, ಜೆ.ಎಸ್.ಎಸ್. ಸ್ನಾತಕೋತ್ತರ ವಿಭಾಗ, ಚಾಮರಾಜನಗರ ಇವರ ಮಾರ್ಗದರ್ಶನದಲ್ಲಿ **"ಸುಬ್ಬಣ್ಣ – ಸಂಧ್ಯಾರಾಗ –ಒಂದು ತೌಲನಿಕ ಅಧ್ಯಯನ"** ಎಂಬ ವಿಷಯದ ಬಗ್ಗೆ ನಡೆಸಿದ ಅಧ್ಯಯನದ ಫಲವೇ ಈ ನಿಬಂಧ.

ಈ ನಿಬಂದವನ್ನು ಈ ಹಿಂದೆ ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಈ ವಿಶ್ವವಿದ್ಯಾನಿಲಯಕ್ಕೆ, ಅಥವಾ ಬೇರೆ ಯಾವುದೇ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಎಂ.ಎನ್. ಚಂದನ ಕೇಜಿನ್ವಿ

ನಿಬಂಧಕಾರರು

ಕನ್ನಡ ಎಂ.ಫಿಲ್

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಮೈಸೂರು

ದಿನಾಂಕ : 27-02-02

ಸ್ಥಳ : ಮೈಸೂರು

# 'ಸುಬ್ಬಣ್ಣ' – 'ಸಂಧ್ಯಾರಾಗ' – ಒಂದು ತೌಲನಿಕ ಅಧ್ಯಯನ

## ಪರಿವಿಡಿ:

ಅಧ್ಯಾಯ -೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಮಾನವನ ಜೀವನ ಸಂಕೀರ್ಣ ಸ್ವರೂಪದ್ದು. ಅಂತೆಯೇ ಜೀವನದ ಬಗೆಗಿನ ಪ್ರತಿಯೊಬ್ಬರ ದೃಷ್ಟಿಕೋನವೂ ಭಿನ್ನವಾಗಿರುತ್ತದೆ. ಇದು ಆಯಾ ವ್ಯಕ್ತಿಗಳ ಜೀವನಾನುಭವ, ನೋವು-ನಲಿವು ಇವುಗಳಿಗೆ ಅನುಗುಣವಾಗಿ ಭಿನ್ನತೆಯನ್ನು ಪಡೆದಿರುತ್ತದೆ. ಆದರೆ ಬದುಕಿನ ಸಂಕೀರ್ಣತೆ, ಸವಾಲುಗಳನ್ನು ಎದುರಿಸಿ, ಅದರ ನೋವುಗಳ ನಡುವೆಯೂ ಮನಶ್ಯಾಂತಿಯನ್ನು ನೀಡಬಲ್ಲ ಸೆಲೆಗಳು ಹಲವಾರು. ಅವುಗಳಲ್ಲಿ ಸಂಗೀತ ಕಲೆಯೂ ಒಂದು. ಬದುಕಿನ ಸಮಸ್ಯೆಗಳ ನಡುವೆಯೂ, ಜೀವನ ಪ್ರೀತಿಯನ್ನು ಉಳಿಸಿಕೊಳ್ಳುವಂತೆ ಮಾಡುವ ಶಕ್ತಿ ಈ ಕಲೆಗಿದೆ.

ಈ ಹಿನ್ನಲೆಯಲ್ಲಿ 'ಸುಬ್ಬಣ್ಣ' ಮತ್ತು 'ಸಂಧ್ಯಾರಾಗ'- ಎರಡೂ ಕೃತಿಗಳೂ ಕಲಾಬದುಕಿಗೆ ಸಂಬಂಧಿಸಿದ ಕಥಾವಿನ್ಯಾಸವನ್ನು ಹೊಂದಿವೆ. ಈ ಎರಡೂ ಕೃತಿಗಳೂ-ಕಲಾವಿದನ ಜೀವನ, ಕಲೆಯು ಅವರ ಜೀವನದಲ್ಲಿ ವಹಿಸಿದ ಪಾತ್ರ, ಆ ಕಾಲ ಮಾರ್ಗದಲ್ಲಿ ಅವರು ಕಂಡುಕೊಂಡ ಸಿದ್ಧಿ-ತಿಳಿವುಗಳು-ಈ ಎಲ್ಲವನ್ನು ಚರ್ಚಿಸುತ್ತವೆ. ಅಂತೆಯೇ ಈ ಅಂಶಗಳು ಎರಡೂ ಕೃತಿಗಳಲ್ಲೂ ಭಿನ್ನ ರೀತಿಯಲ್ಲಿ ಮೂಡಿಬಂದಿವೆ.

ಈ ಸಂದರ್ಭದಲ್ಲಿ ಕಲೆ ಜೀವನದಲ್ಲಿ ವಹಿಸುವ ಪಾತ್ರವೇನು ಎಂಬ ಪ್ರಶ್ನೆ ಮೂಡುವುದು ಸಹಜವಾಗಿದೆ. ಇದು ಜೀವನದ ನಿರಂತತೆಯಲ್ಲಿ ಒಂದು ಭಾಗ ಮಾತ್ರವೇ? ಅಥವಾ ಜೀವನವನ್ನು ಮೀರಿ ನಿಲ್ಲುವ ಅದ್ಭುತ ಶಕ್ತಿಯೇ? ಎಂಬೆಲ್ಲಾ ವಿಷಯಗಳೂ ಎರಡೂ ಕೃತಿಗಳಲ್ಲಿ ಚಿತ್ರಿತವಾಗಿವೆ. ಕಲೆ ಮತ್ತು ಜೀವನ ಈ ಎರಡರಲ್ಲೂ ಮುಖ್ಯವೆನಿಸುವುದು ಯಾವುದು ಎಂಬ ಚಿಂತನೆಯನ್ನು ಈ ಎರಡೂ ಕೃತಿಗಳೂ ನಮ್ಮಲ್ಲಿ ಮೂಡಿಸುತ್ತವೆ. ಅಂತೆಯೇ ಕೃತಿಕಾರರೂ ತಮ್ಮದೇ ಆದ ರೀತಿಯಲ್ಲಿ ಇದಕ್ಕೆ ಉತ್ತರವನ್ನು ನೀಡುವ ಪ್ರಯತ್ನ ಮಾಡಿದ್ದಾರೆ. ಎರಡೂ ಕೃತಿಗಳಲ್ಲೂ ವಿಭಿನ್ನಮಾರ್ಗ, ಮನೋಧರ್ಮ ಹಾಗೂ ಪಾತ್ರಗಳು ನಮಗೆ ಗೋಚರಿಸುತ್ತವೆ.

'ಸುಬ್ಬಣ್ಣ', 'ಸಂಧ್ಯಾರಾಗ'- ಈ ಎರಡೂ ಕೃತಿಗಳೂ ಕಲಾವಿದರ ಬದುಕಿನ ಸುತ್ತ ಹೆಣೆಯಲ್ಪಟ್ಟ ಕಥಾವಿನ್ಯಾಸವನ್ನು ಹೊಂದಿದ್ದರೂ, ಹಲವು ಅಂಶಗಳಲ್ಲಿ ವಿಭಿನ್ನವಾಗಿವೆ. ಇದಕ್ಕೆ ಮುಖ್ಯವಾಗಿ ಲೇಖಕರ ಜೀವನದೃಷ್ಟಿ, ಮನೋಧರ್ಮ, ಪರಿಸರ ಪ್ರಭಾವ ಇವೆಲ್ಲವೂ ಕಾರಣವಾಗಿವೆ. ಈ ಹಿನ್ನಲೆಯಲ್ಲಿ ಎರಡೂ ಕೃತಿಗಳ ಲೇಖಕರ ಪರಿಚಯ ಅತ್ಯಗತ್ಯ. ಹಾಗೂ ಆ ಮೂಲಕ ಲೇಖಕರ ದೃಷ್ಟಿಕೋನ, ಕೃತಿಗಳ ಭಿನ್ನತೆ, ವಿಶಿಷ್ಟತೆಗಳನ್ನು ಅರಿಯಬಹುದಾಗಿದೆ. 'ಮಾಸ್ತಿ' ಮತ್ತು 'ಅನಕೃ'ರವರ ಪರಿಚಯವನ್ನು ಈ ನಿಟ್ಟಿನಲ್ಲಿ ಹೀಗೆ ನೋಡಬಹುದು.

ಅನನ್ಯವಾದ ಮತ್ತು ಅಷ್ಟೇ ಸಮೃದ್ಧವಾದ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಮಾಸ್ತಿ ವೆಂಕಟೇಶ್ ಅಯ್ಯಂಗಾರರ ಹೆಸರು ಅಮರವಾದುದು. 'ಶ್ರೀನಿವಾಸ' ಎಂಬ ಕಾವ್ಯನಾಮದಿಂದ ಖ್ಯಾತರಾದ ಮಾಸ್ತಿಯವರು, ಕನ್ನಡ ಸಾಹಿತ್ಯ ಪರಂಪರೆಯ ನಿರ್ಮಾಪಕರಲ್ಲಿ ಒಬ್ಬರು.

ಮಾಸ್ತಿಯವರದು ಮೂಲತಃ ಸಾಹಿತ್ಯ ಪರಿಸರದ ಮನೆತನವಲ್ಲ; ಆದರೆ ಗೌರವದಲ್ಲಿ ಹಿರಿಯ ಸ್ಥಾನ ಪಡೆದ ಮನೆತನ ಅವರದು. 'ಪೆರಿಯಾಲ್ ಮನೆತನ' ಎಂದರೆ 'ದೊಡ್ಡಮನೆಯವರು' ಎಂದು ಖ್ಯಾತಿವೆತ್ತ ಮನೆತನದಲ್ಲಿ ಹುಟ್ಟಿ ಬಂದವರು ಮಾಸ್ತಿ. ಒಂದು ರೀತಿಯಲ್ಲಿ ಸಂಪ್ರದಾಯಸ್ಥ, ಆದರ್ಶಪ್ರಾಯ ಮನೆತನ ಮಾಸ್ತಿಯವರದ್ದು.

ಕನ್ನಡ ನವೋದಯ ಪರಂಪರೆಯಲ್ಲಿ ತಮ್ಮನ್ನು ಬೆಸೆದುಕೊಂಡ ಮಾಸ್ತಿಯವರು, ಈ ನಿಟ್ಟಿನಲ್ಲಿ ಕನ್ನಡ ಸಾಹಿತ್ಯಕ್ಕೆ ಅಪಾರವಾದ ಸೇವೆಯನ್ನು ಸಲ್ಲಿಸಿದ್ದಾರೆ. 'ಸಣ್ಣಕಥೆಗಳ ಪಿತಾಮಹ', 'ಕನ್ನಡ ಕಥನ ಬ್ರಹ್ಮ' ಎಂಬೆಲ್ಲಾ ಹೆಗ್ಗಳಿಕೆಗಳಿಗೆ ಪಾತ್ರರಾಗಿರುವ ಮಾಸ್ತಿಯವರಿಗೂ, ಸಣ್ಣ ಕಥೆಗಳಿಗೂ ಒಂದು ರೀತಿಯ ಮಧುರ ಸಂಬಂಧ. ಅವರ ಕಥಾ ಪ್ರಪಂಚ ಎಷ್ಟು ವಿಶಾಲವಾದುದೊ, ಅಷ್ಟೇ ವೈವಿಧ್ಯಪೂರ್ಣವೂ ಹೌದು. ಕೇವಲ ಸಣ್ಣಕಥೆಗಳಷ್ಟೇ ಅಲ್ಲದೆ ಕಾವ್ಯ, ನಾಟಕ, ಕಾದಂಬರಿ, ಜೀವನ ಚರಿತ್ರೆ, ವಿಮರ್ಶೆ, ಅನುವಾದ, ಸಂಪಾದಕೀಯ ಹೀಗೆ ವಿವಿಧ ಕ್ಷೇತ್ರಗಳಲ್ಲಿ ಅವರ ಕ್ರಿಯಾಶೀಲ ಪ್ರತಿಭೆ ದುಡಿದಿದೆ.

'ಆಚಾರ್ಯರ ಪತ್ನಿ', 'ವೆಂಕಟಿಗನ ಹೆಂಡತಿ', 'ಗೌತಮಿ ಹೇಳಿದ ಕತೆ', 'ಮೊಸರಿನ ಮಂಗಮ್ಮ', 'ನಿಜಗಲ್ಲಿನ ರಾಣಿ', 'ಕಲ್ಮಾಡಿಯ ಕೋಣ', 'ಒಂದು ಹಳೆಯ ಕತೆ', 'ರಂಗಪ್ಪನ ಕಥೆಗಳು', 'ಇಂದಿರೆಯೋ ಅಲ್ಲವೋ?' ಹೀಗೆ ಓದುಗರನ್ನು ಬೆರಗುಗೊಳಿಸುವ ವೈವಿಧ್ಯವುಳ್ಳ ಕಥೆಗಳು, 'ಶೇಷಮ್ಮ', 'ಚನ್ನಬಸವನಾಯಕ', 'ಚಿಕವೀರರಾಜೇಂದ್ರ', ಮೊದಲಾದ ಕಾದಂಬರಿಗಳು, 'ಯಶೋಧರಾ', 'ಕಾಕನಕೋಟೆ', 'ಭಟ್ಟರ ಮಗಳು', ಮುಂತಾದ ಪ್ರತಿಭಾ ಪೂರ್ಣ ನಾಟಕಗಳು, ಅದಲ್ಲದೇ 'ಶ್ರೀರಾಮ ಪಟ್ಟಾಭಿಷೇಕ', 'ಶ್ರೀರಾಮನವಮಿ', 'ಗೌಡರಮಲ್ಲಿ' ಮೊದಲಾದ ರಸಭರಿತ ಕಾವ್ಯಗಳು– ಹೀಗೆ ಮಾಸ್ತಿಯವರ ಸಾಹಿತ್ಯಕೃಷಿ ವಿಫುಲವಾಗಿವೆ. ಅವರ ಆತ್ಮ ಚರಿತ್ರೆಯಾದ 'ಭಾವ' ನೆನಪುಗಳ ಗಣಿ, ಇದು ಮುರು ಸಂಪುಟಗಳಲ್ಲಿ ಬಂದಿದ್ದು, ಮಾಸ್ತಿಯವರ ಜೀವನದ ಮಹತ್ವದ ಘಟನೆಗಳನ್ನು, ಅವರ ವ್ಯಾಖ್ಯಾನದೊಡನೆ ದಾಖಲಿಸುತ್ತದೆ.

ಶ್ರೇಷ್ಠ ಬರಹಗಾರರಾದ ಮಾಸ್ತಿಯವರು, ಅಷ್ಟೇ ಅತ್ಯುತ್ತಮ ವಾಗ್ಮಿಗಳೂ ಎನಿಸಿದ್ದರು. ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳೆರಡರಲ್ಲೂ ಅವರು ಈ ಪರಿಣಿತಿಯನ್ನು ಸಾಧಿಸಿದ್ದರು.

ಮಾಸ್ತಿಯವರು ಜೀವನವನ್ನು ಸ್ವೀಕರಿಸುತ್ತಿದ್ದ ರೀತಿ ಅಪೂರ್ವವಾದುದು. ಬದುಕು ಹಾಗೂ ಬರಹಕ್ಕೆ ಅವರಲ್ಲಿ ಹೆಚ್ಚು ಅಂತರವಿರಲಿಲ್ಲ. ನವೋದಯ ಲೇಖಕರಲ್ಲಿ ಕಂಡು ಬರುವಂತಹ, ಕನುಸುಗಾರಿಕೆ, ಆದರ್ಶ, ಅನನ್ಯಜೀವನ ಪ್ರೀತಿ, ಆಧ್ಯಾತ್ಮ, ಪ್ರಕೃತಿ ಪ್ರೀತಿ–ಇವೆಲ್ಲವನ್ನೂ ಮಾಸ್ತಿಯವರಲ್ಲಿ ನಾವು ಕಾಣುತ್ತೇವೆ. ಬದುಕು

ಚೆಲುವಾದುದು ಅರ್ಥಪೂರ್ಣವಾದುದು ಎಂದು ನಂಬಿದ್ದ ಮಾಸ್ತಿಯವರು, ತಮ್ಮ ಬದುಕನ್ನು ಒಂದು ಸುಂದರ ಕಾವ್ಯವಾಗಿಸಿದ್ದರು ಎಂಬುದು ಮಹತ್ವದ ಸಂಗತಿ. ಅಂತೆಯೇ ಇವುಗಳ ಹೊಳಹುಗಳು, ಅವರ ಬರಹಗಳಲ್ಲಿ ಮಿಂಚುತ್ತವೆ.

ಅವರೇ ಹೇಳಿರುವಂತೆ – **"How can literature be great without compassion?"**[೧]

**"ಮನುಷ್ಯನು ಆಯುಸ್ಸನ್ನು ಎಲ್ಲಿಬೇಕಾದರೂ ಕಳೆಯಬಹುದು; ಅದಕ್ಕೆ ಅವನು ಕಷ್ಟಪಡಬೇಕಾದುದಿಲ್ಲ ಕಷ್ಟವಿರುವುದೆಲ್ಲಾ ಸರಿಯಾದ ರೀತಿಯನ್ನು ಹುಡುಕುವುದರಲ್ಲಿ"**[೨] – ಎಂಬ ಮಾತುಗಳಲ್ಲಿ ಅವರ ಜೀವನದೃಷ್ಟಿ, ಸಾಹಿತ್ಯ ದೃಷ್ಟಿ ಎರಡೂ ನಿಚ್ಚಳವಾಗಿವೆ.

'ಸುಬ್ಬಣ್ಣ'–ಮಾಸ್ತಿಯವರ ನೀಳ್ಗತೆ, ಇದನ್ನು ಕಿರುಕಾದಂಬರಿ ಎಂತಲೂ ಕರೆಯಬಹುದು. ಇಲ್ಲಿ ಮಾಸ್ತಿಯವರು ಒಬ್ಬ ಸಂಗೀತಗಾರನ ಜೀವನವನ್ನು ನಮ್ಮ ಮುಂದೆ ತೆರೆದಿದ್ದಾರೆ. ಈ ಕಾದಂಬರಿಯನ್ನು ಗಮನದಲ್ಲಿಟ್ಟುಕೊಂಡು ನೋಡಿದಾಗ ಮಾಸ್ತಿಯವರು ಇಲ್ಲಿ ಜೀವನಕ್ಕೆ ಹೆಚ್ಚಿನ ಒತ್ತನ್ನು ನೀಡಿದ್ದಾರೆ ಎನಿಸುತ್ತದೆ. ಸಂಗೀತವು, ಸುಬ್ಬಣ್ಣನ ಜೀವನದೊಂದಿಗೆ ಬೆರೆತು, ಅವನ ಬಾಳನ್ನೆಲ್ಲಾ ಆವರಿಸುವ ರೀತಿ ಓದುಗರ ಮನಸ್ಸನ್ನು ಮಿಡಿಯುತ್ತದೆ. ಸಂಗೀತವು 'ಸುಬ್ಬಣ್ಣ'ನ ವ್ಯಕ್ತಿತ್ವವನ್ನು ಎಷ್ಟರಮಟ್ಟಿಗೆ ರೂಪಿಸಿತು? ಎಷ್ಟರಮಟ್ಟಿಗೆ 'ಸುಬ್ಬಣ್ಣ'ನಿಂದ ಅವನ ಸಂಗೀತ ಉದ್ಧಾರವಾಯಿತು? ಎಂಬಂತಹ ಸಹಜ ಪ್ರಶ್ನೆಗಳು ಈ ಹಂತದಲ್ಲಿ ಮೂಡುತ್ತವೆ. ಇವುಗಳಿಗೆ ಉತ್ತರ ಕಂಡುಕೊಳ್ಳುವ, ವಿಶ್ಲೇಷಿಸುವ, ಅಗತ್ಯತೆ ಈ ಅಧ್ಯಯನದ ಉದ್ದೇಶವಾಗಿದೆ.

'ಸಂಧ್ಯಾರಾಗ'ದ ಕರ್ತೃವಾದ ಅ.ನ.ಕೃಷ್ಣರಾಯರು ಪ್ರಗತಿಶೀಲ ಪಂಥದ ನಾಯಕರು; ಪ್ರಗತಿಶೀಲ ಸಾಹಿತ್ಯ ಪಂಥವನ್ನು ಕನ್ನಡಕ್ಕೆ ತಂದವರು. ಅರಕಲಗೂಡು ನರಸಿಂಗರಾಯ ಕೃಷ್ಣರಾಯ–ಅ.ನ.ಕೃ.ರವರ ಪೂರ್ಣನಾಮ. ಅ.ನ.ಕೃರವರ ತಾತ ಕೃಷ್ಣಪ್ಪ ಸ್ವತಃ ಕವಿಗಳಾಗಿದ್ದು, ಕನ್ನಡ–ತೆಲುಗು ಭಾಷೆಗಳಲ್ಲಿ ಕೃತಿಗಳನ್ನೂ ರಚಿಸಿದ್ದರು, ಹೀಗಾಗಿ ಅ.ನ.ಕೃರವರಿಗೆ ವಂಶಾವಳಿಯ ವಿದ್ವತ್ತಿನ ಪ್ರೇರಣೆಯೂ ಲಭಿಸಿತ್ತು. ಗಾಂಧೀಜಿ, ಆಲೂರು ವೆಂಕಟರಾಯರು, ಪಂಡಿತ ತಾರಾನಾಥ, ಕೈಲಾಸಂ ಮೊದಲಾದವರ ಪ್ರಭಾವದ ಹಿನ್ನಲೆಯಲ್ಲಿ ತಮ್ಮ ಬದುಕನ್ನು ಅ.ನ.ಕೃ. ರೂಪಿಸಿಕೊಂಡಿದ್ದರು.

ಅ.ನ.ಕೃ ಹುಟ್ಟು ಕಥೆಗಾರರು, ನಿರಂತರ ಅಧ್ಯಯನದಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಬರ್ನಾರ್ಡ್‌ಷಾ, ಶೆಲ್ಲಿ, ಜಾರ್ಜ್ ಸ್ಯಾಂಡಾ, ಗಾಯಟಿಯರ್ ಮೊದಲಾದ ಲೇಖಕರ ಸಾಹಿತ್ಯದಲ್ಲಿ ಅವರ ಮನಸ್ಸು ಸದಾಕಾಲ ತಿರುಗಾಡುತ್ತಿತ್ತು.

---

೧. ಸಿರಿಸಂಪದ–ಮಾಸ್ತಿವೆಂಕಟೇಶ್ ಅಯ್ಯಂಗಾರ್–ಎಲ್.ಎಸ್. ಶೇಷಗಿರಿರಾವ್–ಪು.ಸಂ–೧೯

೨ ಸುಬ್ಬಣ್ಣ–ಶ್ರೀನಿವಾಸ–ಪು.ಸಂ. ೩೯

ಕನ್ನಡ ನಾಡು-ನುಡಿಗೆ, ಗೌರವ, ಘನತೆ, ಹಿರಿಮೆಗಳನ್ನು ತಂದುಕೊಟ್ಟವರಲ್ಲಿ ಅ.ನ.ಕೃರವರದ್ದು ಸಿಂಹಪಾಲು. ಉತ್ತಮ ವಾಗ್ಮಿಗಳೂ ಆದ ಅ.ನ.ಕೃ. ಕನ್ನಡನಾಡಿನ ಸರ್ವತೋಮುಖ ಅಭಿವೃದ್ಧಿಯ ಬಗ್ಗೆ ಅಪಾರವಾದ ಕಳಕಳಿಯನ್ನು ಹೊಂದಿದ್ದಾರೆ. ಕನ್ನಡ ನಾಡಿನ ಮೂಲೆ-ಮೂಲೆಯನ್ನೂ ಸುತ್ತಿ, ಕನ್ನಡಿಗರನ್ನು ಜಾಗೃತಗೊಳಿಸಿದ್ದಾರೆ. ಅಂತೆಯೇ ಅವರಿಗೆ "ಕನ್ನಡದ ವೀರಸೇನಾನಿ" ಎಂಬ ಹೆಸರು ಅನ್ವರ್ಥವಾಗಿದೆ.

ಅ.ನ.ಕೃರವರು ಸಾಹಿತ್ಯಕೃಷಿ ಮಾಡದ ಕ್ಷೇತ್ರವೇ ಇಲ್ಲ. ಸಣ್ಣಕಥೆ, ನಾಟಕ, ಕಾದಂಬರಿ, ಪ್ರಬಂಧ ಮತ್ತು ವಿಮರ್ಶೆ, ಅನುವಾದ, ಶಿಶುಸಾಹಿತ್ಯ, ಚಲನಚಿತ್ರ ಸಾಹಿತ್ಯ- ಹೀಗೆ ವಿವಿಧ ಕ್ಷೇತ್ರಗಳಲ್ಲಿ ಅ.ನ.ಕೃ ಪ್ರಯೋಗಶೀಲರಾಗಿದ್ದರೂ, ಅವರು ಮುಖ್ಯವಾಗಿ ಗುರುತಿಸಲ್ಪಡುವುದು ಕಾದಂಬರಿಕಾರರಾಗಿ.

ಕನ್ನಡ ಕಾದಂಬರಿ ಪ್ರಕಾರಕ್ಕೆ ವೈವಿಧ್ಯತೆ, ವಿಸ್ತಾರವನ್ನು ಒದಗಿಸಿದವರು ಅ.ನ.ಕೃ ಸಾಮಾಜಿಕ ಜೀವನದ ಹತ್ತು ಹಲವು ಮುಖಗಳನ್ನು ತಮ್ಮ ಕಾದಂಬರಿಯ ಮೂಲಕ ತೆರೆದಿಡುವುದರೊಂದಿಗೆ ಅಪಾರವಾದ ಓದುಗವಲಯವನ್ನು ಸೃಷ್ಟಿಸಿದರು. ಅದ್ಭುತವಾದ ಹಾಗೂ ಆಕರ್ಷಕವಾದ ಕಥನಶಕ್ತಿಯನ್ನು ಹೊಂದಿದ್ದ ಅ.ನ.ಕೃರವರಿಗೆ, ಓದುಗ ಅಭಿಮಾನಿಗಳ ಬಳಗವೇ ಸೃಷ್ಟಿಯಾಯಿತು. ಎಲ್ಲಕ್ಕಿಂತಲೂ ಹೆಚ್ಚಾಗಿ, ಕೃಷ್ಣರಾಯರು ತಮ್ಮ ಕೃತಿಗಳಲ್ಲಿ ಸಾಮಾಜಿಕ ಸಮಸ್ಯೆಗಳಿಗೆ ಹೆಚ್ಚು ಒತ್ತು ನೀಡಿದುದು, ಸಮಾಜದ ಎಲ್ಲಾ ವರ್ಗದ ಜನರನ್ನೂ ತನ್ನೆಡೆಗೆ ಆಕರ್ಷಿಸಿತು; ಅದರಲ್ಲೂ ವಿಶೇಷವಾಗಿ ಮಾಧ್ಯಮವರ್ಗದ ಜನರನ್ನು ಆಕರ್ಷಿಸಿತು. ಅವರೇ ಹೇಳಿರುವಂತೆ **"ಕಾದಂಬರಿಕಾರ ಸ್ವಚ್ಛಂದ ಜೀವಿ. ಅವನ ಕ್ಷೇತ್ರ, ವಿಶಾಲ, ಅವನು ತಂತ್ರ ಸ್ವಯಂಭೂ : - ಈ ಅನುಕೂಲತೆಗಳು ನನ್ನನ್ನು ಕಾದಂಬರಿಯ ಸಾಹಿತ್ಯ ಪ್ರಕಾರಕ್ಕೆ ತಿರುಗಿಸಿದವು"**[೧]

ಅ.ನ.ಕೃರವರ ಕಾದಂಬರಿಗಳು ಸಂಖ್ಯೆಯಲ್ಲಿ ಗಣನೀಯವಾದವು. ಸಾಮಾಜಿಕ, ಐತಿಹಾಸಿಕ ಎಂದು ಇವುಗಳನ್ನು ವಿಭಾಗಿಸಬಹುದು. ಕಾದಂಬರಿ ಪ್ರಕಾರಕ್ಕೆ ಅಪಾರವಾದ ಜನಪ್ರಿಯತೆಯನ್ನು ತಂದುಕೊಡುವ ಮೂಲಕ ಅ.ನ.ಕೃ "ಕಾದಂಬರಿ ಸಾರ್ವಭೌಮ" ಎನಿಸಿದರು. ಆದರೆ, ಲೈಂಗಿಕ ಸಂಬಂಧ ಮತ್ತು ವೇಶ್ಯಾ ಜೀವನವನ್ನು ಕುರಿತಂತೆ ಅವರು ಬರೆದ ಕೆಲವು ಕಾದಂಬರಿಗಳು ಸಾಹಿತ್ಯವಲಯದಲ್ಲಿ ಹಲವು ವಾಗ್ವಾದಗಳಿಗೆ ಕಾರಣವಾದವು. ಹಲವು ಟೀಕೆ-ಟಿಪ್ಪಣಿಗಳ ಹಣೆಪಟ್ಟಿಯನ್ನು ಕೃಷ್ಣರಾಯರಿಗೆ ಅಂಟಿಸಲಾಯಿತು. ಅ.ನ.ಕೃರವರು ಬರೆದುದೆಲ್ಲವೂ ಶ್ರೇಷ್ಠ ಸಾಹಿತ್ಯವಲ್ಲವೆಂಬ ಟೀಕೆಗಳು ಬಂದವು. ಇದರಲ್ಲಿ ಸತ್ಯಾಂಶ ಇರಬಹುದಾದರೂ ಅವುಗಳ ಸುಧೀರ್ಘ ಚರ್ಚೆ ಅಪ್ರಸ್ತುತ.

'ಜೀವನಯಾತ್ರೆ', 'ಉದಯರಾಗ', 'ಸಂಧ್ಯಾರಾಗ', 'ನಟ ಸಾರ್ವಭೌಮ-೧,೨,೩', 'ದೀಪಾರಾಧನೆ', 'ಸಾಹಿತ್ಯರತ್ನ', 'ನಗ್ನಸತ್ಯ', 'ಶನಿಸಂತಾನ','ಸಂಜೆಗತ್ತಲು', 'ಗಾಜಿನಮನೆ', 'ರಣವಿಕ್ರಮ', 'ಯಲಂಹಂಕ ಭೂಪಾಲ', -ಮೊದಲಾದ ಕಾದಂಬರಿಗಳು, 'ಅಗ್ನಿಕನ್ಯೆ', 'ಮಿಂಚು', 'ಶಿಲ್ಪಿ', 'ಕಣ್ಣುಮುಚ್ಚಾಲೆ', ಮುಂತಾದ ಕಥಾಸಂಕಲನಗಳು,

---

೧. ಅ.ನ.ಕೃ. (ಸಾಹಿತ್ಯಲೋಕದ ಪ್ರಾತಃಸ್ಮರಣೀಯರು) -ಜೆ.ಗೊ.ರಮೇಶ್- ಪು.ಸಂ.೧೦ ಉಧೃತ

'ಮದುವೆಯೋ ಮನೆಹಾಳೋ', 'ಗೋಮುಖ ವ್ಯಾಘ್ರ', 'ಜ್ವಾಲಾಮುಖಿ', ನಾಟಕಗಳು ಹೀಗೆ ಅ.ನ.ಕೃ ರವರ ಸಾಹಿತ್ಯ ವಿಫುಲವಾದುವು. ಅವರ 'ನನ್ನನ್ನು ನಾನೇ ಕಂಡ', 'ಬರಹಗಾರನ ಬದುಕು', ಅವರ ಸಾಹಿತ್ಯದ ನೆನಪುಗಳನ್ನು ಒಳಗೊಂಡಿವೆ.

ಉಜ್ವಲ ಕನ್ನಡ ಪ್ರೇಮಿಗಳು, ಅದ್ಭುತವಾಗ್ಮಿ, ಜನಪ್ರಿಯ ಕಾದಂಬರಿಕಾರ ಎಲ್ಲವೂ ಆದ ಅ.ನ.ಕೃ.ರವರು ಚಿತ್ರರಂಗದೊಂದಿಗೂ ಸಂಪರ್ಕವನ್ನು ಸಾಧಿಸಿದ್ದುದು ವಿಶಿಷ್ಟ. ಅದಲ್ಲದೇ ಸಾಹಿತ್ಯ ಅಕಾಡೆಮಿ, ಸಂಗೀತ, ನಾಟಕ, ಲಲಿತಕಲಾ ಅಕಾಡಮಿಗಳೊಡನೆ ಅವರು ಅವಿನಾಭಾವ ಸಂಬಂಧವನ್ನು ಹೊಂದಿದ್ದರು.

ಒಟ್ಟಿನಲ್ಲಿ ತ.ರಾ.ಸು ಅವರು ಹೇಳಿರುವಂತೆ–

**"ಕನ್ನಡ ಕಾದಂಬರಿಗೊಬ್ಬರೇ ಕೃಷ್ಣರಾಯರು"**[೧]

ಹೀಗೆ ಮಾಸ್ತಿ ಮತ್ತು ಅ.ನ.ಕೃರವರ ಪರಿಚಯದೊಂದಿಗೆ 'ಸುಬ್ಬಣ್ಣ', 'ಸಂಧ್ಯಾರಾಗ' ಕೃತಿಗಳ ತೌಲನಿಕ ಅಧ್ಯಯನವನ್ನು ಮಾಡಲು ಉದ್ದೇಶಿಸಿದೆ.

ಈ ನಿಟ್ಟಿನಲ್ಲಿ ಎರಡೂ ಕೃತಿಗಳಲ್ಲಿ ಕಂಡುಬರುವ ಸಾಮ್ಯತೆ, ವೈಶಮತೆ, ಇಬ್ಬರೂ ಕೃತಿಕಾರರ ಭಿನ್ನ ಮನೋಧರ್ಮ, ದೃಷ್ಟಿಕೋನಗಳು, ಪ್ರತಿನಿಧಿಸಿದ ಪಂಥಗಳು ಹಾಗೂ ಅವು ಕೃತಿಯಲ್ಲಿ ವ್ಯಕ್ತವಾಗಿರುವ ರೀತಿ– ಇವೆಲ್ಲವನ್ನು ತೌಲನಿಕ ಅಧ್ಯಯನದ ಮೂಲಕ ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.

'ಸುಬ್ಬಣ್ಣ' ಮತ್ತು 'ಸಂಧ್ಯಾರಾಗ' ಎರಡೂ ಕೃತಿಗಳ ವಸ್ತು ಒಂದೇ. ಅದು 'ಕಲಾವಿದನ ಅದರಲ್ಲೂ ಸಂಗೀತಗಾರನ ಜೀವನಕ್ಕೆ ಸಂಬಂಧಿಸಿದ್ದು. ಆದರೆ ಅದನ್ನು ನೋಡಿರುವ ದೃಷ್ಟಿ, ತಳೆದಿರುವ ಧೋರಣೆ ಬಹುತೇಕ ಭಿನ್ನ. ಎರಡೂ ಕೃತಿಗಳನ್ನು ಅಧ್ಯಯನ ಮಾಡುತ್ತಾ ಹೋದಂತೆ, ಅವುಗಳ ಪಾತ್ರಗಳು, ಆ ಪಾತ್ರಗಳ ಮನೋಧರ್ಮಗಳಲ್ಲಿ ಸಾಮ್ಯತೆ, ಭಿನ್ನತೆ, ಎರಡೂ ಅಂಶಗಳೂ ಗೋಚರಿಸುತ್ತವೆ. ಎಲ್ಲಕ್ಕಿಂತಲೂ ಹೆಚ್ಚಾಗಿ ಎರಡೂ ಕೃತಿಗಳ ಮುಖ್ಯ ಪಾತ್ರಗಳಲ್ಲಿ ಸಂಪೂರ್ಣವಾಗಿ ವ್ಯತ್ಯಾಸಗಳಿರುವುದು ಕಂಡುಬರುತ್ತದೆ. ಕಲೆ ಹಾಗೂ ಜೀವನದೃಷ್ಟಿ–ಈ ಎರಡೂ ಸಂಗತಿಗಳು ಎರಡೂ ಕೃತಿಗಳಲ್ಲೂ ಮಹತ್ತರ ಪಾತ್ರವಹಿಸಿವೆ. ಅಂತೆಯೇ ಇವು ಎರಡೂ ಕೃತಿಗಳಲ್ಲಿ ಸಂಪೂರ್ಣ ಭಿನ್ನರೀತಿಯಲ್ಲಿ ಮೂಡಿ ನಿಂತಿವೆ. ಈ ಹಿನ್ನಲೆಯಲ್ಲಿ 'ಸುಬ್ಬಣ್ಣ' ಹಾಗೂ 'ಸಂಧ್ಯಾರಾಗ' ಕೃತಿಗಳ ಮೂಲ ಆಶಯವೂ ಪರಸ್ಪರ ಬೇರೆಯಾಗಿವೆ. ಇದಕ್ಕೆ ಲೇಖಕರ ಮನೋಧರ್ಮಗಳು ಬೇರೆ–ಬೇರೆಯಾಗಿರುವುದು ಮುಖ್ಯ ಕಾರಣವೆನ್ನಬಹುದು.

'ಸುಬ್ಬಣ್ಣ'– ಮಾಸ್ತಿ ಅವರು ಬರೆದಿರುವ ಕಿರುಕಾದಂಬರಿ. ಇದನ್ನು ಅವರು 'ನೀಳ್ಗತೆ' ಎಂದಿದ್ದಾರೆ. ಶೀರ್ಷಿಕೆಯ ಮೂಲಕವೇ ಇದು ಆ ಪಾತ್ರಕ್ಕೆ ಇರುವ ಪ್ರಾಮುಖ್ಯತೆಯನ್ನು ಸೂಚಿಸುತ್ತದೆ. ಅಲ್ಲದೇ ಇದು

---

೧. ಅ.ನ.ಕೃ–ತ.ರಾ.ಸು–'ಕಾದಂಬರಿಕಾರ'–ಪು.ಸಂ–೧೦೧

ಸಂಗೀತಗಾರನ ಜೀವನಕ್ಕೆ ಸಂಬಂಧಿಸಿರುವುದು ವಿಶಿಷ್ಟ. ಇದು ಗಾಯಕನ ಬದುಕಿಗೆ ಸಂಬಂಧಿಸಿದ ಪ್ರಥಮ ಕೃತಿಯಾಗಿ, ಈ ಹಿನ್ನಲೆಯಲ್ಲಿ ನಂತರ ಬಂದ ಕೃತಿಗಳಿಗೆ ಪ್ರೇರಣೆ ನೀಡಿತು.

ವಾಸ್ತವವಾಗಿ ಇದು ಮಾಸ್ತಿಯವರ ಮಿತ್ರರಾದ ನವರತ್ನರಾಮರಾಯರು, ಅವರಿಗೆ ಹೇಳಿದ ಕಥೆ. ಅವರು ತಮ್ಮ ಪರಿಚಯದ ವೃದ್ಧನೊಬ್ಬನ ಕಡೆಯ ದಿನಗಳನ್ನು ಕುರಿತು ವಿವರಿಸಿದ ಕಥೆಯನ್ನು ಮಾಸ್ತಿಯವರು ಅವನ ಇಡೀ ಜೀವನ ಯಾತ್ರೆಗೆ ವಿಸ್ತರಿಸಿದ್ದಾರೆ. ಇಲ್ಲಿ ನೆನಪಿಡಬೇಕಾದ ಅಂಶವೆಂದರೆ, ಇದು ಗಾಯಕನ ಜೀವನದ ಕತೆ. ಆತನ ಸಂಗೀತದ ಕತೆಯಲ್ಲ. 'ಸುಬ್ಬಣ್ಣ'ನ ಆತ್ಮೋದ್ಧಾರ ಇಲ್ಲಿ ಮುಖ್ಯ. ಆತ್ಮಕೇಂದ್ರಿತವಾದ ಅವನ ವ್ಯಕ್ತಿತ್ವ, ಕ್ರಮೇಣ ವಿಕಾಸವಾಗುತ್ತಾ ಹೋಗುತ್ತದೆ. ಜೀವನದಲ್ಲಿ ಸುಬ್ಬಣ್ಣನಿಗೆ ಎದುರಾಗುವ ಕಷ್ಟನಷ್ಟಗಳು ಅವನನ್ನು ಮಾಗಿಸುತ್ತವೆ. ಪರಿಪಕ್ವವಾಗಿಸುತ್ತವೆ. ಆ ಮೂಲಕ ಅವನ ಸಂಗಿತಕ್ಕೂ ಒಂದು ಅಪೂರ್ವ ಮೆರಗು ಪ್ರಾಪ್ತವಾಗುತ್ತದೆ. ಅವನ ಬದುಕಿನುದ್ದಕ್ಕೂ, ಅವನ ಸಂಗೀತ ಜೀವವಾಹಿನಿಯಂತೆ ಹರಿದು ಬರುತ್ತದೆ. ಅವನ ಆತ್ಮೋದ್ಧಾರಕ್ಕೆ, ಅವನ ಗಾಯನ ಪೋಷಕವಾಗುತ್ತದೆ.

ಮಾಸ್ತಿಯವರು ಇಲ್ಲಿ ತಿಳಿಸಿರುವುದು ಮುಖ್ಯವಾಗಿ ಜೀವನದ ಅಸಂಗತೆಯನ್ನು. ಆದರೆ ಅವರದು ಜೀವನವಿಮುಖಿ ದೃಷ್ಟಿಕೋನವಲ್ಲ. ಜೀವನದ ನೋವು-ನಲಿವು, ಕಷ್ಟ-ನಷ್ಟಗಳು ಆತ್ಮಸಂಸ್ಕಾರಕ್ಕೆ ಸಾಧನ, ಸಂಸ್ಕಾರಗೊಂಡ ಆತ್ಮ ಮುಕ್ತಿಗೆ ಸಾಧನ. ಮುಕ್ತಿಯೆಂಬುದು ಜೀವನದಿಂದಾಚೆಗೆ ದೊರೆಯುವಂತದ್ದಲ್ಲ; ಹಾಗೆ ಅದನ್ನು ಅರಸಬೇಕಾಗಿಯೂ ಇಲ್ಲ. ಪರಿಪಕ್ವವಾದ ಹೃದಯವೇ ಅದನ್ನು ಗಳಿಸುತ್ತದೆ ಎಂಬುದು ಮಾಸ್ತಿಯವರ ದೃಷ್ಟಿ. ಅಂತೆಯೇ 'ಸುಬ್ಬಣ್ಣ'ನ ಪಾತ್ರ ಜೀವನದಿಂದ ಎಷ್ಟೇ ದೂರವಾಗಲು ಇಚ್ಛಿಸಿದರೂ, ಅದು ಸಾಧ್ಯವಾಗುವುದಿಲ್ಲ; ಕೊನೆಯವರೆಗೂ ಸುಬ್ಬಣ್ಣನ ಮನಸ್ಸು ಜೀವನದೆಡೆಗೇ ತುಡಿಯುತ್ತದೆ. ಆ ಮೂಲಕವೇ 'ಸುಬ್ಬಣ್ಣ' ಮುಕ್ತಿ ಸಾಧಿಸುತ್ತಾನೆ. ಇದನ್ನು ನಿರೂಪಕನ ಮಾತುಗಳೂ ಸ್ಪಷ್ಟಪಡಿಸುತ್ತವೆ.- **"ಮುಕ್ತಿಯೆನ್ನುವುದು ಇದ್ದರೆ ಸುಬ್ಬಣ್ಣನವರು ಅದನ್ನು ಪಡೆದಿದ್ದಾರೆ ಎನ್ನುವುದರಲ್ಲಿ ನನ್ನ ಮನಸ್ಸಿಗೆ ಯಾವ ಸಂದೇಹವೂ ಇಲ್ಲ"**[೧]

'ಸಂಧ್ಯಾರಾಗ' ಶೀರ್ಷಿಕೆಯೇ, ಇದು ಸಂಗೀತಕ್ಕೆ ಸಂಬಂಧಿಸಿದ ಕೃತಿ ಎಂದು ತಿಳಿಸುತ್ತವೆ. ಈ ಕೃತಿಯೂ ಸಹ ಕಲಾವಿದನ ಜೀವನ, ಜೀವನಸಮಸ್ಯೆ, ಸಂಗೀತಸಿದ್ಧಿ ಇವುಗಳನ್ನು ಕುರಿತದ್ದು. ಗಾಯಕನ ಜೀವನಕ್ಕಿಂತ, ಆತನ ಗಾಯನಕ್ಕೆ ಹೆಚ್ಚಿನ ಪ್ರಾಧಾನ್ಯತೆ ಇರುವುದನ್ನು ಶೀರ್ಷಿಕೆ ಸೂಚಿಸುತ್ತದೆ. ಆದರೆ ಇದು ಎಷ್ಟರ ಮಟ್ಟಿಗೆ ಸಾಧಿತವಾಗಿದೆ ಎಂಬುದನ್ನು ಅಧ್ಯಯನ ಮಾಡುವ ಅಗತ್ಯವಿದೆ.

'ಸಂಧ್ಯಾರಾಗ'ಕ್ಕೆ ಸಂಗೀತ ಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನವಿದೆ. ಇದನ್ನು 'ಪೂರ್ವೀರಾಗ' ಎಂತಲೂ ಕರೆಯಲಾಗುತ್ತದೆ. ಕಾದಂಬರಿಯ ಆರಂಭದಿಂದ ಕೊನೆಯವರೆವಿಗೂ ಈ ರಾಗ ವಿಶೇಷ ಪಾತ್ರ ವಹಿಸುತ್ತದೆ.

---

೧. ಸುಬ್ಬಣ್ಣ - ಶ್ರೀನಿವಾಸ - ಪು.ಸಂ ೭೫.

'ಸಂಧ್ಯಾ-ರಾಗ' - ಇದು ಕೇವಲ ರಾಗ ಒಂದರ ಹೆಸರು ಮಾತ್ರವಲ್ಲ, ಬದಲಿಗೆ ಇದು ಕಾದಂಬರಿಯಲ್ಲಿ ವಿಶೇಷ ಅರ್ಥವನ್ನು ಪಡೆಯುತ್ತದೆ. ಗಾಯಕನ ಸಂಗೀತ ಜೀವನ ಆರಂಭವಾಗುವುದು ಇದೇ ರಾಗದೊಂದಿಗೆ ಹಾಗೂ ಆತನ ಆತ್ಮ ಸಂಗೀತದಲ್ಲಿ ಲೀನವಾಗುವುದೂ ಇದೇ ರಾಗದೊಂದಿಗೆ. ಕಾದಂಬರಿಯಲ್ಲಿ ಗಾಯಕ ತನ್ನ ಜೀವನದ ಅಂತ್ಯವನ್ನು ಕಂಡುಕೊಂಡದ್ದು 'ಸಂಧ್ಯಾರಾಗ' ಹಾಗೂ ಆ ಮೂಲಕ ಆತ ಪಡೆದ ಕಲಾಸಿದ್ಧಿ 'ಉದಯರಾಗ'. ಹೀಗಾಗಿ ಇಲ್ಲಿ 'ಸಂಧ್ಯಾರಾಗ'- ಆ ಕಲಾವಿದನ 'ಆತ್ಮಲೀನತೆಯ' 'ಸಂಗೀತ ಸಿದ್ಧಿ'ಯ ಪ್ರತೀಕವಾಗಿದೆ. ಸಂಗೀತದಲ್ಲಿ ಈ ರಾಗಕ್ಕಿರುವ ವಿಶಿಷ್ಟತೆಯನ್ನು, ಮುಂದಿನ ಅಧ್ಯಾಯಗಳಲ್ಲಿ ತಿಳಿದುಕೊಳ್ಳುವ ಪ್ರಯತ್ನ ಮಾಡಲಾಗಿದೆ.

ಅ.ನ.ಕೃರವರ ಜೀವನದೃಷ್ಟಿ ಈ ಕಾದಂಬರಿಯಲ್ಲಿ ವಿಭಿನ್ನವಾಗಿದೆ. ಇಲ್ಲಿ ಜೀವನಕ್ಕಿಂತ ಕಲೆಗೇ ಹೆಚ್ಚಿನ ಪ್ರಾಧಾನ್ಯತೆ ದೊರೆತಿದೆ; ಆದ ಮಾತ್ರಕ್ಕೆ ಕಾದಂಬರಿ, ಕೇವಲ ಸಂಗೀತದ ವಿವರಗಳಿಗೇ ಸೀಮಿತವಾಗಿಲ್ಲ, ಗಾಯಕನ ಸಂಸಾರದ ವಿವರವೂ ಬಹಳ ವಿಸ್ತಾರವಾಗಿ ಮೂಡಿ ಬಂದಿದೆ. ಆದರೆ ಇಲ್ಲಿ ಮುಖ್ಯವಾಗಿರುವುದು ಅವನ ಕಲೆ. ಅಂತೆಯೇ ಇಲ್ಲಿ ಗಾಯಕ ತನ್ನ ಇಡೀ ಜೀವನವನ್ನು ಕಲೆಗಾಗಿ ಮುಡಿಪಾಗಿಡುತ್ತಾನೆ, ಹಾಗೂ ಆ ಕಲೆಯಲ್ಲಿಯೇ ತನ್ನ ಬಾಳನ್ನು ಅಂತ್ಯಗೊಳಿಸಿಕೊಳ್ಳುತ್ತಾನೆ. ಇಲ್ಲಿ ಕಲೆ, ಜೀವನವನ್ನು ಪಕ್ಕಕ್ಕಿರಿಸಿ ಗೆಲವು ಸಾಧಿಸಿದೆ; ಜೀವನವನ್ನು ಗೌಣವಾಗಿ ನೋಡಿದೆ.

ಪೂರ್ಣಜೀವನದ ಆದರ್ಶದ ಕಡೆಗೆ ಸಾಗಿದ, ಒಬ್ಬ ಕಲಾವಿದನ ಚಿತ್ರವೇ 'ಸಂಧ್ಯಾರಾಗ'ವೆಂದು ಅ.ನ.ಕೃರವರು ಅದರ ಮುನ್ನುಡಿಯಲ್ಲಿ ಹೇಳಿದ್ದಾರೆ. ಆದರೆ ಈ ಕೃತಿಯನ್ನು ಅಧ್ಯಯನ ಮಾಡುತ್ತಾ ಹೋದಂತೆ, ಇಲ್ಲಿನ 'ಪೂರ್ಣಜೀವನ'ದ ಪರಿಕಲ್ಪನೆಯೇ ಚರ್ಚಾಸ್ಪದವೆನಿಸುತ್ತದೆ. ಇದನ್ನು ಮುಂದಿನ ಅಧ್ಯಾಯಗಳ ವಿಸ್ತಾರವಾದ ಅಧ್ಯಯನದ ಮೂಲಕ ಸ್ಪಷ್ಟಪಡಿಸಲು ಪ್ರಯತ್ನಿಸಲಾಗಿದೆ.

ಹೀಗೆ 'ಸುಬ್ಬಣ್ಣ', 'ಸಂಧ್ಯಾರಾಗ' - ಎರಡೂ ಕೃತಿಗಳಲ್ಲೂ ಸಾಮ್ಯತೆ, ಭಿನ್ನತೆ, ಎರಡೂ ಕಂಡು ಬರುತ್ತದೆ. ಮುಖ್ಯವಾಗಿ ಎರಡೂ ಕೃತಿಗಳ ಆಶಯ-ಧೋರಣೆ ಪರಸ್ಪರ ವಿರುದ್ಧವಾಗಿವೆ. ಎರಡೂ ಕಾದಂಬರಿಗಳ ಮುಖ್ಯ ಪಾತ್ರಗಳು, ಕೆಲವು ಏಕರೀತಿಯ ಸನ್ನಿವೇಶಗಳನ್ನು ಎದುರಿಸುತ್ತವೆ; ಆದರೆ ಇದಕ್ಕೆ ಎರಡೂ ಪಾತ್ರಗಳು ಪ್ರತಿಕ್ರಿಯಿಸುವ ರೀತಿ ಬೇರೆ-ಬೇರೆ. ಕಲಾವಿದರಾಗಿ ಈ ಪಾತ್ರಗಳು ಸಾಧಿಸಿದ ರೀತಿ, ಮಟ್ಟ-ಎರಡರಲ್ಲೂ ಭಿನ್ನತೆಗಳಿವೆ. ಎಲ್ಲಕ್ಕಿಂತಲೂ ಹೆಚ್ಚಾಗಿ ಜೀವನವನ್ನು ಈ ಪಾತ್ರಗಳು ಸ್ವೀಕರಿಸಿದ, ಅದರ ಕಷ್ಟಪರಂಪರೆಯನ್ನು ಎದುರಿಸಿದ ರೀತಿಯಲ್ಲಿ ಅಪಾರ ಅಂತರವಿದೆ. ಈ ಹಿನ್ನಲೆಯಲ್ಲಿ ಎರಡೂ ಕೃತಿಗಳ ತೌಲನಿಕ ಅಧ್ಯಯನವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಎರಡೂ ಕಾದಂಬರಿಗಳಲ್ಲಿ ವಿವಿಧ ರೀರಿಯ ಪಾತ್ರಗಳು ಕಂಡುಬರುತ್ತವೆ. ಇವು ಕಾದಂಬರಿಯ ಮುಖ್ಯಪಾತ್ರಗಳನ್ನೂ ಮೀರಿಸುವಂತೆ ಗೋಚರವಾಗುತ್ತವೆ. ಓದುಗರ-ಮನಸ್ಸನ್ನು ಮಿಡಿಯುವ, ಹೆಚ್ಚು ಕಾಲ ನೆನಪಿನಲ್ಲುಳಿಯುವಂತಹ ಪಾತ್ರಗಳು ಎರಡೂ ಕಾದಂಬರಿಗಳಲ್ಲಿ ಕಂಡುಬರುತ್ತವೆ.

‘ಸಂಧ್ಯಾರಾಗ’ದಲ್ಲಿ – ಒಳಿತು ಕೆಡಕುಗಳರೆಡಕ್ಕೂ ಪ್ರತೀಕವೆಬಂತಹ ಪಾತ್ರಗಳು ಮೂಡಿಬಂದಿವೆ. ಕೆಲವೊಮ್ಮೆ ಈ ಪಾತ್ರಗಳ ವರ್ತನೆ ತುಸು ಅತಿ ಎನಿಸುವುದಾದರೂ, ತಮ್ಮ ಸಹಜತೆಯನ್ನು ಉಳಿಸಿಕೊಂಡಿವೆ. ಈ ಕಾದಂಬರಿಯಲ್ಲಿ ಒಂದೆರಡು ಪಾತ್ರಗಳನ್ನು ಹೊರತು ಪಡಿಸಿ, ಉಳಿದ ಪಾತ್ರಗಳೆಲ್ಲವೂ ಒಂದು ರೀತಿಯ ಆದರ್ಶ ಸ್ಥಿತಿಯನ್ನು ಮುಟ್ಟಿವೆ. ‘ಪೂರ್ಣಜೀವನ’ದ ಸ್ಥಿತಿಯನ್ನು, ಮುಖ್ಯ ಪಾತ್ರಕ್ಕಿಂತಲೂ ಹೆಚ್ಚಾಗಿ ಸಾಧಿಸಿವೆ, ಎನ್ನಲಡ್ಡಿಯಿಲ್ಲ. ಕೇವಲ ಒಂದು ಪಾತ್ರವನ್ನು ಹೊರತು ಪಡಿಸಿ, ಉಳಿದ ಎಲ್ಲಾ ಸ್ತ್ರೀ ಪಾತ್ರಗಳೂ ಅತ್ಯುತ್ತಮ ರೀತಿಯಲ್ಲಿ ಚಿತ್ರಿಸಲ್ಪಟ್ಟಿವೆ. ಗೃಹಜೀವನದಲ್ಲಿ ಪರಿಣಿತರಾದ, ಆದರ್ಶ ಮಹಿಳಾ ಪಾತ್ರಗಳು ಹೆಚ್ಚು ಗಮನವನ್ನು ಸೆಳೆಯುತ್ತವೆ. ಇಲ್ಲಿನ ಕಥಾವಸ್ತು ಬ್ರಾಹ್ಮಣ ಕುಟುಂಬ ಒಂದರಲ್ಲಿ ನಡೆಯುವಂತದ್ದಾದರೂ, ಅಷ್ಟಕ್ಕೇ ಸೀಮಿತವಾಗಿಲ್ಲ. ಹೊಲೆಯ ರೈತರು ಮತ್ತು ಒಡೆಯರ ನಡುವಿನ ಮಧುರ ಸಂಬಂಧವನ್ನು ಅಷ್ಟೇ ಮಧುರವಾಗಿ ಚಿತ್ರಿಸುತ್ತದೆ. ಓದುಗರು ಆರ್ದ್ರವಾಗಿ ಸ್ಪಂದಿಸುವಂತೆ ಮಾಡುತ್ತದೆ.

‘ಸುಬ್ಬಣ್ಣ’ ಕೃತಿಯಲ್ಲಿ ಕೆಟ್ಟ ಪಾತ್ರಗಳು ಕಂಡುಬರುವುದೇ ಇಲ್ಲ; ಹಾಗೆಂದು ಯಾವ ಪಾತ್ರವೂ ಆದರ್ಶದ ತುತ್ತತುದಿಯನ್ನೇರಿ ಕೃತಕವಾಗಿಲ್ಲ. ಸಣ್ಣ–ಪುಟ್ಟ ದೌರ್ಬಲ್ಯಗಳನ್ನು ಒಳಗೊಂಡಂತಹ ಸಾಮಾನ್ಯ ಪಾತ್ರಗಳೇ– ಆಗಿವೆ; ಮುಖ್ಯಪಾತ್ರದ ವ್ಯಕ್ತಿತ್ವ ವಿಕಾಸಕ್ಕೆ ಹಾದಿಯನ್ನೊದಗಿಸಿವೆ. ಒಂದು ರೀತಿಯಲ್ಲಿ ಮುಖ್ಯಪಾತ್ರದ ಸಾಧನೆಗೆ ಪ್ರೋತ್ಸಾಹವನ್ನು ನೀಡದೆಯೇ ಪ್ರೇರಣೆಯನ್ನೊದಗಿಸಿರುವ ಪಾತ್ರಗಳಿರುವುದು ವಿಶಿಷ್ಟ. ಇಲ್ಲಿನ ಸ್ತ್ರೀಪಾತ್ರಗಳು ಓದುಗರ ಅಭಿಮಾನ–ಗೌರವಗಳನ್ನು ಸುಲಭವಾಗಿ ಗಳಿಸುತ್ತವೆ. ಸಂಪ್ರದಾಯದ ಚೌಕಟ್ಟಿನಲ್ಲಿ ಸಂಗೀತ ಕಲೆಯನ್ನು ವಿರೋಧಿಸುವ ಪಾತ್ರಗಳಿರುವಂತೆ, ಮುಖ್ಯಪಾತ್ರವು ಆ ಸಂಪ್ರದಾಯವನ್ನು ಮೀರಿ ವರ್ತಿಸುತ್ತದೆ. ವೇಶ್ಯೆಯ ಪಾತ್ರವೂ ಸಹ ಇಲ್ಲಿ ಗೌರವಯುತವಾಗಿ ಮೂಡಿ ಬಂದಿದೆ. ಮುಖ್ಯವಾಗಿ ಆ ಪಾತ್ರದ ಅಸ್ತಿತ್ವವನ್ನು ಮಾಸ್ತಿ ಗುರುತಿಸಿದ್ದಾರೆ. ಇದು ಮಾಸ್ತಿಯವರ ಅನನ್ಯ ದೃಷ್ಟಿ. ಇಲ್ಲಿಯೂ ಬ್ರಾಹ್ಮಣ ಕುಟುಂಬವೊಂದರ ಕಥಾವಸ್ತು ಇದ್ದರೂ, ಅದರಾಚೆಗಿನ ಹಲವು ವೈವಿಧ್ಯಮಯ ಪಾತ್ರಗಳು ಆಕರ್ಷಕವಾಗಿ ಮೂಡಿ ಬಂದಿವೆ. ಇನ್ನೂ ಕೆಲವು ಪಾತ್ರಗಳು ‘ಸುಬ್ಬಣ್ಣ’ನ ಆತ್ಮ ಸಂಸ್ಕಾರಕ್ಕೆ ಸಹಾಯಕವಾಗಲು ಮಾತ್ರವೇ ಸೃಷ್ಟಿಯಾದಂತಿವೆ.

ಎರಡೂ ಕೃತಿಗಳು ಸಂಗೀತ ಕಲೆಗೆ ಸಂಬಂಧಿಸಿದುದಾದ್ದರಿಂದ, ಸಂಗೀತದ ವಿಚಾರಗಳು ಎರಡರಲ್ಲಿ ಹೇಗೆ ಬಂದಿವೆ ಎಂಬುದೂ ಗಮನಿಸಬೇಕಾದ ಸಂಗತಿ. ‘ಸುಬ್ಬಣ್ಣ’ ಕೃತಿಯಲ್ಲಿ ಕೀರ್ತನೆಗಳು ಹೆಚ್ಚು, ಜೊತೆಗೆ ಹಿಂದೂಸ್ತಾನಿ ಸಂಗೀತದ ಸೂಕ್ಷ್ಮ ಪ್ರಸ್ತಾಪ ಬರುತ್ತದೆ. ಆದರೆ ಸಂಧ್ಯಾರಾಗದಲ್ಲಿ ಕೀರ್ತನೆಗಳ ಜೊತೆಗೆ ವಚನಗಳಿಗೂ ಹೆಚ್ಚು ಮಾನ್ಯತೆ ನೀಡಲಾಗಿದೆ. ‘ಸುಬ್ಬಣ್ಣ’ನಿಗೆ ಪಿಟೀಲು ಜೊತೆಯಾದರೆ, ‘ಸಂಧ್ಯಾರಾಗ’ದ ಲಕ್ಷ್ಮಣನಿಗೆ ತಂಬೂರಿ ಜೊತೆ. ಎರಡೂ ಕೃತಿಗಳ ಕಥಾವಸ್ತು ಅವಿಭಕ್ತ ಕುಟುಂಬವನ್ನು ಒಳಗೊಳ್ಳುತ್ತವೆ. ಅವಿಭಕ್ತ ಕುಟುಂಬದ ಸಾಮರಸ್ಯ, ನಡು–ನಡುವೆ ತಲೆದೋರುವ ಮನಸ್ತಾಪಗಳು, ಜೀವನದ ಸಾಮಾನ್ಯ ಸಂಗತಿಗಳು, ಸಾಂಸಾರಿಕ ಚಿತ್ರಗಳು ಎರಡೂ ಕಾದಂಬರಿಗಳಲ್ಲಿ ಹೇಗೆ ಪಡಿಮೂಡಿವೆ? ಎಷ್ಟು ನೈಜವಾಗಿವೆ? ಎಂಬುದದನ್ನು ಮುಂದಿನ ಅಧ್ಯಾಯಗಳಲ್ಲಿ ವಿವರವಾಗಿ ಅಧ್ಯಯನ ಮಾಡಲಾಗಿದೆ.

ಅ.ನ.ಕೃರವರಿಗೆ ಪೂರ್ವಜರ ಉತ್ತಮ ಸಂಗೀತದ ಹಿನ್ನಲೆ ಇತ್ತು; ಇದನ್ನು ಅವರು ಎಷ್ಟರಮಟ್ಟಿಗೆ ಬಳಸಿಕೊಂಡಿದ್ದಾರೆ, ಅದರಲ್ಲಿ ಎಷ್ಟು ಯಶಸ್ವಿಯಾಗಿದ್ದಾರೆ ಎಂಬುದನ್ನು ಸಹ ಈ ತೌಲನಿಕ ಅಧ್ಯಯನದ ಮೂಲಕ ತಿಳಿದುಕೊಳ್ಳಬಹುದು.

ಎರಡೂ ಕೃತಿಗಳ ನಾಯಕರು ಸಾಧಿಸಿದ ಕಲಾಸಿದ್ಧಿ, ಅವರ ವ್ಯಕ್ತಿತ್ವ, ಮಾನವೀಯತೆ, ಇವೆಲ್ಲವೂ ಭಿನ್ನವಾಗಿವೆ; ಹಾಗೂ ಇದಕ್ಕೆ ಅನುಗುಣವಾಗಿ ಆ ಪಾತ್ರಗಳು ಕಂಡಂತಹ ಅಂತ್ಯ, ಪಡೆದ ಮುಕ್ತಿ ಇವುಗಳೂ ಭಿನ್ನ ಮಾರ್ಗದಲ್ಲಿವೆ.

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ, ಎರಡೂ ಕೃತಿಗಳ ವಸ್ತು ಒಂದೇ ಆಗಿದ್ದರೂ, ಅವು ಓದುಗರಲ್ಲಿ ಮೂಡಿಸುವ ಚಿಂತನೆಗಳು ಬೇರೆ ಬೇರೆ. ಎರಡೂ ಕಲಾವಿದನ ಪಾತ್ರವೇ ಆದರೂ, ಆ ಪಾತ್ರಗಳ ಮೂಲಕ ಇಬ್ಬರೂ ಲೇಖಕರು ಸ್ಪಷ್ಟಪಡಿಸುತ್ತಿರುವ ವಿಚಾರಗಳಲ್ಲಿ ಅಗಾಧ ವ್ಯತ್ಯಾಸವಿದೆ. ಈ ವಿಚಾರಗಳು ನಮ್ಮಲ್ಲಿ ಜಿಜ್ಞಾಸೆಗಳನ್ನು ಹುಟ್ಟುಹಾಕುತ್ತವೆ. ಈ ಗೊಂದಲಗಳನ್ನು ತೌಲನಿಕ ಅಧ್ಯಯನ ಮೂಲಕ ಪರಿಹರಿಸಿಕೊಳ್ಳಲು, ಈ ನಿಬಂಧದಲ್ಲಿ ಪ್ರಯತ್ನಿಸಲಾಗಿದೆ.

**ವ್ಯಾಪ್ತಿ:**

ಮಾನವನ ಅದ್ಭುತ ಸೃಷ್ಟಿಗಳಲ್ಲಿ ಕಲೆಯೂ ಒಂದು. ಅದರ ವೈವಿಧ್ಯತೆ, ವ್ಯಾಪಕತೆಗಳ ಹರವು ಅಪಾರ. ಸಂಗೀತ ಕಲೆ, ಚಿತ್ರಕಲೆ, ನೃತ್ಯಕಲೆ–ಹೀಗೆ ಹಲವು ರೀತಿಯ ಕಲಾಪ್ರಕಾರಗಳನ್ನು ಮಾನವನ ಬದುಕನ್ನು ಆವರಿಸಿವೆ, ಮುನ್ನಡೆಸಿವೆ ಹಾಗೂ ಬದುಕಿಗೆ ಹಲವು ಆಯಾಮಗಳನ್ನು ನೀಡಿವೆ. ಮುಖ್ಯವಾಗಿ ಸಂಗೀತ ಕಲೆಯು ಅಪೂರ್ವವಾದುದು. ಬದುಕಿನ ಹಲವು ಜಂಜಡಗಳು ನೋವು–ಸಂಕಷ್ಟಗಳ ಮಧ್ಯೆ ಜೀವನೋತ್ಸಾಹವನ್ನು ಕಳೆದುಕೊಳ್ಳದೆ, ಜೀವಿಸುವಂತಹ ಶಕ್ತಿಯನ್ನು ಇದು ನಮಗೆ ನೀಡಬಲ್ಲದು; ಚೈತನ್ಯ ಆನಂದಗಳನ್ನು ನೀಡಿ, ಮನಸ್ಸನ್ನು ಮುದಗೊಳಿಸಿ ಅರಳಿಸಬಲ್ಲದು. ಇಂತಹ ಅದ್ಭುತ ಸಾಮರ್ಥ್ಯ ಸಂಗೀತಕ್ಕಿದೆ.

ಸಾವಿರಾರು ವರ್ಷಗಳ ಭವ್ಯ ಪರಂಪರೆಯನ್ನು ಹೊಂದಿರುವ, ಕನ್ನಡ ನಾಡಿನ ಸಂಸ್ಕೃತಿಗೆ 'ಸಂಗೀತ'ವೂ ತನ್ನದೇ ಆದ ಕೊಡುಗೆಯನ್ನು ನೀಡಿದೆ. ನಮ್ಮ ಸಂಸ್ಕೃತಿಯ ಅಂತಃಸತ್ವದೊಂದಿಗೆ ಹಾಸುಹೊಕ್ಕಾಗಿ ಬೆಸೆದುಕೊಂಡಿದೆ. ಅಂತೆಯೇ ಅದಕ್ಕೆ ಸಿಕ್ಕಿರುವ ಪ್ರೋತ್ಸಾಹ, ಆದರಗಳು ಕಾಲ–ಕಾಲಕ್ಕೆ ತಕ್ಕಂತೆ ಬೇರೆ–ಬೇರೆ ರೀತಿಯದ್ದಾಗಿದೆ.

ರಾಜ–ಮಹಾರಾಜರ ಆಸ್ಥಾನಗಳಲ್ಲಿ ಕಲೆ–ಕಲಾವಿದರುಗಳಿಗೆ ಆಶ್ರಯವಿತ್ತು, ಸಾಕಷ್ಟು ಮನ್ನಣೆಯೂ ದೊರೆಯುತ್ತಿತ್ತು. ಒಡೆಯರ ಕಾಲದಲ್ಲಿ ಸಾಂಸ್ಕೃತಿಕ ರಾಜಧಾನಿಯಾದ ಮೈಸೂರು, ಹಲವು ಕಲಾವಿದರುಗಳಿಗೆ ಸೂಕ್ತ ಅವಕಾಶ, ಪ್ರೇರಣೆಗಳನ್ನು ಒದಗಿಸಿತ್ತು.

ಈ ವಿವರಗಳನ್ನು ಮಾಸ್ತಿಯವರ 'ಸುಬ್ಬಣ್ಣ' ಕೃತಿಯೇ ನೀಡುತ್ತದೆ.

**"ಶ್ರೀ ಮನ್ಮಹಾರಾಜ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ಮೈಸೂರು ಸಿಂಹಾಸನವನ್ನು ಅಲಂಕರಿಸಿದ್ದ ಕಾಲದಲ್ಲಿ ಮೈಸೂರಿನ ಆಸ್ಥಾನವು ಎಂದಿಗಿಂತಲೂ ವಿಶೇಷವಾಗಿ ಸಮಸ್ತ ವಿದ್ವಾಂಸ ರಸಿಕ ಕಲಾಕೋವಿದರಿಗೆ ಆಶ್ರಯಸ್ಥಾನವಾಗಿತ್ತು"**[೧]

ಆ ಸಂದರ್ಭದಲ್ಲಿ ವಿವಿಧ ರೀತಿಯ ಕಲೆಗಳಿಗೆ ಸಂಬಂಧಿಸಿದಂತೆ ಅತಿಶಯವಾದ ಪ್ರಭಾವ ಹೊಂದಿತ್ತು. ಅರಮನೆಯ ಪ್ರಭಾವ ಇಲ್ಲದ ಕಲೆಗಾರರು ಯಾರೂ ಇರಲಿಲ್ಲವೆಂಬಂತಹ ವಾತಾವರಣ ನಿರ್ಮಿತವಾಗಿತ್ತು. ಬೇರೆ–ಬೇರೆ ದೇಶದ ಪ್ರಸಿದ್ಧ ವಿದ್ವಾಂಸರುಗಳು ಅರಮನೆಯನ್ನು ಅವಲಂಬಿಸುತ್ತಿದ್ದರು. ಅಂತಹ ವಿದ್ವಾಂಸರುಗಳಿಗೆ ಸೂಕ್ತಮರ್ಯಾದೆಯಾಗಿ 'ಖಿಲ್ಲತ್ತು'–ಎಂದು ನೀಡಲಾಗುತ್ತಿತ್ತು. 'ಖಿಲ್ಲತ್ತು' ಎಂದರೆ ಮರ್ಯಾದೆಯ ವಸ್ತ್ರ, ಭೂಷಣ.

ಹೀಗೆ ಕಲೆ–ಕಲಾವಿದರುಗಳಿಗೆ ಎಷ್ಟೇ ರಾಜಮರ್ಯಾದೆ, ಮನ್ನಣೆಗಳಿದ್ದರೂ ಸಾಮಾನ್ಯ ಜನರಲ್ಲಿ ಸಂಗೀತದ ಬಗ್ಗೆ ಏನೋ ಒಂದು ರೀತಿಯಾದ ಭಾವನೆ ಇತ್ತು. ಮಡಿವಂತಿಕೆಯ ಚೌಕಟ್ಟು 'ಸಂಗೀತ'ವನ್ನು ಒಂದು ಉತ್ತಮ ಕಲೆಯೆಂಬಂತೆ ಸ್ವೀಕರಿಸಲು ಸಿದ್ಧವಿರಲಿಲ್ಲ. ಕಾರಣ, ಆ ಕಾಲದಲ್ಲಿ ಸಂಗೀತ ಕಛೇರಿಗಳು ಕೆಲವು ವೇಳೆ ವಿದ್ವಾಂಸರ ಮನೆಗಳಲ್ಲಿ ಹಾಗೂ ಬಹುಪಾಲು ವಾರಸ್ತ್ರೀಯರ ಮನೆಗಳಲ್ಲಿ ನಡೆಯುತ್ತಿತ್ತು, ದೊಡ್ಡ–ದೊಡ್ಡ ಸಂಗೀತದಾರರಿಗೆ ಅಲ್ಲಿ ಪ್ರವೇಶ ದೊರೆಯುತ್ತಿತ್ತು. ಹೀಗಾಗಿ ಸಂಗೀತದ ವಿಷಯದಲ್ಲಿ ಸಾಮಾನ್ಯ ಜನರಲ್ಲಿ ಅಷ್ಟೇನೂ ಒಳ್ಳೆಯ ಅಭಿಪ್ರಾಯ ಆ ಕಾಲದಲ್ಲಿ ಇರಲಿಲ್ಲ. ಸಂಗೀತಜ್ಞಾನದ–ಕಲೆಯ ಕೊರತೆ, ಅಲ್ಲಿ ಇತ್ತು.

ಆದರೆ ಕಾಲ ಬದಲಾದಂತೆ ಜನರ ಜೀವನ ರೀತಿಗಳು, ದೃಷ್ಟಿಕೋನಗಳೂ ಬದಲಾದವು; ಸಂಗೀತದ ಬಗೆಗಿನ ಅಭಿಪ್ರಾಯಗಳು ಬದಲಾದವು. ಜನರು ಕಲಾದೃಷ್ಟಿಯಿಂದ ಸಂಗೀತವನ್ನು ನೋಡಲಾರಂಭಿಸಿದರು. ಉಳಿದ ಕಲೆಗಳಂತೆಯೇ ಸಂಗೀತಕ್ಕೂ ಒಂದು ಉನ್ನತ ಸ್ಥಾನ ಪ್ರಾಪ್ತವಾಯಿತು. ಪಾಶ್ಚಾತ್ಯರಲ್ಲೂ ಸಂಗೀತ ಕಲೆಗೆ ಪ್ರೋತ್ಸಾಂಹಗಳು ದೊರೆತವು.

ಪ್ರಸ್ತುತ, ಬದುಕಿನ ಯಾಂತ್ರಿಕತೆಯಲ್ಲಿ, ಅತಿ ವೇಗದ ಜೀವನದಲ್ಲಿ ಸ್ವಲ್ಪಮಟ್ಟಿಗಿನ ಆನಂದ, ಮನಶ್ಯಾಂತಿಗಳನ್ನು ಸಂಗೀತವು ಒದಗಿಸಬಲ್ಲ ಸಿಂಚನವಾಗಿದೆಯೆಂದರೆ ತಪ್ಪಿಲ್ಲ. ಅನೇಕ ಕಲಾ ಸಂಘ ಸಂಸ್ಥೆಗಳು, ಸಂಗೀತ – ಲಲಿತಕಲಾ ಅಕಾಡೆಮಿಗಳು, ಇವುಗಳ ಅಭಿವೃದ್ಧಿಗಾಗಿ ಸಾಕಷ್ಟು ಪರಿಶ್ರಮವಹಿಸಿ ಕಾರ್ಯನಿರ್ವಹಿಸುತ್ತಿವೆ.

ಆದರೆ ಹಲವು ವರ್ಷಗಳ ಹಿಂದೆ, ಕನ್ನಡ ಸಂಗೀತಗಾರರಿಗೆ ಸೂಕ್ತ ರೀತಿಯ ಪ್ರೋತ್ಸಾಹ ದೊರೆಯುತ್ತಿಲ್ಲವೆಂಬ ಕಾರಣಕ್ಕೆ, ಉಗ್ರರೂಪದ ಚಳವಳಿಯು ನಡೆದಿತ್ತೆಂಬ ವಿಷಯ ತಿಳಿದು ಬರುತ್ತದೆ. ಈ

---

೧ 'ಸುಬ್ಬಣ್ಣ'–ಶ್ರೀನಿವಾಸ–ಪು.ಸಂ.೧

ಚಳವಳಿಯ ಸಮಯದಲ್ಲಿ ಅ.ನ.ಕೃ ಸಾಕಷ್ಟು ಹೋರಾಟ ನಡೆಸಿದ್ದರು, ಹಲವು ಕಾಲ ಪ್ರಚಾರ ನಡೆಸಿದ್ದರು. ಈ ಹಿನ್ನಲೆಯಲ್ಲಿ ಅವರು ಹೇಳಿರುವ ಮಾತುಗಳು ಹೀಗಿವೆ.

"ಕನ್ನಡ ನಾಡಿನ ಸಂಗೀತದ ಪರಿಸ್ಥಿತಿ ಸ್ವಲ್ಪವೂ ತೃಪ್ತಿಕರವಾಗಿಲ್ಲ. ಸಂಗೀತ ವಿದ್ವಾಂಸರು ಸಂಗೀತ ಸಭೆಗಳು ಕನ್ನಡ ನಾಡಿನ 'ಪಂಚಮದಳ'ಗಳಾಗಿವೆ. ಕನ್ನಡ ನಾಡಿನ ಹಣ ಹೊರಗಿನವರ ಬೊಕ್ಕಸ ತುಂಬಲು ಹರಿದು ಹೋಗುತ್ತಿದೆ.

**"ನಮ್ಮ ಗಾಯನ ಸಮಾಜಗಳನ್ನು ನಡೆಸುವ ಜನ ಕನ್ನಡಿಗರು. ಇವರ ಸಾಧನೆ, ಸಾಹಸಗಳಿಂದ ಕನ್ನಡ ಕಲಾವಿದರ ಸ್ಥಿತಿಗಳು ಸುಧಾರಿಸಬೇಕಿತ್ತು..... ಹೊರಗಿನಿಂದ ಸಂಗೀತಗಾರರನ್ನು ಕರೆಸಿಕೊಂಡು, ಹಲವು ವಿಧದಲ್ಲಿ ಹಣ ಸಂಗ್ರಹಿಸಿ, ಅವರ ಮಡಿಲು ತುಂಬುವ ಕೆಲಸ ಇವು ಮಾಡುತ್ತಿವೆ. ಈ ಸಮಾಜಗಳ ವ್ಯವಸ್ಥಾಪಕರು ತಾವು ಕನ್ನಡಿಗರಾದರೂ ಮೈಸೂರಿನವರಿಗೆ ಸಂಗೀತ ಬರುವುದಿಲ್ಲ ಎನ್ನುವ ಅಪಪ್ರಚಾರ ಕೈಗೊಂಡಿದ್ದಾರೆ...."**[೧]

೧೯೪೭ಕ್ಕೂ ಮೊದಲು ಅ.ನ.ಕೃರವರು ಹೇಳಿರುವ ಈ ಮಾತುಗಳಲ್ಲಿ, ಆಗಿನ ಕನ್ನಡ ಸಂಗೀತಗಾರರ ಪರಿಸ್ಥಿತಿ ಸೂಕ್ಷ್ಮವಾಗಿ ತಿಳಿದು ಬರುತ್ತದೆ.

ಹೀಗೆ ಸಂಗೀತಕ್ಕೆ, ಸಂಗೀತಗಾರರಿಗೆ ಬೇರೆ-ಬೇರೆ ಕಾಲಗಳಲ್ಲಿ ದೊರೆತ ಪ್ರೋತ್ಸಾಹ ಬೇರೆ-ಬೇರೆ ರೀತಿಯದ್ದು. ಅದೇ ರೀತಿ ಸಂಗೀತ ಕ್ಷೇತ್ರದಲ್ಲಿ ಹಲವಾರು ಸಾಧನೆ ಮಾಡಿದ ಶ್ರೇಷ್ಠ ಕಲಾವಿದರು ಜೀವಂತ ನಿದರ್ಶನವಾಗಿ ನಮಗೆ ಕಾಣಸಿಗುತ್ತಾರೆ.

ಸಂಗೀತವನ್ನು ಒಂದು ತಪಸ್ಸಾಗಿ ಸ್ವೀಕರಿಸಿದ, ಅದಕ್ಕಾಗಿ ತಮ್ಮನ್ನು ತಾವೇ ತೆತ್ತುಕೊಂಡ ವಿದ್ವಾಂಸರನ್ನು ನಾವು ಕಾಣಬಹುದಾಗಿದೆ. ಪಂಡಿತ್ ಭೀಮ್‌ಸೇನ್ ಜೋಶಿ, ಗಂಗೂಬಾಯಿ ಹಾನಗಲ್, ವೀಣೆದೊರೆಸ್ವಾಮಿ ಅಯ್ಯಂಗಾರ್, ಬಾಲಮುರುಳಿಕೃಷ್ಣನ್, ಪಿಟೀಲು ಚೌಡಯ್ಯ, ವಾಸುದೇವಾಚಾರ್ಯ-ಇನ್ನು ಮುಂತಾದ ಕಲಾವಿದರು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಗಣನೀಯವಾದ ಸಾಧನೆಯನ್ನು ಮಾಡಿರುವುದು ಸಮೀಚೀನ ನಿದರ್ಶನಗಳಾಗಿವೆ.

ಸಾಮಾನ್ಯವಾಗಿ ಕಲಾವಿದರ ಬಗ್ಗೆ ಕೆಲವು ಪೂರ್ವಾಗ್ರಹ ನಂಬಿಕೆಗಳು ಬೆಳೆದುಬಂದಿವೆ. ಕಲಾವಿದರು ಕುಡುಕರಾಗಿರುತ್ತಾರೆ, ಕೊಳಕರಾಗಿರುತ್ತಾರೆ, ಅಶ್ಲೀಲರಾಗಿರುತ್ತಾರೆ ಇತ್ಯಾದಿ. ಇವುಗಳ ಸತ್ಯಾಸತ್ಯತೆಗಳ ಪರಿಶೀಲನೆ ಪ್ರಸ್ತುತವಲ್ಲ. ಆದರೆ 'ಸುಬ್ಬಣ್ಣ' ಹಾಗೂ 'ಸಂಧ್ಯಾರಾಗ'ದ ಕಲಾವಿದರು, ಈ ಪೂರ್ವಾಗ್ರಹ ಭಾವನೆಗಳಿಗೆ ಸಂಪೂರ್ಣ ವಿರುದ್ಧವಾಗಿದ್ದಾರೆ.

ಸಂಗೀತದಿಂದ 'ಸುಬ್ಬಣ್ಣ' ಉದ್ಧಾರವಾಗಿ ಆತನ ಆತ್ಮಸಂಸ್ಕಾರವಾದರೆ, 'ಸಂಧ್ಯಾರಾಗ'ದ ಲಕ್ಷ್ಮಣ ಸಂಗೀತಕ್ಕಾಗಿ ತನ್ನನ್ನೇ ಅರ್ಪಿಸಿಕೊಳ್ಳುತ್ತಾನೆ. ಎರಡರಲ್ಲೂ ಕಲಾವಿದನ ಕಥೆ ಇರುವುದಾದರೂ, ಇಬ್ಬರೂ ಕಲಾವಿದರ ಮಾರ್ಗಗಳು

---

೧. ರಸಚೇತನ- 'ಹಲವು ಕಾಳಗದ ಕಲಿ'-ಮ.ಶ್ರೀಧರಮೂರ್ತಿ-ಪು.ಸಂ.-೧೯೪. - ಉಧೃತ

ಬೇರೆ-ಬೇರೆ ರೀತಿಯವು. ಅಂತೆಯೇ ಎರಡೂ ಕಾದಂಬರಿಗಳಲ್ಲಿ ದುರಂತ ಇರುವುದಾದರೂ ಅವುಗಳ ಸ್ವರೂಪ ಬೇರೆ-ಬೇರೆ.

ಈ ವಿಚಾರಗಳನ್ನು ನೋಡಿದಾಗ ಯಾವುದೇ ಕಲೆಯಾಗಲಿ ಅದು ಜೀವನಕ್ಕೆ ಎಷ್ಟು ಅವಶ್ಯಕ? ಅಥವಾ ಅದು ಜೀವನದ ಅನಿವಾರ್ಯತೆಯೇ? ಕಲೆಗಾಗಿ ಇಡೀ ಜೀವನವನ್ನು ಸಮರ್ಪಿಸಿಕೊಳ್ಳುವುದು ಎಷ್ಟು ಸಮರ್ಪಕ ಎಂಬಿತ್ಯಾದಿ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವುದು ಅಗತ್ಯವೆನಿಸುತ್ತದೆ. ಅದನ್ನು ಈ ತೌಲನಿಕ ಅಧ್ಯಯನದ ಮೂಲಕ ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.

'ಸುಬ್ಬಣ್ಣ' – 'ಸಂಧ್ಯಾರಾಗ' – ಎರಡೂ ಕೃತಿಗಳಲ್ಲೂ ವಸ್ತು, ಧೋರಣೆ, ದೃಷ್ಟಿ, ಅಭಿವ್ಯಕ್ತಿಕ್ರಮಗಳಲ್ಲಿ ಸಾಮ್ಯ, ವೈಶಮ್ಯಗಳು – ಕಂಡು ಬರುವುದರಿಂದ, ಈ ಕೃತಿಗಳ ತೌಲನಿಕ ಅಧ್ಯಯನವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಹಾಗೂ ಈ ಮೂಲಕ ಈ ಎಲ್ಲಾ ಅಂಶಗಳನ್ನು ಸ್ಪಷ್ಟಪಡಿಸಲಾಗುತ್ತದೆ.

* * *

ಅಧ್ಯಾಯ – ೨

# ಸುಬ್ಬಣ್ಣ : ವಸ್ತುವಿನ ಸ್ವರೂಪ – ಕಥಾವಿನ್ಯಾಸ

'ಸುಬ್ಬಣ್ಣ' ಕಲಾವಿದನ ಕತೆಯನ್ನು ಒಳಗೊಂಡಿರುವ ಅಪೂರ್ವ ಸಾಮಾಜಿಕ ಕಾದಂಬರಿ. ಇದನ್ನು ಮಾಸ್ತಿಯವರು 'ನೀಳ್ಗತೆ' – 'A long story' ಎಂದು ಕರೆದಿದ್ದಾರೆ. ಸುಬ್ಬಣ್ಣ ಕಲಾವಿದನಾದರೂ ಇಲ್ಲಿ ಮುಖ್ಯವಾಗಿರುವುದು ಆತನ ಬಾಳಕಥೆ, ವ್ಯಥೆ. ಅದೇ ರೀತಿ ಇಲ್ಲಿ ಆತನ ಕಲೆಗೂ ಯೋಗ್ಯಸ್ಥಾನ ದೊರೆತಿದೆ.

ಮಾಸ್ತಿಯವರೇ ಹೇಳಿರುವಂತೆ ಇದು ಅವರ ಮಿತ್ರರಾದ ನವರತ್ನ ರಾಮರಾಯರು ತಮ್ಮ ಪರಿಚಯದ ಒಬ್ಬ ವೃದ್ಧಗಾಯಕನ ಕಡೆಯ ದಿನಗಳನ್ನು ವರ್ಣಿಸಿ ಹೇಳಿದ ಕತೆ. ಈ ಬಗ್ಗೆ ನವರತ್ನ ರಾಮರಾಯರೇ ಬರೆದಿದ್ದ ಏಳು ಪುಟಗಳ ಕತೆ ಕಳೆದು ಹೋದದ್ದರಿಂದ, ಮಾಸ್ತಿಯವರೇ ಇದನ್ನು ಬರೆಯಬೇಕಾಯಿತು. ಆ ಏಳು ಪುಟಗಳ ವ್ಯಕ್ತಿಯೊಬ್ಬನ ಕಡೆಯ ದಿನಗಳ ಕಥೆ, ಮಾಸ್ತಿಯವರ ಕೈಯ್ಯಲ್ಲಿ ಇಡೀ ಜೀವನ ದರ್ಶನವಾಗಿ ಅರಳಿದೆ.

'ಸುಬ್ಬಣ್ಣ' ನ ಆತ್ಮೋದ್ಧಾರ ಕಥಾವಸ್ತು. ಮಾಸ್ತಿಯವರೇ ಹೇಳುವಂತೆ ಕಠಿಣ ಶಿಲೆಯೊಂದು ಅಪರಂಜಿಯಾದ ರೀತಿ ಇಲ್ಲಿ ವರ್ಣಿತವಾಗಿದೆ.

'ಸುಬ್ಬಣ್ಣ'ನ ಜೀವನ ಇಲ್ಲಿ ಮೂರು ಘಟ್ಟಗಳಲ್ಲಿ ಮೂಡಿಬಂದಿದೆ. ಮೊದಲ ಘಟ್ಟದಲ್ಲಿ ಸಂಗೀತಗಾರನಾಗಲು ಹೊರಟ ಆತನ ಉತ್ಸಾಹ, ಸಂಸಾರದ ಚಿತ್ರಗಳು ಬಂದಿದ್ದು, ಎರಡನೆಯ ಘಟ್ಟದಲ್ಲಿ ಆತ ಪಡೆದ ಅಲ್ಪಸುಖ, ಅಪಾರ ಕಷ್ಟ–ನಷ್ಟಗಳ ಚಿತ್ರಣವಿದೆ. ಮತ್ತು ಕೊನೆಯ ಹಾಗೂ ಮೂರನೆಯ ಘಟ್ಟ ಅವನ ಅಂತಿಮ ದಿನಗಳಿಗೆ ಮೀಸಲಾಗಿದೆ. ಸಂಪ್ರದಾಯಸ್ಥ ಮನೆತನದಲ್ಲಿ ಜನಿಸಿದ 'ಸುಬ್ಬಣ್ಣ', ಸಂಗೀತಗಾರನಾಗಲು ಹೊರಟು, ಜೀವನದ ಅಪಾರ ಕಷ್ಟಕೋಟಲೆಗಳಿಗೆ ಗುರಿಯಾಗಿ ಪಕ್ವಗೊಳ್ಳುವುದನ್ನು ಈ ಮೂರು ಘಟ್ಟಗಳಲ್ಲಿ ಮಾಸ್ತಿ ಚಿತ್ರಿಸಿದ್ದಾರೆ.

ಶ್ರೀಮನ್ಮಹಾರಾಜ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರು ಮೈಸೂರಿನ ಸಿಂಹಾಸನವನ್ನು ಅಲಂಕರಿಸಿದ್ದ ಸಮಯದಲ್ಲಿ ನಡೆದದ್ದೆಂದು ಕತೆ ಆರಂಭಗೊಳ್ಳುತ್ತದೆ. ಆಸ್ಥಾನ ಪಂಡಿತರಾದ ಪುರಾಣದ ನಾರಾಯಣಶಾಸ್ತ್ರಿಗಳಿಗೆ 'ಸುಬ್ಬಣ್ಣ' ಒಬ್ಬನೇ ಮಗ. ಆತ ತಂದೆಯಂತೆ ಸಂಸ್ಕೃತ ಕಲಿತು 'ಸುಬ್ರಹ್ಮಣ್ಯ ಶಾಸ್ತ್ರಿಗಳಾಗದೆ', ಸಂಗೀತ ಕಲಿತು 'ಸುಬ್ಬಣ್ಣ' ನಾದ. ಆತನಿಗೆ ತಂದೆಯ ಮಧುರ ಧ್ವನಿ ಇಳಿದು ಬಂತೇ ಹೊರತು ಸಂಸ್ಕೃತ ಬರಲಿಲ್ಲ. ಚಿಕ್ಕಂದಿನಲ್ಲೇ ಸುಬ್ಬಣ್ಣನಿಗೆ ಸಂಗೀತದಲ್ಲಿ ಪ್ರತಿಭೆ ಇತ್ತೆಂಬುದನ್ನು ಕೃತಿಯು ಆರಂಭದಲ್ಲೇ ಮನದಟ್ಟು ಮಾಡುತ್ತದೆ.

ಒಂದು ದಿನ ತಂದೆಯೊಡನೆ ಪ್ರಭುಗಳ ಬಳಿಗೆ ಹೋದ ಸುಬ್ಬಣ್ಣ, ಮಹಾರಾಜರ ಮುಂದೆ ರಾಗವಾಗಿ ಶ್ಲೋಕಗಳನ್ನು ಒಪ್ಪಿಸಿದ. ಮಹಾರಾಜರು ಮೆಚ್ಚಿ – "ನೀನು ಒಳ್ಳೇ ಬುದ್ಧಿವಂತ. ಚೆನ್ನಾಗಿ ಹಾಡುವುದನ್ನು

**ಕಲಿತುಕೊ. ನಿನಗೆ ಖಿಲ್ಲತ್ತು ಕೊಡುತ್ತೇವೆ[೧]"** – ಎಂದರು. ಅಂದಿನಿಂದ ಸುಬ್ಬಣ್ಣನ ಮನದಲ್ಲಿ ಸಂಗೀತ ಕಲಿಯುವ ಆಸೆ ಬಲವಾಗಿ ಬೇರೂರಿತು. ಇದು ಅವನ ಬಾಲ್ಯ ಸಹಜವಾದ ಆಸೆಯಷ್ಟೆ; ಆದರೆ ಅದು ಅವನು ಸಂಗೀತಗಾರನಾಗಲು ಮಹತ್ವದ ಪ್ರೇರಣೆಯನ್ನು ಒದಗಿಸಿತು. ಆದರೆ ಇದು ತಂದೆಗೆ ವ್ಯಥೆ, ಏಕೆಂದರೆ ಆ ಕಾಲದಲ್ಲಿ ಸಂಗೀತ ಕಲಿಯಬೇಕೆಂದರೆ, ವಾರಸ್ತ್ರೀಯರ ಮನೆಗಳಿಗೆ ಹೋಗಬೇಕಿತ್ತು. ಹೀಗಾಗಿ ಸಂಗೀತದ ಬಗ್ಗೆ ಒಂದು ರೀತಿಯ ಕೀಳು ಭಾವನೆಯಿತ್ತು. ಅದರೆ ಸುಬ್ಬಣ್ಣ ಸಂಪ್ರದಾಯಸ್ಥ ಮನೆತನದಲ್ಲಿ ಹುಟ್ಟಿಯೂ ಇವುಗಳನ್ನು ಮೀರಿದ, ಅನೇಕ ವಾರಸ್ತ್ರೀಯರ ಮನೆಗಳಿಗೂ ಹೋಗಿ ಬಂದ.

**"ಸಂಗೀತವನ್ನೇ ಆರಿಸಿಕೊಂಡಾಗ ಸುಬ್ಬಣ್ಣ ಸಾಮಾಜಿಕ ವ್ಯವಸ್ಥೆಯನ್ನೇ ಅಲುಗಾಡಿಸುತ್ತಾನೆ[೨]"** – ಎಂಬ ಮಾತು, ಸುಬ್ಬಣ್ಣ ಅಂದಿನ ಸಮಾಜದ ರೀತಿಯನ್ನು, ಸಾಂಪ್ರದಾಯಿಕತೆಯನ್ನು ಮೀರಿದ್ದನ್ನು ತಿಳಿಸುತ್ತದೆ.

ಈ ರೀತಿ ಹದಿನೈದು ವರ್ಷಗಳ ಅಂತರದಲ್ಲಿ ಸುಬ್ಬಣ್ಣ ತಕ್ಕಮಟ್ಟಿಗೆ ಸಂಗೀತದಲ್ಲಿ ಪಾರಂಗತನಾದನು. ಈ ನಡುವೆ ಅವನಿಗೆ ಮದುವೆಯೂ ಆಗುತ್ತದೆ. ಅವನ ಸಾಂಸಾರಿಕ ಜೀವನದ ಆರಂಭವನ್ನು ಕೃತಿಯು ಬಹಳ ಸರಳವಾದ ಮಾತುಗಳಲ್ಲಿ ತೆರೆದಿಡುತ್ತದೆ. ಇಲ್ಲಿಂದ ಮುಂದೆ ಅವನ ಸಂಸಾರ ಜೀವನದ ಚಿತ್ರಣ ಸಹಜವಾಗಿ ಮೂಡಿ ಬರುತ್ತದೆ.

ಆರಂಭದಲ್ಲಿ ಸುಬ್ಬಣ್ಣ ಸಂಸಾರದ ಕಡೆಗೆ ಹೊರಳುವುದೇ ಇಲ್ಲ. ಆತನ ಮಟ್ಟಿಗೆ ಹೆಂಡತಿಯೊಬ್ಬಳು ಕುತ್ತಿಗೆಗೆ ಸುತ್ತಿರುವ ಶನಿ ಮಾತ್ರ. ಈ ಸಂದರ್ಭದಲ್ಲಿ ಸುಬ್ಬಣ್ಣ, ಬಹಳ ಸಾಮಾನ್ಯನಂತೆಯೇ ವರ್ತಿಸುತ್ತಾನೆ. ಅವನ 'ನಾನತ್ವ', 'ಅಹಂಕಾರ'ದ ಭಾವನೆಗಳು ಇಲ್ಲಿ ನಿಚ್ಚಳವಾಗಿ ಗೋಚರವಾಗುತ್ತದೆ. ಈ ಆತ್ಮಕೇಂದ್ರಿತ ವ್ಯಕ್ತಿತ್ವದ ಪರಿವರ್ತನೆ ಕೃತಿಯ ಮುಂದಿನ ಘಟ್ಟವಾಗಿದೆ.

ಒಂದು ಅರ್ಥಪೂರ್ಣ ಸನ್ನಿವೇಶ 'ಸುಬ್ಬಣ್ಣ'ನನ್ನೂ ಹೆಂಡತಿ 'ಲಲಿತೆ' ಯನ್ನೂ ಒಟ್ಟಾಗಿ ಬೆಸೆಯುತ್ತದೆ. ಇದಕ್ಕೂ ಮುನ್ನ ಸುಬ್ಬಣ್ಣ ಕೇವಲ ತನ್ನ ಬಗ್ಗೆ ಮಾತ್ರ ಯೋಚಿಸುತ್ತಿದ್ದ. ತಾನು ಹಾಗೂ ತನ್ನ ಸಂಗೀತಾಭ್ಯಾಸವನ್ನು ಬಿಟ್ಟರೆ ಅವನಿಗೆ ಬೇರೆ ಪ್ರಪಂಚವೇ ಇರಲಿಲ್ಲ. ತನ್ನ ಸಂಗೀತಾಭ್ಯಾಸಕ್ಕೆ ಸೂಕ್ತ, ಪ್ರಶಾಂತ ವಾತಾವರಣ, ಶುಶ್ರೂಷೆ, ಉಪಚಾರಗಳೆಲ್ಲಾ ಅವನಿಗೆ ವಾರಸ್ತ್ರೀ ನೀಲಸಾನಿಯ ಮನೆಯಲ್ಲಿ ದೊರೆಯುತ್ತಿದ್ದುದರಿಂದ ಹೆಂಡತಿಯ ಇರುವಿಕೆ ಅವನ ಪ್ರಜ್ಞೆಯನ್ನು ಆವರಿಸಿರಲಿಲ್ಲ. ಇಂತಹ ಅಗತ್ಯಗಳಿಗೆ ಮಾತ್ರವೇ ಹೆಂಡತಿಯ ಅವಶ್ಯಕತೆಯಿದೆಯೆಂದು ಸುಬ್ಬಣ್ಣ ಭಾವಿಸಿದಂತಿತ್ತು. 'ಸುಬ್ಬಣ್ಣ'ನ ಸೀಮಿತ ವ್ಯಕ್ತಿತ್ವವನ್ನು, ಆತನ ಆಗಿನ ಮನೋಭಾವವನ್ನು ಈ ಸನ್ನಿವೇಶಗಳು ಕಟ್ಟಿಕೊಡುತ್ತವೆ.

---

೧. **'ಸುಬ್ಬಣ್ಣ' – ಶ್ರೀನಿವಾಸ – ಪು. ಸಂ. ೪)**
೨. **'ಮಾಸ್ತಿ ವೆಂಕಟೇಶ್ ಅಯ್ಯಂಗಾರ್' (ಸಣ್ಣ ಕಥೆಗಳ ಜನಕ) – ಎಲ್ಲೆಸ್ಕೆ – ಪು. ಸಂ. ೧೫)**

ಈ ನಡುವೆ ಅರಮನೆಯಲ್ಲಿ ಮಹಾರಾಜರು ಮಡಿದು, ಅಧಿಕಾರ ಬೇರೆಯವರಿಗೆ ದೊರೆಯುತ್ತದೆ. ಅರಮನೆಯಲ್ಲಿ ಸಂಗೀತಗಾರನಾಗಿ ಹಣವನ್ನು ಸಂಪಾದಿಸುವ ಸುಬ್ಬಣ್ಣನ ಆಸೆ ಕಮರಿಹೋಗುತ್ತದೆ. ಅದುವರೆಗೂ 'ಸುಬ್ಬಣ್ಣ'ನ ಆಲೋಚನೆಗಳೂ, ಆತನ ಸಂಗೀತಾಭ್ಯಾಸವು, ಅರಮನೆಯಲ್ಲಿ ಸಂಗೀತಗಾರನಾಗಿ ಸ್ಥಾನ ಪಡೆಯಬೇಕೆನ್ನುವುದಕ್ಕೆ ಮಾತ್ರ ಸೀಮಿತವಾಗಿತ್ತು. ಸಂಗೀತದಲ್ಲಿ ಸಾಧನೆ ಮಾಡಬೇಕೆಂದಾಗಲೀ, ತನ್ನಾಚೆಗಿನ ಬದುಕಿನ ಬಗ್ಗೆ ಆಲೋಚಿಸಬೇಕೆಂದಾಗಲೀ ಅವನ ಮನಸ್ಸಿಗೆ ಬಂದಿರುವುದಿಲ್ಲ.

ಒಂದು ವೇಳೆ 'ಸುಬ್ಬಣ್ಣ'ನ ಅಪೇಕ್ಷೆಯಂತೆ, ಅರಮನೆಯಲ್ಲಿಯೇ ಆತನಿಗೆ ಕೆಲಸ ದೊರೆತಿದ್ದರೆ, ಆತ 'ಅರಮನೆಯ ಸಂಗೀತಗಾರನಾಗಿ'ಯಷ್ಟೇ ಉಳಿದುಹೋಗುತ್ತಿದ್ದ; ಆದರೆ ಕೃತಿ ಅದಕ್ಕೆ ಅವಕಾಶ ಕಲ್ಪಿಸಿಲ್ಲ; ಹಾಗೂ ಆ ಮೂಲಕ ಸುಬ್ಬಣ್ಣನ ಆತ್ಮೋದ್ಧಾರಕ್ಕೆ ಹಾದಿ ನಿರ್ಮಿಸಿದೆ. ಅದಲ್ಲದೇ ಸುಬ್ಬಣ್ಣನ ಮನೆಯ ಬಡತನ; ಕೃತಿಯ ಬಹಳ ಸಣ್ಣ ಅಂಶ – ಸುಬ್ಬಣ್ಣನ ಯೋಚನಾಲಹರಿಯನ್ನೇ ಬದಲಾಯಿಸುತ್ತದೆ.

ಸುಬ್ಬಣ್ಣನ ತಾಯಿ, ಸೊಸೆಯನ್ನು ಹತೋಟಿಯಲ್ಲಿಟ್ಟುಕೊಳ್ಳಲು ಬಯಸುವುದು, ಅವಳನ್ನು ಸದಾ ನಿಂದಿಸುವುದು, ಗರ್ಭಿಣಿಯಾದ ಅವಳಿಂದ ಎಲ್ಲಾ ಕೆಲಸವನ್ನು ಮಾಡಿಸುವುದು, ತನ್ನ ಹೆಣ್ಣುಮಕ್ಕಳಿಗೆ ಅಚ್ಚುಕಟ್ಟಾಗಿ ತುಪ್ಪ – ಮೊಸರು ಬಡಿಸಿ, ಸೊಸೆಯನ್ನು ಪಕ್ಷಪಾತದಿಂದ ನೋಡುವುದು – ಇಂತಹಾ ಸಣ್ಣ ಪುಟ್ಟ ಸಂಗತಿಗಳು ಸುಬ್ಬಣ್ಣನ ಸಂಸಾರದಲ್ಲಿ ಘಟಿಸುತ್ತವೆ. ಇವು ಸಹಜವಾಗಿ ಯಾರ ಸಂಸಾರದಲ್ಲೇ ಆಗಲಿ ಘಟಿಸುವ ಸಾಮಾನ್ಯ ಸಂಗತಿಗಳು. ಆದರೆ ಸುಬ್ಬಣ್ಣ ಇವುಗಳನ್ನು ಗುರುತಿಸಿ, ಈ ಹಿನ್ನೆಲೆಯಲ್ಲಿ ತೆಗೆದುಕೊಳ್ಳುವ ನಿರ್ಧಾರ ಗಮನಾರ್ಹವಾದುದು.

ತನ್ನ ಹೆಂಡತಿಗಾಗುತ್ತಿದ್ದ ಕಷ್ಟವನ್ನು ಕೊನೆಗಾಣಿಸಬೇಕು, ತಂದೆಯ ಮೇಲೆ ಇನ್ನಷ್ಟು ಹೊರೆಯಾಗುವುದನ್ನು ತಪ್ಪಿಸಬೇಕೆಂಬ ಅವನ ಆಲೋಚನೆಗಳು, ಮುಂದಿನ ಹಂತಕ್ಕೆ ನಾಂದಿಯಾಗುತ್ತವೆ. ತನ್ನ ಗರ್ಭಿಣಿ ಹೆಂಡತಿ ಹಾಗೂ ಮಗ ಶೇಷನೊಡನೆ ಸುಬ್ಬಣ್ಣ ಮನೆಯನ್ನು ತೊರೆಯುತ್ತಾನೆ. ಅದುವರೆವಿಗೂ ತಾನೂ ತನ್ನದು – ಎಂದು ಯೋಚಿಸುತ್ತಿದ್ದ ಅವನ ಮನಸ್ಸು, ಇತರರ ಬಗೆಗೂ ಯೋಚಿಸಲಾರಂಭಿಸುತ್ತದೆ. ಇದಕ್ಕೂ ಹಿಂದೆ ಅವನ ದೃಷ್ಟಿಯಲ್ಲಿ ಪ್ರಪಂಚದ ಅಸ್ತಿತ್ವ ಬಹಳ ಸೂಕ್ಷ್ಮವಾದುದಾಗಿರುತ್ತದೆ.

**"The world around him Scarcely exists for, him"**[1]

ಮನೆಯನ್ನು ಬಿಡುವ ನಿರ್ಧಾರ ಅವನ ಅಹಂಕಾರತ್ವಕ್ಕೆ ಬಿದ್ದ ಮೊದಲ ಪೆಟ್ಟು, ಅವನ ಆತ್ಮಯಾತ್ರೆಯ ಆರಂಭ.

---

1. Masti Venkatesh Ayyanger (Kannada Writers and their works) - L. S. Sheshagiri Rao PageNo. 38)

ಮನೆಬಿಟ್ಟ ಸುಬ್ಬಣ್ಣ ಕಲ್ಕತ್ತೆಯನ್ನು ಸೇರುತ್ತಾನೆ. ಕಲ್ಕತ್ತೆಯಲ್ಲಿ ಮೂವತ್ತೈದು ವರ್ಷಗಳ ಜೀವನ ಅವನದು. ಈ ಅವಧಿ 'ಸುಬ್ಬಣ್ಣ'ನ ಜೀವನದಲ್ಲಿ ಬಹು ಮುಖ್ಯವಾದ ಘಟ್ಟ. ಸುಬ್ಬಣ್ಣನ ವ್ಯಕ್ತಿತ್ವ ಪರಿವರ್ತನೆಗೊಳ್ಳುವುದು ಈ ಹಂತದಲ್ಲೇ. ಕಲ್ಕತ್ತೆಯ ಜೀವನ ಸುಬ್ಬಣ್ಣನನ್ನು ಮಾಗಿಸುತ್ತದೆ. ಸುಬ್ಬಣ್ಣ ಮೈಸೂರನ್ನು ತೊರೆದದ್ದು ಒಂದು ಉತ್ತಮ ಸಂಸಾರವನ್ನು ರೂಪಿಸಿಕೊಳ್ಳುವ ಸಲುವಾಗಿ. ಮೈಸೂರಿನ ಮನೆ ಅವನಲ್ಲಿ ಅಸಹ್ಯವನ್ನು ಹುಟ್ಟಿಸಿರುತ್ತದೆ. ಈ ಹಿನ್ನಲೆಯಲ್ಲಿ ಆತ ಮೈಸೂರಿನೊಂದಿಗೆ ತನಗಿದ್ದ ಎಲ್ಲಾ ಸಂಬಂಧವನ್ನು ಕಳೆದುಕೊಳ್ಳುತ್ತಾನೆ. ತನ್ನ ಪ್ರಯಾಣಕ್ಕೆ ಸಹಾಯ ಮಾಡಿದ ನೀಲಸಾನಿಯ ಹಣವನ್ನು ಹಿಂತಿರುಗಿಸಿ, ತನ್ನ ಹಾಗೂ ಮೈಸೂರಿನ ಋಣವನ್ನು ಕಳೆದುಕೊಳ್ಳುತ್ತಾನೆ.

ಹರಿದ್ವಾರದ ಮೇಳವೊಂದರಲ್ಲಿ ಸುಬ್ಬಣ್ಣನಿಗೆ ತಂದೆ–ತಾಯಿಯನ್ನು ನೋಡುವ ಅವಕಾಶ ದೊರೆತರೂ, ಆತ ತನ್ನ ಹಟವನ್ನು ಬಿಡುವುದಿಲ್ಲ. ಹೆತ್ತವರ ಮೇಲಣ ಮೋಹ ಅವನನ್ನು ಅರೆಕ್ಷಣ ತಡೆದರೂ, ಅದನ್ನು ಕೊಡವಿ ನಿರ್ದಾಕ್ಷಿಣ್ಯವಾಗಿ ಹೊರಟುಬಿಡುತ್ತಾನೆ. ಈ ಹಂತದಲ್ಲೂ ಸುಬ್ಬಣ್ಣನ ವ್ಯಕ್ತಿತ್ವದಲ್ಲಿ ಬದಲಾವಣೆ ಕಂಡುಬರುವುದಿಲ್ಲ. ಆತನ ಹಟ, ತನ್ನ ನಿರ್ಧಾರಕ್ಕೇ ಅಂಟಿಕೊಳ್ಳುವ ಗುಣ – ಇವೆಲ್ಲವನ್ನೂ ಇಲ್ಲಿ ಸ್ಪಷ್ಟವಾಗಿ ಗುರುತಿಸಬಹುದು.

ಕಲ್ಕತ್ತೆಯ ಜೀವನ ಸುಬ್ಬಣ್ಣನಿಗೆ ನೀಡುವುದು ಅಲ್ಪ – ಸ್ವಲ್ಪ ಸುಖ ಮತ್ತು ಅಪಾರವಾದ ಕಷ್ಟ – ನಷ್ಟಗಳು. ಆದರೆ ಈ ಮಧ್ಯೆ ಲಲಿತ ಹಾಗೂ ಸುಬ್ಬಣ್ಣ ಹೆಚ್ಚು ಹತ್ತಿರವಾಗುತ್ತಾರೆ. ವಾಸ್ತವವಾಗಿ ಸುಬ್ಬಣ್ಣ ಯಾರೊಂದಿಗೂ ಹೊಂದಿಕೊಳ್ಳುವ ಸ್ವಭಾವದವನಲ್ಲ. ಆದ್ದರಿಂದಲೇ ಅವನಿಗೆ ಆರಂಭದಲ್ಲಿ ಕಲ್ಕತ್ತೆಯ ಜೀವನ ಅಷ್ಟೇನೂ ಸುಖವೆನಿಸುವುದಿಲ್ಲ. ಯಾವ ಸಣ್ಣ – ಪುಟ್ಟ ಅವಶ್ಯಕತೆಗಳಿಗಾಗಿ ಸುಬ್ಬಣ್ಣ ಮನೆಯನ್ನು ತೊರೆದಿದ್ದನೋ ಅವೆಲ್ಲವನ್ನು ಈಡೇರಿಸಲು, ಕಲ್ಕತ್ತೆಯಲ್ಲಿ ಅವನಿಗೆ ಸಾಧ್ಯವಾಗುತ್ತದೆ. ಕಲ್ಕತ್ತೆಯಲ್ಲಿ ಅವನಿಗೆ 'ಸಂಗೀತ'ವೇ ಆಸರೆಯಾಗುತ್ತದೆ. ಕೆಲವು ಸಂಗೀತ ಕಛೇರಿಗಳು, ಸಂಗೀತ ಪಾಠಗಳು ಅವನ ಸಂಸಾರಕ್ಕೆ ಚೈತನ್ಯ ನೀಡುತ್ತದೆ. ಒಟ್ಟಿನಲ್ಲಿ 'ಸುಬ್ಬಣ್ಣ'ನ ಮನಸ್ಸು ಸಂಪೂರ್ಣವಾಗಿ ಸಂಸಾರದಲ್ಲಿ ಕೇಂದ್ರೀಕೃತವಾಗುತ್ತದೆ.

ಇಲ್ಲಿ ಸ್ವಲ್ಪಮಟ್ಟಿಗೆ ಸುಖಿಯಾದವಳು ಲಲಿತೆಯೇ. ಬೇರೆಯವರ ಸುಖದಲ್ಲೇ ತನ್ನ ಸುಖವನ್ನು ಕಾಣುವ ಲಲಿತ, ಆತ್ಮಸಂಸ್ಕಾರದಲ್ಲಿ ಸುಬ್ಬಣ್ಣನಿಗಿಂತ ಮುಂದುವರೆದವಳು, ಪ್ರಭುದ್ಧಳು. ಒಂದು ರೀತಿಯಲ್ಲಿ ಸುಬ್ಬಣ್ಣನನ್ನು ಲಲಿತ ತಿದ್ದುತ್ತಾಳೆ, ಪರಿವರ್ತಿಸುತ್ತಾಳೆ. 'ಸುಬ್ಬಣ್ಣ'ನ ಜೀವನವನ್ನು ಕಲ್ಕತ್ತೆಯಲ್ಲಿ, ಒಂದು ವಿಭಿನ್ನ ರೀತಿಯಲ್ಲಿ ಆರಂಭ ಮಾಡಿದವಳು ಲಲಿತೆ.

ಕಲ್ಕತ್ತೆಯಲ್ಲಿ ಸುಬ್ಬಣ್ಣನಿಗೆ ಅಪಾರವಾದ ಕಷ್ಟಪ್ರವಾಹವನ್ನು ಎದುರಿಸಬೇಕಾಗಿ ಬರುತ್ತದೆ. ಒಬ್ಬನೇ ಮಗ 'ಶೇಷ' ವಿಷಮಶೀತ ಜ್ವರದಿಂದ ಮರಣಿಸುತ್ತಾನೆ. ಆವರೆಗೆ ಅವರಿಗೊಂದು ಹೆಣ್ಣು ಮಗುವಾಗಿರುತ್ತದೆ. ಆದರೆ ಅವಳು ಮದುವೆಯ ವಯಸ್ಸಿಗೆ ಬರುವ ವೇಳೆಗೆ, ಪ್ರವಾಹಕ್ಕೆ ತುತ್ತಾಗುತ್ತಾಳೆ. ಸುಬ್ಬಣ್ಣನನ್ನು – ಲಲಿತೆಯನ್ನು

ಒಂದರ –ಮೇಲೊಂದು ಕಷ್ಟಗಳು ಆವರಿಸುತ್ತವೆ. ಈ ಸಂದರ್ಭದ ಅವರ ನೋವು–ಆಘಾತಗಳನ್ನು ನಿರೂಪಕರು ಚಿತ್ರವತ್ತಾಗಿ ಕಟ್ಟಿಕೊಡುತ್ತಾರೆ.

**"ಲಲಿತೆಯೂ ಸುಬ್ಬಣ್ಣನೂ ಕತ್ತಲಲ್ಲಿ ಒಂಟಿಯಾಗಿ ಸಿಕ್ಕಿಕೊಂಡ ಮಕ್ಕಳಂತೆ ಎದೆಯೊಡೆದು ನಿಂತರು"**[೧]

ಅವರ ಏಕಾಂಗಿತನವನ್ನೂ, ಅನಾಥಪ್ರಜ್ಞೆಯನ್ನೂ, ಪರಕೀಯ ಪ್ರಜ್ಞೆಯನ್ನು ಇದಕ್ಕಿಂತ ಹೆಚ್ಚಿನ ಮಾತುಗಳಲ್ಲಿ ವರ್ಣಿಸುವುದು ಸಾಧ್ಯವಿಲ್ಲವೆನಿಸುತ್ತದೆ.

ಈ ನಡುವೆ ಲಲಿತೆಯೂ ಕಾಯಿಲೆಗೆ ತುತ್ತಾಗಿ, ಊರಿಗೆ ಮರಳ ಬೇಕೆಂಬ ಇಚ್ಛೆಯನ್ನು ವ್ಯಕ್ತಪಡಿಸುತ್ತಾಳೆ. ಆದರೆ ಸುಬ್ಬಣ್ಣ ಒಪ್ಪುವುದಿಲ್ಲ; ಎಲ್ಲೋ ಒಂದು ಕಡೆ ಇದ್ದು ಕಣ್ಣುಮಚ್ಚಿಕೊಂಡರಾಯಿತು ಎಂದುಕೊಳ್ಳುತ್ತಾನೆ. ಇಲ್ಲಿ ಅವನ ಹಟವಿಲ್ಲ, ಅಹಂಕಾರತ್ವವೂ ಗೋಚರಿಸುವುದಿಲ್ಲ; ಬದಲಿಗೆ, ಜೀವನದಲ್ಲಿ ಬರುವುದನ್ನೆಲ್ಲಾ ಬಂದಂತೆಯೇ ಸ್ವೀಕರಿಸುವ ಮನಸ್ಥಿತಿ ತೋರಿಬರುತ್ತದೆ. ಅವನು ಅನುಭವಿಸಿದ ಶೋಕ ಪರಂಪರೆ, ಅವನನ್ನು ಸಾಕಷ್ಟು ಮಾಗಿಸುತ್ತದೆ.

ಲಲಿತಳ ಕೊನೆಯ ದಿನಗಳಲ್ಲಿ ಸುಬ್ಬಣ್ಣ ಅವಳನ್ನು ಮಗುವಿನಂತೆಯೇ ನೋಡಿಕೊಳ್ಳುತ್ತಾನೆ. ಹೆಂಡತಿಯನ್ನು 'ಕುತ್ತಿಗೆಗೆ ಸುತ್ತಿದ ಶನಿ' ಎಂದು ಭಾವಿಸಿದ್ದ ಸುಬ್ಬಣ್ಣನಿಗೂ, ಈಗಿನ ಸುಬ್ಬಣ್ಣನಿಗೂ ವ್ಯಕ್ತಿತ್ವದಲ್ಲಿ ಸಾಕಷ್ಟು ಅಂತರವಿದೆ. ಕೊನೆಗೆ ಲಲಿತೆ ಸತ್ತಾಗಲೂ ಸುಬ್ಬಣ್ಣ ಅಳುವುದಿಲ್ಲ. ಅವನ ಚಿಂತನೆಗಳು ಆತ್ಮವಿಮರ್ಶೆಯತ್ತ ವಾಲುತ್ತದೆ. ಇತರರ ಒಳ್ಳೆಯತನವನ್ನು ಗುರುತಿಸುವುದರೊಂದಿಗೆ, ತನ್ನಲ್ಲಿನ ಲೋಪ–ದೋಷಗಳನ್ನೂ ಅರಿಯುವ ಹಂತಕ್ಕೆ ಬರುತ್ತಾನೆ. ದೇವರಲ್ಲಿ ನಂಬಿಕೆಯೇ ಇಲ್ಲದಿದ್ದ ಸುಬ್ಬಣ್ಣ ಹೆಂಡತಿ ನಂಬಿಕೆಯಿಟ್ಟಿದ್ದಳೂ ಎಂಬ ಕಾರಣಕ್ಕೇ ತಾನೂ ದೇವರಲ್ಲಿ ನಂಬಿಕೆಯಿಡುತ್ತಾನೆ.

ಇಲ್ಲಿಂದ ಮುಂದೆ 'ಸುಬ್ಬಣ್ಣ' ಶೂನ್ಯತ್ವದ ಕಡೆಗೆ ಸರಿಯುತ್ತಾನೆ. ನಾವು ಹುಟ್ಟುವ ಕಾರಣವೇನು? ಬಾಳುವ ರೀತಿಯಾವುದು? ನಮ್ಮ ಜೀವನ ಪ್ರಯಾಣ ಎಲ್ಲಿಂದ ಆರಂಭವಾಯಿತು, ಎಲ್ಲಿಗೆ ಸಾಗುತ್ತಿದೆ? ಎಂಬ ಜಿಜ್ಞಾಸೆಗಳು ಅವನನ್ನು ಕಾಡುತ್ತವೆ. ಆ ಜಿಜ್ಞಾಸೆಗಳಿಗೆ ಅವನು ಕಂಡುಕೊಳ್ಳುವ ಉತ್ತರ – ಸತ್ಯ

**"ಜೀವನವೆನ್ನುವುದು ಸಭಿಕರಿಗೆ ವೇಷ ಹಾಕಿ ಕುಣಿಸುವ ಬಯಲು ನಾಟಕ"**[೨]

ಸುಬ್ಬಣ್ಣನ ಜೀವನದ ಕೊನೆಯ ಘಟ್ಟ ಪ್ರಾರಂಭವಾಗುವುದು ಹೀಗೆ. ಸಂಸಾರದ ಆವರಣವನ್ನು ತೊರೆದು, ವಿಶಾಲ ಪ್ರಪಂಚಕ್ಕೆ ಅವನ ವ್ಯಕ್ತಿತ್ವ ತೆರೆದುಕೊಳ್ಳುತ್ತದೆ; ಅದೂ ಜೀವನದ ಎಲ್ಲಾ ಸಂಗತಿಗಳಿಂದಲೂ ಬೇರ್ಪಡಲು ಇಚ್ಛಿಸುವ ಒಬ್ಬ ವಿರಾಗಿಯಂತೆ.

ತನ್ನ ಸಂಸಾರಕ್ಕೆಂದು ಕೂಡಿಟ್ಟಿದ್ದ ಎಲ್ಲಾ ವಸ್ತುಗಳನ್ನೂ ಸುಬ್ಬಣ್ಣ ದಾನ ಮಾಡುತ್ತಾನೆ, ತನ್ನ ಪಿಟೀಲೊಂದನ್ನು

---

೧. 'ಸುಬ್ಬಣ್ಣ' – 'ಶ್ರೀನಿವಾಸ' – ಪು.ಸಂ – ೪೧ /
೨. 'ಸುಬ್ಬಣ್ಣ' – 'ಶ್ರೀನಿವಾಸ' – ಪು.ಸಂ – ೪೨

ಬಿಟ್ಟು – ಜೀವನದಿಂದ ಎಷ್ಟೇ ಬೇರ್ಪಡಲು ಸುಬ್ಬಣ್ಣ ಪ್ರಯತ್ನಿಸಿದರೂ ಅದು ಸಾಧ್ಯವಾಗಿಲ್ಲ. ಯಾವುದನ್ನು ತೊರೆದರೂ ಸಂಗೀತವನ್ನು ಅವನು ತೊರೆದಿಲ್ಲ. ಇವೆಲ್ಲವುಗಳ ಮಧ್ಯೆ ಅವನು ಜೀವನ ಪ್ರೀತಿಯನ್ನು ಉಳಿಸಿಕೊಂಡಿದ್ದರೆ, ಅದು ಸಂಗೀತದ ಕಾರಣದಿಂದ ಅಥವಾ ಸಂಗೀತಕ್ಕಾಗಿ – ಎಂದರೆ ತಪ್ಪಿಲ್ಲ. ಇಲ್ಲಿ ಜೀವನಕ್ಕೂ ಸುಬ್ಬಣ್ಣನಿಗೂ ಇರುವ ಏಕೈಕ ತಂತು, 'ಅವನ ಪಿಟೀಲು' – ಎಂಬುದನ್ನು ಈ ಸನ್ನಿವೇಶ ಸ್ಪಷ್ಟಪಡಿಸುತ್ತದೆ. ಈ ತಂತುವೇ ಸುಬ್ಬಣ್ಣನನ್ನು ಮುಂದೆ ಇತರ ಮಾನವ ಸಂಬಂಧಗಳೊಂದಿಗೆ ಬೆಸೆಯುತ್ತದೆ ಎಂಬುದನ್ನು ಕೃತಿಯು ಸ್ಪಷ್ಟ ಪಡಿಸುತ್ತಾ ಹೋಗುತ್ತದೆ.

ಈ ಶೂನ್ಯತ್ವದ ಸ್ಥಿತಿಯಲ್ಲಿ ಸುಬ್ಬಣ್ಣ, ಯಾವುದೋ ಊರಿಗೆ ಪ್ರಯಾಣ ಬೆಳೆಸುತ್ತಾನೆ. ಆ ಪ್ರಯಾಣ ಮುಟ್ಟಿದ್ದು ಬೊಂಬಾಯಿಯನ್ನು ದಿಕ್ಕು ತೋಚದೆ 'ಸುಬ್ಬಣ್ಣ' ಮಿಠಾಯಿ ಅಂಗಡಿಯ ಮುಂದೆ ನಿಂತು ಪಿಟೀಲು ಬಾರಿಸುತ್ತಾನೆ. ಅರಮನೆಯಲ್ಲಿ ತನ್ನ ಕಛೇರಿ ನಡೆಸಲು ಬಯಸುವ ಸುಬ್ಬಣ್ಣ, ಮಿಠಾಯಿ ಅಂಗಡಿ ಮುಂದೆ ಪಿಟೀಲು ಬಾರಿಸುವ ಸುಬ್ಬಣ್ಣ – ಇಬ್ಬರನ್ನೂ ಇಲ್ಲಿ ತುಲನೆ ಮಾಡಿ ನೋಡಬಹುದು. ತನ್ನ ಸಂಗೀತದ ಬಗ್ಗೆಯಾಗಲೀ, ತನ್ನ ಬಗ್ಗೆಯಾಗಲೀ ಸುಬ್ಬಣ್ಣನಿಗೆ ಹಮ್ಮು–ಬಿಮ್ಮುಗಳಿಲ್ಲ. ಆದ್ದರಿಂದಲೇ ಸಾಹುಕಾರನು ತನ್ನ ಮನೆಗೆ ಬರಬೇಕೆಂದು ಕೇಳಿಕೊಂಡಾಗ, ಸುಬ್ಬಣ್ಣ ಒಪ್ಪುತ್ತಾನೆ. ಅಲ್ಲಿ ಸಾಹುಕಾರನ ಮಗು ಹಣ್ಣುಕೊಟ್ಟಾಗ, ತನ್ನ ಮಗುವನ್ನು ಸುಬ್ಬಣ್ಣ ಜ್ಞಾಪಿಸಿಕೊಳ್ಳುತ್ತಾನೆ. ಅಲ್ಲದೇ ಬಹುಕಾಲದಿಂದಲೂ ಹೃದಯದೊಳಗೆ ಅದುಮಿಟ್ಟಿದ್ದ ತಂದೆ–ತಾಯಿಯನ್ನು ನೋಡಬೇಕೆಂಬ ಬಯಕೆ ಅವನನ್ನು ಕಾಡುತ್ತದೆ. ಈ ಕರೆಗೆ ಸುಬ್ಬಣ್ಣ ಓಗೊಡುತ್ತಾನೆ.

ಸುಬ್ಬಣ್ಣನನ್ನು ಸ್ವಾಗತಿಸುವುದಕ್ಕೆ ಮೈಸೂರಿನಲ್ಲಿ ಯಾರೂ ಇರುವುದಿಲ್ಲ. ತಂದೆ–ತಾಯಿ ತೀರಿಹೋದ ಸುದ್ದಿಯನ್ನು ಸುಬ್ಬಣ್ಣ ಕೇಳಬೇಕಾಗಿ ಬರುತ್ತದೆ. ತಂದೆ–ತಾಯಿಯರ ಹೆಸರಿನಲ್ಲಿ ತರ್ಪಣವನ್ನು ಬಿಟ್ಟು – ಇದು ತಾನು ಅವರ ಮಗನಾದುದಕ್ಕೆ ನೀಡುತ್ತಿರುವ ಉತ್ತರಕ್ರಿಯೆ – ಎಂದು ಭಾವಿಸಿಕೊಳ್ಳುತ್ತಾನೆ. ತಂದೆ–ತಾಯಿಗಳಿಗೆ ಮಗನಾಗಿ ಮಾಡಬೇಕಾದ ಕರ್ತವ್ಯಗಳೇನನ್ನೂ ಮಾಡಿಲ್ಲವೆಂಬ ಅವನ ತಿಳುವಳಿಕೆ ಸರಿಯಾಗಿಯೇ ಇದೆ. ತಾನು ಇತರರಿಗೆ ಏನನ್ನೂ ಮಾಡಿಲ್ಲವೆಂಬ ಅರಿವು –ವ್ಯಥೆ ಅವನಿಗಿದೆ.

**"ಇವು ಒಂದೊಂದು ಅವನು ತನ್ನ ಅಹಂ (Ego) ಅನ್ನು ಮರೆತು ವಿರಕ್ತಿಯ ಕಡೆಗೆ ಇಟ್ಟ ಹೆಜ್ಜೆಗಳು"**[೧]

ಸುಬ್ಬಣ್ಣನ ಮನಸ್ಸು ವಿರಕ್ತಿಯತ್ತ ವಾಲುತ್ತಿತ್ತು. ಆದರೂ ಜೀವನದ ಸೆಳೆತಗಳಿಗೆ ಸುಬ್ಬಣ್ಣ ಮಿಡಿಯುತ್ತಲೇ ಇದ್ದ. ತನ್ನ ಜೀವಿತದ ಕಡೆಯ ದಿನಗಳನ್ನು ಹೆಚ್ಚು ಜನಸಂದಣಿ ಇಲ್ಲದ 'ತೊರೆಯಪುರ'ದಲ್ಲಿ ಕಳೆಯಲು ಸುಬ್ಬಣ್ಣ ನಿರ್ಧರಿಸುತ್ತಾನೆ. ಇಲ್ಲಿಯೂ ಜನಜೀವನದಿಂದ ದೂರಾಗಿ ನಿಲ್ಲುವ ಅವನ ಮನೋಭಾವವೇ ಗೋಚರಿಸುತ್ತದೆ. 'ತೊರೆಯಪುರ' ಎಂಬ ಹೆಸರೂ ಅದನ್ನೇ ಸೂಚಿಸಿದೆ.

---

೧. 'ಶ್ರೀನಿವಾಸ' – ಸುಬ್ಬಣ್ಣ – ಪ್ರೊ. ಎ. ಎಸ್. ಮೂರ್ತಿರಾವ್ – ಪು. ಸಂ ೯೮.

ಸುಬ್ಬಣ್ಣ ನಿರ್ಭಾವುಕ ಸ್ಥಿತಿಯನ್ನು ಮುಟ್ಟಿದ್ದರೂ, ತೊರೆಯಪುರದಲ್ಲಿ ಅವನನ್ನು ಏಕಾಂಗಿತನ, ಅನಾಥಪ್ರಜ್ಞೆಗಳು ಕಾಡುತ್ತವೆ. ಇಂತಹ ಏಕಾಂಗಿತನವನ್ನು ಪ್ರತಿಯೊಬ್ಬರೂ ತಮ್ಮ ಜೀವನದ ಒಂದಲ್ಲ ಒಂದು ಹಂತದಲ್ಲಿ ಅನುಭವಿಸಲೇಬೇಕಾಗುತ್ತದೆ ಎಂಬ ತಿಳುವಳಿಕೆಯನ್ನು ಕೃತಿಯು ಈ ಸನ್ನಿವೇಶದ ಮೂಲಕ ಮನವರಿಕೆ ಮಾಡಿಕೊಡುತ್ತದೆ. ಆದರೆ ಸುಬ್ಬಣ್ಣ ಆ ಭಯದಿಂದ ಬಹುಬೇಗ ಹೊರಬರುತ್ತಾನೆ. ಆ ಭಯದಿಂದ ಹೊರಬರಲು ಕಾರಣನಾದವನು ನಟುವರ ವೆಂಕಟರಮಣ. ವಿರಕ್ತಿಯತ್ತ ವಾಲುತ್ತಿದ್ದ ಸುಬ್ಬಣ್ಣನನ್ನು ಮತ್ತೆ ಮನುಷ್ಯ ಸಂಬಂಧದ ನೆಲೆಗೇ ಎಳೆದು ತಂದವನು.

ಆರಂಭದಲ್ಲಿ 'ಸುಬ್ಬಣ್ಣ' ವೆಂಕಟರಮಣನೊಂದಿಗೆ ಅಷ್ಟಾಗಿ ಸ್ಪಂದಿಸುವುದಿಲ್ಲ. ಸ್ವಲ್ಪ ಬಿಗುವಾಗಿಯೇ ನಡೆದುಕೊಳ್ಳುತ್ತಾನೆ. ತನ್ನನ್ನು ಮರೆತು, ವೆಂಕರಮಣನೊಡನೆ ಸ್ಪರ್ಧೆಗಿಳಿಯುತ್ತಾನೆ. ಅನಂತರ ಸುಬ್ಬಣ್ಣನಿಗೆ ತನ್ನ ತಪ್ಪಿನ ಅರಿವಾಗುತ್ತದೆ. ಜೀವನದಲ್ಲಿ ಎಲ್ಲವನ್ನೂ ಕಳೆದುಕೊಂಡರೂ ಅವನಲ್ಲಿ ಉಳಿದಿದ್ದು ಸಂಗೀತದ ಬಗೆಗಿನ ಒಂದು ಹೆಮ್ಮೆ. ಅದನ್ನೂ ಸಹ ದೂರಮಾಡಲು ನಿರ್ಧರಿಸಿದ ಸುಬ್ಬಣ್ಣ ಪಿಟೀಲನ್ನು ಒಡೆಯಲು ಮನಸ್ಸು ಬಾರದೆ, ನದಿಯಲ್ಲಿ ಬಿಟ್ಟುಬರುತ್ತಾನೆ. ಆದರೆ, ಪಿಟೀಲನ್ನು ಕಳೆದುಕೊಂಡಾಗಿನ ಸುಬ್ಬಣ್ಣನ ನೋವು ಯಾತನಾದಾಯಕ; ಅಂತೆಯೇ ವೆಂಕಟರಮಣ ಪಿಟೀಲನ್ನು ಮತ್ತೆ ಸುಬ್ಬಣ್ಣನ ಬಳಿಯಲ್ಲಿ ಸೇರಿಸುತ್ತಾನೆ. ಸುಬ್ಬಣ್ಣ ವೆಂಕಟರಮಣನಲ್ಲಿ ನೀಲಸಾನಿಯ ನೆನಪನ್ನು ತಂದುಕೊಳ್ಳುತ್ತಾನೆ. ಅವನಲ್ಲಿ ಗತದ ಯಾವ ಸ್ಮೃತಿಯೂ ಮಾಸಿಲ್ಲ, ಪ್ರಸ್ತುತದ ಯಾವ ಮಾನವ ಸಂಬಂಧದಿಂದಲೂ ಆತ ದೂರ ಉಳಿಯುವುದಿಲ್ಲ.

ಕೃತಿಯ ಆರಂಭದಲ್ಲಿ ತಾನು ಯಾರಿಗೂ ಬೇಡದವನಾದೆಯೆಂದು ಮನೆಬಿಡುವ ಸುಬ್ಬಣ್ಣ, ಈ ಹಂತದಲ್ಲಿ ಎಲ್ಲರಿಗೂ ಬೇಕಾದವನಾಗಿ ಬದುಕುತ್ತಾನೆ. ಹಿಂದೊಮ್ಮೆ ಸಂಗೀತವನ್ನು ತನ್ನ ಸಂಸಾರದ ನಿರ್ವಹಣೆಗಾಗಿ ಬಳಸುವ ಸುಬ್ಬಣ್ಣ, ಇಂದು ಅದನ್ನು ದೇವರ ಸೇವೆಗೆಂದು ಮುಡುಪಾಗಿಸುತ್ತಾನೆ. ಭಕ್ತಿಯ ಭಾವನೆಯೊಂದು ಆತನಲ್ಲಿ ಮೂಡುತ್ತದೆ.

ಸುಬೇದಾರರು 'ಸುಬ್ಬಣ್ಣ'ನ ಸಂಗೀತವನ್ನು ಕೇಳಬೇಕೆಂದು ಬಯಸಿದಾಗ, ಸುಬ್ಬಣ್ಣ ಒಪ್ಪುವುದಿಲ್ಲ. ಅವನ ಸಂಗೀತದ ಹೆಮ್ಮೆ ಮತ್ತೆ ಮರುಕಳಿಸಿತೇನೋ ಎನಿಸಿದರೂ; ಸುಬ್ಬಣ್ಣನ ನಿರಾಕರಣೆಗೆ ಕಾರಣ ಅದಲ್ಲ. ಈಗಾಗಲೇ ಬೇಡ-ಬೇಡವೆಂದರು ಜೀವನದ ಸಂಬಂಧಗಳು ತನ್ನನ್ನು ಆವರಿಸುತ್ತಿವೆ. ಅದರೊಂದಿಗೆ, ದೊಡ್ಡಮನುಷ್ಯರ ದೊಡ್ಡಸ್ತಿಕೆಗೆ ಸಿಕ್ಕಿಬೀಳುವುದು ಬೇಡವೆಂಬ ಕಾರಣಕ್ಕೆ. ಆದರೆ ಸುಬೇದಾರರು ತಮ್ಮ ಮಗಳಿಗೆ ಪಾಠ ಹೇಳಬೇಕೆಂದು ಕೇಳಿಕೊಂಡಾಗ, ಅವಳ ಹೆಸರು 'ಲಲಿತೆ' ಎಂಬ ಕಾರಣಕ್ಕಾಗಿಯೇ ಅದನ್ನು ಒಪ್ಪಿಕೊಳ್ಳುತ್ತಾನೆ. ಅವನ ದೃಷ್ಟಿಯಲ್ಲಿ ಹೆಂಡತಿ ಅವನನ್ನು ತಿದ್ದಲು ಬಂದ ದೇವತೆ.

ಈ ಹಂತದಲ್ಲಿ, ಸುಬ್ಬಣ್ಣನ ವರ್ತನೆಯ ಮೃದುತ್ವ, ಆತನ ಮನಸ್ಸಿನ ಪರಿಪಕ್ವ ಸ್ಥಿತಿ, ಈ ಎಲ್ಲಾ ಕಾರಣಗಳಿಂದಾಗಿ ಅತಿಶಯವಾಗುವ ಅವನ ಸಂಗೀತ ಎಲ್ಲವೂ ಮನಮುಟ್ಟುತ್ತದೆ. ಸುಬ್ಬಣ್ಣ ತನ್ನ ಕಡೆಯ ದಿನಗಳಲ್ಲಿ ಯೋಗಿಯಂತೆ, ತತ್ತ್ವಜ್ಞಾನಿಯಂತೆ ಬದುಕಿದರು ಎನ್ನುವ ನಿರೂಪಕರ ಮಾತುಗಳೂ ಅತಿಶಯವಲ್ಲ.

ಜೀವನ ನಿರ್ವಹಣೆಗೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ಪಡೆದು, ಉಳಿದದ್ದನ್ನು ನಿರಾಕರಿಸುವ ಸ್ಥಿತಿಯನ್ನು ಸುಬ್ಬಣ್ಣ ತಲುಪುತ್ತಾನೆ. ಮಾನವ ಸಂಬಂಧಗಳ ಸೆಳೆತಗಳಿಗೆ ಗುರಿಯಾದರೂ, ಅದರ ಬಂಧನಕ್ಕೆ ಸಿಲುಕಬಾರದೆಂಬ ಪ್ರಯತ್ನವನ್ನು 'ಸುಬ್ಬಣ್ಣ' ತನ್ನ ಕಡೆಯ ದಿನಗಳವರೆಗೂ ಮಾಡುತ್ತಾನೆ. ಯಾವುದೇ ಮರ್ಯಾದೆ – ಸನ್ಮಾನಗಳನ್ನು ಬಯಸದೆ, ಜನರ ಅಭಿಮಾನ – ಆತ್ಮೀಯತೆಗಳನ್ನು ಮಾತ್ರ ಉಳಿಸಿಕೊಳ್ಳಲು ಬಯಸುತ್ತಾನೆ. ಸುಬ್ಬಣ್ಣನ ವ್ಯಕ್ತಿತ್ವ ಸಂಪೂರ್ಣವಾಗಿ ಪರಿಪಕ್ವವಾಗುತ್ತದೆ. ಕೃತಿಯ ಅಂತಿಮ ಸನ್ನಿವೇಶ ಇದನ್ನು ಇನ್ನಷ್ಟು ಸ್ಪಷ್ಟಗೊಳಿಸುತ್ತದೆ.

ಸುಬೇದಾರರಿಗೆ ಬೆಂಗಳೂರಿಗೆ ವರ್ಗವಾದಾಗ, ಖಿನ್ನನಾದ 'ಸುಬ್ಬಣ್ಣ' ಸ್ವಲ್ಪ ಕಾಲ ಕಣ್ಮರೆಯಾಗುತ್ತಾನೆ. ಮನುಷ್ಯ ಸಂಬಂಧಗಳಿಂದ, ಅವುಗಳಿಂದುಂಟಾಗುವ ಭಾವನೆಗಳಿಂದ ಕಳಚಿಕೊಳ್ಳುವ ಸುಬ್ಬಣ್ಣನ ಕಡೆಯ ಪ್ರಯತ್ನವಿದು. ಕೃತಿಯ ಹಿನ್ನಲೆಯಲ್ಲಿ ಇದೊಂದು ಅದ್ಭುತ ರಸಘಟ್ಟ.

ಸುಬೇದಾರರ ಮನೆಯವರು ಪರಊರಿಗೆ ಪ್ರಯಾಣ ಬೆಳೆಸಿದಾಗ, ಮೂರು ಮೈಲಿ ದೂರದಿಂದ ಸುಬ್ಬಣ್ಣ ಓಡಿಬರುತ್ತಾನೆ, ಲಲಿತೆಯನ್ನು ಆಶೀರ್ವದಿಸಿ ಹೊರಟುಹೋಗುತ್ತಾನೆ. ಕೆಲವು ವರ್ಷಗಳು ಕಳೆದು ಸುಬ್ಬಣ್ಣ ಬೆಂಗಳೂರಿಗೂ ಭೇಟಿ ನೀಡಿ, ಲಲಿತೆಯ ಸಂಸಾರವನ್ನು ಕಂಡು ಆನಂದ ಹೊಂದುತ್ತಾನೆ. ಆ ಸಂದರ್ಭದಲ್ಲಿ ಸುಬ್ಬಣ್ಣ ಹೇಳುವ ಮಾತು –

**"ಆ ದಿನ .... ಪ್ರಾಣ ಗಾಡಿ ಹತ್ತಿರ ನಿಂತುಬಿಟ್ಟಿತು; ಊರಿಗೆ ಹಿಂದಕ್ಕೆ ಹೋದದ್ದು ಬರೆ! ಒಂದು ಹೆಣ ನೋಡಿ"**[೧]

ಸುಬ್ಬಣ್ಣ ಬದುಕಿದ ರೀತಿ ಅವನು ಜೀವನವನ್ನು ಸ್ವೀಕರಿಸಿದ ರೀತಿಯನ್ನು ತಿಳಿಯಲು ಇದೊಂದು ಮಾತು ಸಾಕಲ್ಲವೇ! ಈ ಸನ್ನಿವೇಶ ಓದುಗರನ್ನೂ ಭಾವಪರವಶವನ್ನಾಗಿಸುತ್ತದೆ.

ಕಡೆಯಲ್ಲಿ 'ಸುಬ್ಬಣ್ಣ'ನಿಗೆ ಬಾಳು ಸಾಕೆನಿಸಿದ್ದು ಅದರ ಮೇಲಿನ ಜಿಗುಪ್ಸೆಯಿಂದಲ್ಲ. ಅದರಿಂದ ಬಿಡುಗಡೆ ಬೇಕೆಂಬ ಭಾವನೆಯಿಂದ ಮಾತ್ರ.

ಸುಬ್ಬಣ್ಣನ ಜೀವನ – ವ್ಯಕ್ತಿತ್ವದ ಉದ್ಧಾರ ಇಲ್ಲಿನ ಕಥಾವಸ್ತು. ಆತನ ಆತ್ಮಯಾತ್ರೆಯ ಹಿನ್ನೆಲೆಯಲ್ಲಿಯೇ ಕಥಾಹಂದರವಿದೆ. ಆತನ ಉದ್ಧಾರದ ಕಾರಣವಾಗಿಯೇ, ಅವನ ಸಂಗೀತವೂ ಉದ್ಧಾರವಾಗುತ್ತದೆ. ಗಾನದ ಮೂಲಕ ಸರ್ವತತ್ತ್ವಗಳನ್ನೂ ತಿಳಿಯಲು ಸುಬ್ಬಣ್ಣನಿಗೆ ಸಾಧ್ಯವಾದುದು, ಆತನ ಆತ್ಮ ಸಂಸ್ಕಾರದಿಂದ.

ವ್ಯಕ್ತಿಕೇಂದ್ರಿತವಾದ ಅವನ ಬದುಕು ವಿಕಾಸವಾಗುತ್ತಾ ಹೋಗುತ್ತದೆ; ಅವನಲ್ಲಿದ್ದ ಕಾಠಿಣ್ಯತೆಯೂ ನಯವಾಗುತ್ತದೆ. ಜೀವನದಿಂದ ದೂರವಾಗಲು ಬಯಸುತ್ತಲೇ, ಪ್ರತೀ ಮಾನವ ಸಂಬಂಧವನ್ನೂ ಸ್ವೀಕರಿಸುತ್ತಾನೆ.

---

೧. ಸುಬ್ಬಣ್ಣ – ಶ್ರೀನಿವಾಸ – ಪು.ಸಂ. ೩೩

ಆ ಸಂಬಂಧಗಳು ಹುಟ್ಟು ಹಾಕಿದ ಭಾವನೆಗಳಿಗೆ ಪ್ರತಿಕ್ರಿಯಿಸುತ್ತಾನೆ. ಸ್ವಾರ್ಥ – ಅಹಂಕಾರದ ವ್ಯಕ್ತಿತ್ವದಿಂದ ಬಿಡುಗಡೆ ಪಡೆದು, ಆತ್ಮಾವಲೋಕನೆಯತ್ತ ಅವನ ವ್ಯಕ್ತಿತ್ವ ಬೆಳೆಯುತ್ತಾ ಹೋಗುತ್ತದೆ.

ಜೀವನದಲ್ಲಿ ಅಪಾರ ಕಷ್ಟ – ನಷ್ಟಗಳನ್ನು ಅನುಭವಿಸಿದ ಸುಬ್ಬಣ್ಣನ ಬದುಕು ಸಂಸ್ಕಾರಗೊಳ್ಳುತ್ತದೆ. ಆದರೆ ಈ ಸಂಕಟಗಳಿಂದ ಉಂಟಾದ ಶೂನ್ಯತ್ವವನ್ನು ಸುಬ್ಬಣ್ಣ ಮಾನವಪ್ರೇಮದಿಂದ ತುಂಬಿಕೊಂಡ. ಇದೇ ಕಾರಣಕ್ಕಾಗಿ ಆತನ ಸಂಗೀತವು ವಿಶೇಷತೆ ಪಡೆಯುತ್ತದೆ. ಸುಬ್ಬಣ್ಣ ಯೋಗಿಯಾದರೂ ಸಂಪೂರ್ಣ ವಿರಾಗಿಯಲ್ಲ, ಆತ ಜೀವನದ ಯಾವುದೇ ಹಂತದಲ್ಲೂ ಬೆನ್ನು ತಿರುಗಿಸುವುದಿಲ್ಲ; ಬದಲಿಗೆ ಅವುಗಳನ್ನೆಲ್ಲಾ ಯಶಸ್ವಿಯಾಗಿಯೇ ನಿರ್ವಹಿಸುತ್ತಾನೆ.

'ಜೀವನ ಸ್ವೀಕರಣೆ' – ಕಾದಂಬರಿಯ ಮುಖ್ಯದೃಷ್ಟಿ. ಜೀವನದ ನೋವು – ನಿರಾಸೆಗಳ ನಡುವೆ ಜೀವನೋತ್ಸಾಹವನ್ನು ಉಳಿಸಿಕೊಳ್ಳುವಂತೆ ಮಾಡುವುದು ಮಾನವ ಪ್ರೀತಿ. ಅಂತೆಯೇ ಸಂಗೀತಕ್ಕೂ ಆ ಸಾಮರ್ಥ್ಯವಿದೆ ಎಂದು ಕಾದಂಬರಿ ತಿಳಿಸಿಕೊಡುತ್ತದೆ. ಮುಕ್ತಿ, ಜೀವನ ಸಿದ್ಧಿ, ಜ್ಞಾನದ ಮಾರ್ಗಗಳು ಜೀವನಾನುಭವದಿಂದಲೇ ಪ್ರಾಪ್ತವಾಗುವಂತಹವು; ಅದರ ವಿಮುಖತೆಯಲ್ಲಿ ಅಲ್ಲ. ವ್ಯಕ್ತಿಯೊಬ್ಬನ ವ್ಯಕ್ತಿತ್ವ ಪರಿಪಕ್ವವಾಗುವುದು, ಜೀವನದ – ಸಂಸಾರದ ಆವರಣದಲ್ಲಿ, ಸಹಮಾನವ ಪ್ರೇಮ, ಆತ್ಮೀಯತೆಗಳಿಂದ – ಎಂಬುದನ್ನು ಕಾದಂಬರಿ ಧ್ವನಿಸುತ್ತದೆ. ಕಾದಂಬರಿಯಲ್ಲಿ ಸುಬ್ಬಣ್ಣನ ಆತ್ಮೋದ್ಧಾರವಾದದ್ದು ಈ ಹಿನ್ನಲೆಯಲ್ಲಿಯೇ. ಆತನ ಅಂತಃಕರಣ, ಅಭಿಮಾನಗಳು ಅವನ ಜೀವನವನ್ನು ತೊಳಗಿ ಬೆಳಗುವುದಲ್ಲದೇ, ಅವನ ಸಂಗೀತವನ್ನೂ ಅಪೂರ್ವಗೊಳಿಸುತ್ತದೆ.

ಒಟ್ಟಿನಲಿ 'ಸುಬ್ಬಣ್ಣ' ಕೃತಿಯು ಅವನ ಜೀವನಯಾತ್ರೆಯನ್ನೂ ಆತ್ಮಯಾತ್ರೆಯನ್ನೂ ಕಟ್ಟಿಕೊಡುವುದರೊಂದಿಗೆ, ಜೀವನಪ್ರೀತಿ – ಜೀವನೋತ್ಸಾಹಗಳನ್ನು ಎತ್ತಿಹಿಡಿಯುತ್ತದೆ. ಅಲ್ಲದೇ ಅನೇಕ ವಿಚಾರವಾದದ ಅಂಶಗಳೂ ಕಾದಂಬರಿಯಲ್ಲಿ ಗೋಚರಿಸುತ್ತವೆ.

* * *

ಅಧ್ಯಾಯ – ೩

# 'ಸಂಧ್ಯಾರಾಗ' : ವಸ್ತುವಿನ ಸ್ವರೂಪ, ಕಥಾವಿನ್ಯಾಸ

'ಸಂಧ್ಯಾರಾಗ' ಕಲಾವಿದನ ಜೀವನ ದುರಂತವನ್ನು ಕಥಾವಸ್ತುವನ್ನಾಗಿ ಉಳ್ಳದ್ದು. ಇದೂ ಸಹ ಒಂದು ಸಾಮಾಜಿಕ ಕಾದಂಬರಿ. ಇಲ್ಲಿ ಕಲಾವಿದನ ಜೀವನ ಸಮಸ್ಯೆ, ವಿಕಾಸ – ಇವುಗಳಿಗೆ ಮಹತ್ವದ ಸ್ಥಾನ ದೊರೆತಿದ್ದರೂ, ಸಂಸಾರ ಜೀವನದ ಚಿತ್ರಗಳು ಬಹಳ ವಿಸ್ತಾರವಾಗಿ ಮೂಡಿ ಬಂದಿದೆ. ಕಲಾವಿದ ಲಕ್ಷ್ಮಣನ ಕಲಾಜೀವನದ ಸಾಧನೆ – ಸಿದ್ಧಿಗಳ ಕಥಾವಿನ್ಯಾಸ ಹೊಂದಿದ್ದರೂ, ಶ್ರೀನಿವಾಸರಾಯರ ಸಂಸಾರ, ಜೀವನಕಲೆಗಳೂ ಇಲ್ಲಿ ಮುಖ್ಯವಾಗಿ ಕಂಡುಬರುತ್ತವೆ.

'ಸಂಧ್ಯಾರಾಗ' ಇಡೀ ಕೃತಿಯಲ್ಲಿ ಒಂದು ವಿಶಿಷ್ಟ ರೀತಿಯ ಪಾತ್ರವಹಿಸುತ್ತದೆ. 'ಸಂಧ್ಯಾರಾಗ'– 'ಪೂರ್ವೀಕಲ್ಯಾಣಿ ರಾಗ' ಎಂದು ಪ್ರಸಿದ್ಧ. ಸಂಗೀತ ಕ್ಷೇತ್ರದಲ್ಲಿ ಇದಕ್ಕೆ ಒಂದು ಮಹತ್ವದ ಸ್ಥಾನವಿದೆ. ಅದೇ ರೀತಿ ಲಕ್ಷ್ಮಣನ ಜೀವನದ ಆರಂಭದಿಂದ ಹಿಡಿದು ಆತನ ಅಂತ್ಯದವರೆಗೂ ಇದು ಅವನೊಂದಿಗೆ ಬೆಸೆದುಕೊಂಡು ಬರುತ್ತದೆ. ಆತನ ಮುಕ್ತಿಯ ಪಥಕ್ಕೆ ಹಾದಿಯನ್ನು ತೆರೆಯುತ್ತದೆ. ಲಕ್ಷ್ಮಣ ತನ್ನ ಆತ್ಮಪ್ರಣತಿಯನ್ನು ತೇಲಿಬಿಡುವುದು ಸಂಧ್ಯಾರಾಗದಲ್ಲಿ. ಆ ಮೂಲಕವೇ ಆತ ತನ್ನ ಸಂಗೀತ ಕಲೆಯಲ್ಲಿ ಒಂದಾಗುತ್ತಾನೆ. ಲಕ್ಷ್ಮಣನ ಕಲಾಸಿದ್ಧಿಯ ಪ್ರತೀಕವಾಗಿ 'ಸಂಧ್ಯಾರಾಗ' ನಿಲ್ಲುತ್ತದೆ. ಹೀಗೆ ಕಾದಂಬರಿಯ ತುಂಬೆಲ್ಲಾ 'ಸಂಧ್ಯಾರಾಗ'ದ ಛಾಪು ಮೂಡಿ ನಿಂತಿದೆ.

ಕಾದಂಬರಿಯಲ್ಲಿ ಎರಡು ತಲೆಮಾರುಗಳ ಚಿತ್ರಣ ಬರುತ್ತದೆ. ಮೊದಲನೆಯದು ಶ್ರೀನಿವಾಸರಾಯರದ್ದು, ಎರಡನೆಯದ್ದು ಲಕ್ಷ್ಮಣ ಹಾಗೂ ರಾಮಚಂದ್ರನದ್ದು. ಈ ಎರಡೂ ಪೀಳಿಗೆಗಳ ಸಾಮಾಜಿಕ ಸ್ಥಿತಿ–ಗತಿಗಳು, ಸಮಸ್ಯೆಗಳು, ಸಾಂಸಾರಿಕ ವ್ಯವಸ್ಥೆಗಳ – ಅಂತರವನ್ನು ಕಾದಂಬರಿಯು ನಮಗೆ ಪರಿಚಯಿಸುತ್ತದೆ. ವೈಚಾರಿಕತೆಗಿಂತಲೂ ಹೆಚ್ಚಾಗಿ ಭಾವುಕತೆ ಕಾದಂಬರಿಯಲ್ಲಿ ಪ್ರಾಧಾನ್ಯ ವಹಿಸಿದೆ ಎನಿಸುತ್ತದೆ.

ಹಲವಾರು ಪಾತ್ರಗಳು ಕಾದಂಬರಿಯನ್ನು ಮುನ್ನಡೆಸುತ್ತವೆ. ಇಲ್ಲಿನ ಪಾತ್ರಗಳು, ವರ್ಗೀಕರಿಸುವಷ್ಟು ಸರಳ. ಒಳ್ಳೆಯದು – ಕೆಟ್ಟದು ಎಂಬಂತೆ ಎರಡು ಗುಣಗಳ ಪ್ರತೀಕವಾಗಿ ಪಾತ್ರಗಳಿವೆ. 'ಜೀವನ' ವೆಂಬ ಕಲೆಯನ್ನು ಅತ್ಯುತ್ತಮ ರೀತಿಯಲ್ಲಿ ಸಾಧಿಸಿದ ಪಾತ್ರಗಳೂ ಇಲ್ಲಿದ್ದು, 'ಲಕ್ಷ್ಮಣ'ನ ಕಲಾಸಿದ್ಧಿಯನ್ನು ಮೀರಿಸುವಷ್ಟು ಪ್ರಬಲವಾಗಿವೆ. ಹೀಗಾಗಿ ಇಲ್ಲಿ ಕೇವಲ ಲಕ್ಷ್ಮಣನಾಗಲೀ, ಅವನ ಕಲೆಯಾಗಲೀ ಮಾತ್ರವೇ ಮುಖ್ಯವಾಗಿಲ್ಲ ಒಂದಿಡೀ ಕುಟುಂಬದ, ಸಂಪೂರ್ಣ ಜೀವನ ವಿವರಗಳನ್ನು ಕಾದಂಬರಿ ಚಿತ್ರಿಸುತ್ತಾ ಸಾಗುತ್ತದೆ. ಇದರೊಂದಿಗೇ ಆಧುನಿಕತೆಯ ಪ್ರವೇಶ – ಅವುಗಳ ಪರಿಣಾಮ, ಪತ್ರಿಕೋದ್ಯಮ, ಕೋರ್ಟು – ಕಛೇರಿ – ಇವುಗಳ ಸೂಕ್ಷ್ಮ

ವಿವರಗಳನ್ನು ಕಾದಂಬರಿ ನೀಡುತ್ತದೆ. ಒಟ್ಟಿನಲ್ಲಿ ಕಾದಂಬರಿಯ ಕೇಂದ್ರ – ಲಕ್ಷ್ಮಣನ ಸಂಗೀತಕಲೆ.

ಅ.ನ.ಕೃ ರವರು ಸಂಧ್ಯಾರಾಗದ ಮುನ್ನುಡಿಯಲ್ಲೇ ಕಾದಂಬರಿಯ ವಸ್ತು ಹಾಗೂ ಆಶಯಗಳನ್ನು ಸ್ಪಷ್ಟಪಡಿಸಿದ್ದಾರೆ.

**"ಕಲಾವಿದ ಚಿತ್ರಗಾರನಿರಲಿ, ಗಾಯಕನಿರಲಿ, ಸಾಹಿತಿಯಾಗಿರಲಿ ಜೀವನದ ಸಮಷ್ಟಿಯ ಕಡೆಗೇ ಬರುತ್ತಾನೆ. ಮೊದಲು ಯಾವುದು ಭಿನ್ನವೋ, ಅದರ ಪೂರ್ಣತೆಯು ಅವನಿಗೆ ಗೋಚರವಾಗುತ್ತದೆ. ಆಗಲೇ ಅವನ ಜೀವನ ಪೂರ್ಣವಾಗುವುದು; ಬಾಳು ಸಾರ್ಥಕವಾಗುವುದು. ಅಂತಹ ಆದರ್ಶದ ಕಡೆಗೆ ಸಾಗಿದ ಒಬ್ಬ ಕಲಾವಿದನ ಚಿತ್ರವೇ 'ಸಂಧ್ಯಾರಾಗ'"**[೧]

ಆರಂಭದಿಂದಲೂ ಸಂಗೀತದ ಜೊತೆ – ಜೊತೆಗೆ ನಡೆಯುವ ಲಕ್ಷ್ಮಣ, ಕೊನೆಗೆ ಅದರಲ್ಲಿಯೇ ತಾನೂ ಒಂದಾಗುತ್ತಾನೆ. ಇಲ್ಲಿ ಒಂದು ಅನುಕ್ರಮವನ್ನು ಕಾದಂಬರಿ ನಿರ್ಮಿಸಿಕೊಟ್ಟಿದೆ.

ಇಲ್ಲಿ ಲಕ್ಷ್ಮಣ, ಒಬ್ಬ ಪೂರ್ಣ ಕಲಾವಿದ. ಅವನಿಗೆ ಹುಟ್ಟಿನಿಂದಲೇ ಅದ್ಭುತ ಸಂಗೀತ ಪ್ರತಿಭೆಯಿರುತ್ತದೆ. ಏನಿದ್ದರೂ ಆ ಪೂರ್ಣತೆಯ ಶಿಖರದಿಂದ ಶಿಖರಕ್ಕೆ ಆತ ಸಾಗುತ್ತಾನೆ. ಆ ಪೂರ್ಣತೆಯ ಪರಮಾವಧಿಯವರೆಗಿನ ವಿವಿಧ ಹಂತಗಳನ್ನು ಕಾದಂಬರಿ ವಿವರಿಸುತ್ತದೆ.

ಲಕ್ಷ್ಮಣನ ಬಾಲ್ಯಜೀವನದ ಚಿತ್ರಗಳು, ಆತನ ಸಂಗೀತಾಭ್ಯಾಸಕ್ಕೆ ದೊರೆಯುವ ಪ್ರೋತ್ಸಾಹ ಇವುಗಳ ಒಂದು ಸುಸಂಬದ್ಧವಾದ ಆವರಣದಿಂದಾಗಿ, ಕತೆಯು ಮುಂದೆ ಅನುಕೂಲಕರವಾಗಿ ಬೆಳೆಯಲು ಸಹಾಯಕವಾಗಿವೆ.

ಶ್ರೀನಿವಾಸರಾಯರ ಸಂಸಾರವನ್ನು ಚಿತ್ರಿಸುವುದರೊಂದಿಗೆ ಕಾದಂಬರಿ ಆರಂಭಗೊಳ್ಳುತ್ತದೆ. ಶ್ರೀನಿವಾಸರಾಯರು ಮತ್ತು ಮೀನಾಕ್ಷಮ್ಮನವರದ್ದು ಅನುರೂಪ ದಾಂಪತ್ಯ. ರಾಯರು ಶ್ರೀಮಂತಿಕೆಯಲ್ಲೂ ಹೃದಯ ಶ್ರೀಮಂತಿಕೆಯಲ್ಲೂ ಎತ್ತಿದಕೈ. ಆದರೆ ಈ ಸಂಸಾರದಲ್ಲಿ ಇರುವ ಏಕೈಕ ಕೊರತೆ – ಮಕ್ಕಳಿಲ್ಲವೆಂಬುದು. ಈ ಕಾರಣಕ್ಕಾಗಿ ಮೀನಾಕ್ಷಮ್ಮ ತಮ್ಮ ಸೋದರತ್ತೆಯ ತಮ್ಮನ ಮಗಳಾದ ಸಾವಿತ್ರಿಯೊಂದಿಗೆ, ತಾನೇ ಮುಂದೆ ನಿಂತು ತನ್ನ ಗಂಡನ ಎರಡನೆಯ ಮದುವೆ ಮಾಡುತ್ತಾಳೆ. ಕಾಲಕ್ರಮೇಣ ಇಬ್ಬರಿಗೂ ಮಕ್ಕಳಾಗುತ್ತವೆ. ಸಾವಿತ್ರಿ, ರಾಮಚಂದ್ರ ಹಾಗೂ ಗೋಪಾಲನಿಗೆ ಜನ್ಮ ನೀಡುತ್ತಾಳೆ. ಮೀನಾಕ್ಷಮ್ಮನಿಗೆ ಲಕ್ಷ್ಮಣ – ಶಾಂತ – ಎಂಬ ಇಬ್ಬರು ಮಕ್ಕಳಾಗುತ್ತಾರೆ. ಕಾದಂಬರಿಯ ನಾಯಕ ಲಕ್ಷ್ಮಣನಾದರೂ, ರಾಮಚಂದ್ರ – ಲಕ್ಷ್ಮಣ – ಈ ಇಬ್ಬರನ್ನೂ ಅವಲಂಬಿಸಿ ಕತೆಯು ಮುಂದುವರೆಯುತ್ತದೆ. ಕಾದಂಬರಿಯ ಮುಖ್ಯ ಪಾತ್ರಧಾರಿಗಳು, ರಾಮಚಂದ್ರ ಹಾಗೂ ಲಕ್ಷ್ಮಣ.

---

೧. **'ಸಂಧ್ಯಾರಾಗ' – ಅ.ನ.ಕೃ. – ಮುನ್ನುಡಿ**

ಬಾಲ್ಯದಿಂದಲೂ ಲಕ್ಷ್ಮಣ ಹಾಗೂ ರಾಮಚಂದ್ರ ಪರಸ್ಪರ ವಿರುದ್ಧ ದಿಕ್ಕಿನಲ್ಲಿ ನಡೆಯುತ್ತಾರೆ. ರಾಮಚಂದ್ರನಿಗೆ ಓದಿನಲ್ಲಿ ಇದ್ದ ಆಸಕ್ತಿ ಲಕ್ಷ್ಮಣನಿಗೆ ಇರಲಿಲ್ಲ. ತನ್ನಷ್ಟಕ್ಕೆ ತಾನೇ ಹಾಡಿಕೊಳ್ಳುತ್ತಾ ಪ್ರಕೃತಿಯಲ್ಲಿ ಮೈಮರೆಯುವುದು ಅವನಿಗೆ ಬಹುಪ್ರಿಯವಾದುದು. ಅವನು ಸ್ವಭಾವತಃ ಏಕಾಂತಪ್ರಿಯನೂ, ಅಂತರ್ಮುಖಿಯೂ ಆಗಿ ಬೆಳೆದವನು. ಶ್ರೀನಿವಾಸರಾಯರ ಮನೆಯಲ್ಲೇ ಇದ್ದ 'ಭಾರತದ ಶಾಮಣ್ಣ' ಲಕ್ಷ್ಮಣನ ಸಂಗೀತಾಭ್ಯಾಸಕ್ಕೆ ಪ್ರೋತ್ಸಾಹ ನೀಡುತ್ತಾರೆ. ಶಾಮಣ್ಣನವರ ಬಳಿ ಇದ್ದ ದೊಡ್ಡ ಆಸ್ತಿ ಅವರ 'ಮಾಗಡಿ ತಂಬೂರಿ'. ಆ ತಂಬೂರಿಯ ನಾದಗಳು, ಲಕ್ಷ್ಮಣನಲ್ಲಿ ರೋಮಾಂಚನವನ್ನು ಹುಟ್ಟಿಸುತ್ತಿದ್ದವು, ಅದರ ಮಿಡಿತಗಳು ಲಕ್ಷ್ಮಣನ ನರಗಳನ್ನೂ ಮಿಡಿಯುತ್ತಿದ್ದವು. ಚಿಕ್ಕಂದಿನಿಂದಲೂ ಲಕ್ಷ್ಮಣನಿಗೆ ಸಂಗೀತದಲ್ಲಿ ಒಂದು ಅತಿಶಯವಾದ ಪ್ರೇಮ ಬೆಳೆದಿತ್ತು. ಆದರೆ ಚಿಕ್ಕಂದಿನಿಂದಲೂ ಲಕ್ಷ್ಮಣನಿಗೆ ಸಂಗೀತದಲ್ಲಿ ಯಾವ ಗುರುವೂ ಇರಲಿಲ್ಲ – ಪ್ರತಿನಿತ್ಯ ತನಗೆ ತಿಳಿದ ರಾಗಗಳಲ್ಲಿ ಲಕ್ಷ್ಮಣ ಹಾಡುಗಳನ್ನು ಹೇಳಿಕೊಳ್ಳುತ್ತಿದ್ದ. ದೇವಸ್ಥಾನದ ಭಜನೆಗಳ ದಿನಗಳಲ್ಲಂತೂ ಲಕ್ಷ್ಮಣನ ಗಾಯನ ಊರಿನವರನ್ನೆಲ್ಲಾ ತೃಪ್ತಿಪಡಿಸುತ್ತಿತ್ತು. ಹೀಗೆ 'ಲಕ್ಷ್ಮಣ' ಬಾಲ್ಯದಲ್ಲಿ ಯಾವ ನೆರವೂ ಇಲ್ಲದೆ, ಸಂಗೀತದಲ್ಲಿ ತಕ್ಕಮಟ್ಟಿನ ಪರಿಣಿತಿಯನ್ನು ಸಾಧಿಸಿರುತ್ತಾನೆ.

ಲಕ್ಷ್ಮಣನಿಗೆ ಚಿಕ್ಕಂದಿನಲ್ಲಿ ಸಂಗೀತಾಭ್ಯಾಸಕ್ಕೆ ಭಾರತದ ಶಾಮಣ್ಣನವರು ಪ್ರೋತ್ಸಾಹ ನೀಡುವಂತೆ, ಮುಳುಬಾಗಿಲು ಚೆನ್ನಪ್ಪನವರೂ ಪ್ರೇರಣೆ ನೀಡುತ್ತಾರೆ. ಕಾದಂಬರಿಯಲ್ಲಿ ಹೀಗೆ ಬಂದು ಹಾಗೆ ಹೋಗುವ ಪಾತ್ರ ಇದಾದರೂ, ಲಕ್ಷ್ಮಣನ ಜೀವನದುದ್ದಕ್ಕೂ ಈ ಪಾತ್ರದ ಪ್ರಭಾವವಿದೆ. ಚೆನ್ನಪ್ಪ ಲಕ್ಷ್ಮಣನ ಗಾನ ಸಾಮರ್ಥ್ಯವನ್ನು ಅವನಿಗೇ ಮನವರಿಕೆ ಮಾಡಿಕೊಡುವುದರೊಂದಿಗೆ, ಪೂರ್ವೀ ರಾಗದೊಂದಿಗೆ ಅವನನ್ನು ಬೆಸೆಯುತ್ತಾರೆ. ಇಲ್ಲಿಂದ ಮುಂದೆ ಪೂರ್ವೀರಾಗ ಅಥವಾ ಸಂಧ್ಯಾರಾಗ ಲಕ್ಷ್ಮಣನ ಮನಸ್ಸನ್ನು ಗಾಢವಾಗಿ ಆವರಿಸುತ್ತದೆ; ಅವನ ಉಸಿರಲ್ಲಿ ಒಂದಾಗಿ, ಅವನನ್ನು ತನ್ನೊಳಗೇ ಲೀನವಾಗಿಸಿಕೊಳ್ಳುತ್ತದೆ.

**"ಮಗಾ, ಚಂದಾಕಿ ಶಾರದಮ್ನೋರ ಸೇವೆ ಮಾಡು. ನಿನ್ನ ವಾಣೀಲಿ ತಾಯಿ ಬೀಜಾಕ್ಷರ ಬರದವ್ಳೆ...... ನೀನು ಕಲಿಯೋಕೆ ಉಟ್ಟಿಲ್ಲ... ಕಲ್ಸೋಕೆ"**[೧]

ಲಕ್ಷ್ಮಣನ ಸಂಗೀತದ ಬಗ್ಗೆ. ಚೆನ್ನಪ್ಪನಾಡಿದ ಈ ಮಾತುಗಳು, ಹಾಗೂ ಚೆನ್ನಪ್ಪನ ಪೂರ್ವೀರಾಗ ಲಕ್ಷ್ಮಣನ ಮನಸ್ಸಿನಲ್ಲಿ ಗಾಢವಾಗಿ ಅಚ್ಚೊತ್ತಿತ್ತು; ಲಕ್ಷ್ಮಣನ ಮನಸ್ಸನ್ನು ಅಲ್ಲೋಲ ಕಲ್ಲೋಲ ಮಾಡಿತು. ಪೂರ್ವಿರಾಗದ ಬಗ್ಗೆ ಅವನಲ್ಲಿ ವಿಶೇಷ ಒಲವು ಬೆಳೆಯಲು ಇದು ಕಾರಣವಾಯಿತು.

ಶ್ರೀನಿವಾಸರಾಯರ ಸಂಸಾರ ಮುಂದೆ ಬೆಂಗಳೂರಿಗೆ ಪಯಣ ಬೆಳೆಸುತ್ತದೆ. ಇದು ರಾಮಚಂದ್ರನ ವಿದ್ಯಾಭ್ಯಾಸಕ್ಕೆ ಅನುಕೂಲವಾದಂತೆ, ಲಕ್ಷ್ಮಣನ ಸಂಗೀತ ಸಾಧನೆಗೂ ಸಹಾಯಕವಾಗುತ್ತದೆ. ಈ ನಡುವೆ ಲಕ್ಷ್ಮಣನ ಸಂಗೀತದ ಆಸಕ್ತಿ ಅವನ ಮನೆಯವರಲ್ಲಿ ಬೇಸರ ಮೂಡಿಸುತ್ತದೆಯಾದರೂ, ಇದರಿಂದ ಅವನ

---

೧. 'ಸಂಧ್ಯಾರಾಗ' – ಅ. ನ. ಕೃ. – ಪು. ಸಂ. ೨೬

ಕಲಿಕೆಗೆ ಯಾವುದೇ ಅಡ್ಡಿ ಉಂಟಾಗುವುದಿಲ್ಲ. ಇಲ್ಲಿಂದ ಮುಂದೆ ಅವನ ಸಂಗೀತಾಭ್ಯಾಸ ಬೇರೆ – ಬೇರೆ ಗುರುಗಳ ಮುಖೇನ ಸಾಗುತ್ತಾ ಹೋಗುತ್ತದೆ.

ಲಕ್ಷ್ಮಣ ಅನಂತಾಚಾರ್ಯರ ಬಳಿ ತನ್ನ ಸಂಗೀತಾಭ್ಯಾಸವನ್ನು ಮುಂದುವರೆಸುತ್ತಾನೆ. ಆದರೆ ಎಲ್ಲಿಯೂ ಲಕ್ಷ್ಮಣನ ಸಂಗೀತಾಭ್ಯಾಸದ ವಿವರಗಳಿಲ್ಲ. ಉದ್ದಕ್ಕೂ ಅವನು ಪರಿಣಿತ ಸಂಗೀತಗಾರನಾಗಿಯೇ ಕಾಣಿಸುತ್ತಾನೆ; ಎಲ್ಲಿಯೂ ಅವನ ಸಂಗೀತ, ಕಲಿಕೆಯ ಹಂತದಲ್ಲಿಲ್ಲ.

ರಾಮಚಂದ್ರ ತನ್ನ ವ್ಯಾಸಂಗದಲ್ಲಿ, ಹುದ್ದೆಯಲ್ಲಿ, ಮೇಲೇರುತ್ತಾ ಹೋದಂತೆ, ಲಕ್ಷ್ಮಣ ತನ್ನ ಸಂಗೀತದಲ್ಲಿ ಸಾಧನೆ ಮಾಡುತ್ತಾ ಹೋಗುತ್ತಾನೆ. ಅಂತೆಯೇ ಇಬ್ಬರ ವ್ಯಕ್ತಿತ್ವಗಳೂ ವಿಭಿನ್ನ ರೀತಿಯಲ್ಲಿ ರೂಪುಗೊಳ್ಳುತ್ತಾ ಹೋಗುತ್ತದೆ. ರಾಮಚಂದ್ರನಲ್ಲಿ ಅಹಂಕಾರ, ಕೆಟ್ಟತನಗಳು ಸೇರಿದಂತೆ, ಲಕ್ಷ್ಮಣನ ಸ್ವಭಾವ ಹೆಚ್ಚು ನಯವಾಗುತ್ತದೆ. ಇಬ್ಬರ ವರ್ತನೆ – ಸ್ವಭಾವಗಳನ್ನು ಎರಡು ಗುಣಗಳ ಪ್ರತೀಕವಾಗಿಸಿ, ಕಾದಂಬರಿಯು ತೌಲನಿಕವಾಗಿ ಪರಿಶೀಲಿಸುತ್ತದೆ. ಕಾದಂಬರಿಯ ವಿವಿಧ ಸನ್ನಿವೇಶಗಳಲ್ಲಿ ಇದು ಓದುಗರಿಗೆ ಹೆಚ್ಚು ಸ್ಪಷ್ಟವಾಗುತ್ತದೆ.

ಕಲಾವಿದರ ಬಾಳಿನಲ್ಲಿ ಹೆಣ್ಣಿನ ಪ್ರೇರಣೆ – ಪ್ರಭಾವಗಳು ಗಮನಾರ್ಹವಾದುದು. ಅವನ ಕಲಾಸಿದ್ಧಿಗೆ, ಅವಳಿಂದ ದೊರೆಯುವ ಸ್ಫೂರ್ತಿ ಅಪಾರ. ನಿರ್ಮಲ ಪ್ರೇಮ, ಅಂತಃಕರಣ, ತ್ಯಾಗಗಳಿಂದ ಕಲಾವಿದನೊಬ್ಬನ ಜೀವನ ಕಲೆಗಳು ಅತ್ಯುನ್ನತ ಸ್ಥಿತಿಯನ್ನು ಮುಟ್ಟಬಲ್ಲವು ಎಂಬುವುದರಲ್ಲಿ ಸಂಶಯವಿಲ್ಲ. ಅದೇ ರೀತಿ ಲಕ್ಷ್ಮಣನ ಬದುಕಿನಲ್ಲಿ 'ಜಯಾ' ನಿರ್ವಹಿಸುವ ಪಾತ್ರ ಅನನ್ಯವಾದುದು. ಲಕ್ಷ್ಮಣನ ಸಂಗೀತಕ್ಕೆ ಜಯಾ ಹೊಸದೊಂದು ಶಕ್ತಿಯಾಗುತ್ತಾಳೆ; ತನ್ನ ಜೀವಿತದ ಕಾಲದಲ್ಲಿಯೂ, ಮರಣಾನಂತರವೂ 'ಜಯಾ' ಲಕ್ಷ್ಮಣನ ಸಂಗೀತವನ್ನು ಉದ್ಧರಿಸುತ್ತಾಳೆ ಎನ್ನಬಹುದು.

ಲಕ್ಷ್ಮಣನ ಹೆಂಡತಿ 'ಜಯಾ', ರಾಮಚಂದ್ರನ ಪತ್ನಿ 'ಪದ್ಮ' – ಇಬ್ಬರ ಸ್ವಭಾವಗಳೂ ರಾಮಲಕ್ಷ್ಮಣರಂತೆ ಬೇರೆ–ಬೇರೆ. ಆ ಸ್ವಭಾವಗಳಿಗನುಗುಣವಾಗಿಯೇ ಲಕ್ಷ್ಮಣ ಹಾಗೂ ರಾಮಚಂದ್ರನ ಸಾಂಸಾರಿಕ ಜೀವನಗಳು ವಿರುದ್ಧವಾದ ಹಾದಿಯನ್ನು ಹಿಡಿಯುತ್ತದೆ.

ಈ ಮಧ್ಯೆ ಲಕ್ಷ್ಮಣ ಕೆಲವು ಸಂಗೀತ ಕಛೇರಿಗಳನ್ನು ನೀಡುವ ಹಂತಕ್ಕೆ ಬರುತ್ತಾನೆ. ಆತನ ಸಂಗೀತ ಎಲ್ಲರ ಮನಸೂರೆಗೊಂಡರೂ, ಅದರಲ್ಲಿ ಅವನಿಗೆ ಇನ್ನೂ ತೃಪ್ತಿ ದೊರೆತಿಲ್ಲವೆಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ತನ್ನ ಸಂಗೀತ ಸಾಧನೆ ಯಾವ ಹಂತದಲ್ಲಿದೆ, ಯಾವುದು ನಿಜವಾದ ಸಂಗೀತ – ಎಂಬಂತಹ ಅರಿವು ಪಡೆಯುವಷ್ಟರ ಮಟ್ಟಿಗೆ ಲಕ್ಷ್ಮಣ ಬೆಳೆದಿರುತ್ತಾನೆ. ತನ್ನ ಸಂಗೀತ ಕೇವಲ ಸರಿಗಮಪದನಿಸಗಳ ಹೋರಾಟ, ನಿಜವಾದ ಸಂಗೀತವಲ್ಲ – ಎಂಬ ತಿಳಿವು ಆತನದು.

ಮಕ್ಕಳ ಜವಾಬ್ದಾರಿ ಕಳೆಯುತ್ತಲೇ ಮೀನಾಕ್ಷಮ್ಮನವರು, ಶ್ರೀನಿವಾಸರಾಯರು ತೀರಿಕೊಳ್ಳುತ್ತಾರೆ. ಆದರೆ ಇದು ಹೆಚ್ಚಾಗಿ ಪರಿಣಾಮ ಬೀರಿದುದು ಲಕ್ಷ್ಮಣನ ಮೇಲೆ. ಮನೆಯ ಸರ್ವ ಆಡಳಿತವೂ ರಾಮಚಂದ್ರನ ಕೈ

ಸೇರುತ್ತದೆ. ಇದು ಲಕ್ಷ್ಮಣನ ಸಾಂಸಾರಿಕ ಜೀವನವನ್ನು ಹಾಳು ಮಾಡುವುದಲ್ಲದೇ ಅವನ ಕಲಾಜೀವನವನ್ನು ಏರು-ಪೇರುಗೊಳಿಸುತ್ತದೆ. ಒಂದು ರೀತಿಯಲ್ಲಿ ಇದು ಲಕ್ಷ್ಮಣನ ಬದುಕನ್ನು ಪರೀಕ್ಷೆಗೊಡ್ಡುತ್ತದೆ. ಒಬ್ಬ ಕಲಾವಿದನಾಗಿ, ಒಬ್ಬ ಸಂಸಾರಿಯಾಗಿ ಎಷ್ಟು ಸಮರ್ಪಕವಾಗಿ ಲಕ್ಷ್ಮಣ ಈ ಸಮಸ್ಯೆಯನ್ನು ಎದುರಿಸುತ್ತಾನೆ ಎಂಬುದನ್ನು ಬಯಲುಗೊಳಿಸುತ್ತದೆ. ಆದ್ದರಿಂದಲೇ ಇದು ಲಕ್ಷ್ಮಣನ ಕಲಾಪ್ರಪಂಚದ, ಗೃಹಸ್ಥ ಜೀವನದ ಒಂದು ಮುಖ್ಯ ಘಟ್ಟ.

ಕಾದಂಬರಿಯ ಉತ್ತರಾರ್ಧ ರಾಮಚಂದ್ರ ಹಾಗು ಲಕ್ಷ್ಮಣನ ಜೀವನದ ಸೋಲು-ಗೆಲುವುಗಳಿಗೆ ಮೀಸಲಾಗಿದೆ. ರಾಮಚಂದ್ರ ತನ್ನ ದರ್ಪ, ಅಹಂಕಾರಗಳಿಂದ ತನ್ನ ವೈಯ್ಯಕ್ತಿಕ ಜೀವನದಲ್ಲಿ ನೈತಿಕವಾಗಿ ಅಧಃಪತನಕ್ಕೆ ಇಳಿಯುತ್ತಾನೆ. ಆತ ತನ್ನ ವೃತ್ತಿಜೀವನದಲ್ಲಿ ಎಷ್ಟು ಮೇಲೇರುತ್ತಾನೋ ಅಷ್ಟೇ ಜೀವನದಲ್ಲಿ ಸೋಲನ್ನು ಅನುಭವಿಸಬೇಕಾಗುತ್ತದೆ. ಆದರ್ಶ-ವಾಸ್ತವಿಕತೆಗಳ ತುಲನೆ, ಕಾದಂಬರಿಯ ಈ ಹಂತದಲ್ಲಿ ಕಂಡುಬರುತ್ತದೆ. ಆದರೆ ಕಾದಂಬರಿಯ ಈ ಉತ್ತರಾರ್ಧದಲ್ಲಿ ರಾಮಚಂದ್ರನ ಕೋರ್ಟು - ಕಛೇರಿಯ ವ್ಯವಹಾರಗಳು, ಪದ್ಮಳ ಕ್ಲಬ್ಬಿನ ವಿಚಾರಗಳು, ವೆಂಕಟೇಶನ ಪತ್ರಿಕೋದ್ಯಮ - ಇವುಗಳ ವಿವರಗಳೇ ಹೆಚ್ಚಾಗಿ ಬಂದಿವೆ. ಈ ವಿವರಗಳು ಕತೆಯ ನಡಿಗೆಗೆ ಸ್ವಲ್ಪ ಮಟ್ಟಿಗಿನ ತಡೆಯನ್ನುಂಟು ಮಾಡುತ್ತವೆ. ಆದರೆ ಈ ಘಟ್ಟದಲ್ಲಿನ ಒಂದು ಬಹುಮುಖ್ಯ ತಿರುವು - ಜಯಾಳ ಮರಣ.

ರಾಮಚಂದ್ರನ ನಿಷ್ಕರುಣೆ, ಅಮಾನವೀಯ ವರ್ತನೆಗಳಿಗೆ ಗರ್ಭಿಣಿ ಜಯಾ ಬಲಿಯಾಗುತ್ತಾಳೆ. ಜಯಾಳ ಮರಣ ಕಾದಂಬರಿಯಲ್ಲಿ ಒಂದು ಅನಪೇಕ್ಷಿತ, ಅನಿರೀಕ್ಷಿತವಾದಂತಹ ತಿರುವು. ಓದುಗರು ಸನ್ನಿವೇಶವನ್ನು ಅರ್ಥಮಾಡಿಕೊಳ್ಳುವ ಮೊದಲೇ, ಜಯಾಳ ಪಾತ್ರ ಅಂತ್ಯವನ್ನು ಕಂಡಿರುತ್ತದೆ. ಜಯಾಳ ಈ ಸಾವು ಲಕ್ಷ್ಮಣನ ಸಂಗೀತದ ಮೇಲೆ ಎರಡು ರೀತಿಯ ಪರಿಣಾಮ ಬೀರುತ್ತದೆ. ಇದು ಲಕ್ಷ್ಮಣನ ಕಲೆಯನ್ನು ಮಸುಕುಮಾಡುವುದಲ್ಲದೇ, ಅನಂತರ ಒಂದು ಅದ್ಭುತವಾದ ಪ್ರೇರಣೆಯಾಗಿ ಬದಲಾಗುತ್ತದೆ.

ಇಲ್ಲಿ ಮುಖ್ಯವಾಗಿ ಚಿಂತೆಗೀಡುಮಾಡುವ ವಿಷಯವೆಂದರೆ ಜಯಾಳ ಮರಣಕ್ಕೆ ಲಕ್ಷ್ಮಣನೂ ಅಲ್ಪಮಟ್ಟಿಗೆ ಕಾರಣನಾಗಿರುತ್ತಾನೆಂಬುದು. ರಾಮಚಂದ್ರನ ದಬ್ಬಾಳಿಕೆ, ದುರ್ನಡತೆಗಳಿಗೆ ಲಕ್ಷ್ಮಣನಿಂದ ಯಾವ ರೀತಿಯ ಪ್ರತಿಕ್ರಿಯೆಯೂ ಕಂಡುಬರುವುದಿಲ್ಲ. ಆತನಲ್ಲಿ ಪ್ರತಿಭಟನೆಯ ಅಂಶವು ಗೋಚರಿಸುವುದೇ ಇಲ್ಲ. ಜಯಾಳ ಮೇಲಾಗುತ್ತಿದ್ದ ಎಲ್ಲಾ ದೌರ್ಜನ್ಯಗಳೂ ಲಕ್ಷ್ಮಣನಿಗೆ ತಿಳಿದಿದೆ. ಆದರೆ ಇವುಗಳಿಗೆ ಅವನ ಮೌನವೇ ಉತ್ತರ. ಪ್ರಯತ್ನ ಪಟ್ಟಿದ್ದರೆ ಅವನು ಜಯಾಳನ್ನು ಉಳಿಸಿಕೊಳ್ಳಬಹುದಿತ್ತು. ಈ ಹಿನ್ನಲೆಯಲ್ಲಿ ಲಕ್ಷ್ಮಣ ಸೋಲುತ್ತಾನೆ. ಒಬ್ಬ ವ್ಯಕ್ತಿಯಾಗಿ, ಒಬ್ಬ ಪತಿಯಾಗಿ ಅವನ ಈ ಸೋಲು ಇಲ್ಲಿ ನಿಚ್ಚಳವಾಗಿದೆ. ಅವನ ವ್ಯಕ್ತಿತ್ವದ ಈ ದೌರ್ಬಲ್ಯತೆ ಓದುಗರ ಅರಿವಿಗೆ ಸ್ಪಷ್ಟವಾಗುತ್ತದಾದರೂ, ಕಾದಂಬರಿಯು ಇಲ್ಲಿ ಇದಕ್ಕೆ ಹೆಚ್ಚಿನ ಲಕ್ಷ್ಯವನ್ನು ನೀಡಿಲ್ಲ. ಕಲಾವಿದನಾಗಿ ಲಕ್ಷ್ಮಣನ ಸಾಧನೆ - ಸಮಸ್ಯೆಗಳಿಗೆ ಮಾತ್ರವೇ ಅದು ಹೆಚ್ಚಿನ ಪ್ರಾಮುಖ್ಯತೆ ನೀಡಿದೆ. ಅಂತೆಯೇ ಇಲ್ಲಿ ಜಯಾಳ ಮರಣ, ಲಕ್ಷ್ಮಣನ ಕಲಾಸಿದ್ಧಿಗೆ ಒಂದು ಪ್ರೇರಕ ಶಕ್ತಿಯಾಗಿ ಮಾರ್ಪಡುತ್ತದೆ.

ಒಟ್ಟಿನಲ್ಲಿ ಜಯಾಳ ಸಾವು ಲಕ್ಷ್ಮಣನ ಮೇಲೆ ಗಾಢವಾದ ಪರಿಣಾಮ ಬೀರುತ್ತದೆ. ಇದರಿಂದ ಅವನ ಸ್ಥಿತಿಯೇ ಬದಲಾಗುತ್ತದೆ. ಲಕ್ಷ್ಮಣ ತನ್ನ ಅಸ್ತಿತ್ವವನ್ನೇ ಮರೆಯುವ ಹಂತವನ್ನು ತಲುಪುತ್ತಾನೆ. ಒಮ್ಮೆ ತನ್ನಷ್ಟಕ್ಕೇ ಹಾಡಿಕೊಳ್ಳುವುದು, ಮತ್ತೆ ಮೌನವಾಗುವುದು, ತಂಬೂರಿಯನ್ನು ನೋಡಿ ನಗುವುದು – ಹೀಗೆ ಲಕ್ಷ್ಮಣನ ಇರವೇ ಬೇರೆಯಾಗುತ್ತದೆ. ಇದೇ ಸ್ಥಿತಿಯಲ್ಲಿ ಲಕ್ಷ್ಮಣ ಒಮ್ಮೆ ತಂಬೂರಿಯ ತಂತಿಗಳನ್ನು ಕಿತ್ತುಹಾಕಿ ಬಹುದೂರ ಹೊರಟುಹೋಗುತ್ತಾನೆ.

ಹೀಗೆ ತನ್ನ ಮಾನಸಿಕ ಸ್ಥಿಮಿತವನ್ನು ಕಳೆದುಕೊಂಡ ಲಕ್ಷ್ಮಣ ಈ ಹಂತದಲ್ಲಿ ಜೀವನಕ್ಕೆ ಬೆನ್ನು ತಿರುಗಿಸುತ್ತಾನೆ. ಸ್ವಲ್ಪಕಾಲ ಆತನ ಸುಳಿವು ಯಾರಿಗೂ ದೊರೆಯುವುದಿಲ್ಲ. ಈ ಸಂದರ್ಭದಲ್ಲಿ ಲಕ್ಷ್ಮಣ ಎಲ್ಲಿದ್ದ? ಏನಾದ? ಎಂಬ ವಿವರಗಳು ಕಾದಂಬರಿಯಲ್ಲಿ ಗೋಚರಿಸುವುದಿಲ್ಲ. ಅನಂತರ ಒಬ್ಬ ಹುಚ್ಚನಾಗಿ ಲಕ್ಷ್ಮಣ, ನಮ್ಮ ಮುಂದೆ ಕಾಣಿಸಿಕೊಳ್ಳುತ್ತಾನೆ. ತನ್ನ ಗತ ಜೀವನದ ಯಾವ ನೆನಪೂ ಅವನಿಗಿರುವುದಿಲ್ಲ. ಅವನ ಸ್ಮೃತಿಯನ್ನು ಮತ್ತೆ ಮರಳಿಸುವುದು ಸಂಗೀತವೇ.

ಮುಂದಿನ ಹಂತದಲ್ಲಿ 'ಜಯ' ಲಕ್ಷ್ಮಣನಿಗೆ ಕಲಾದೇವತೆಯಾಗಿ, ಸಂಗೀತ ಶಾರದೆಯಾಗಿ ನಿಲ್ಲುತ್ತಾಳೆ. ಅವನ ಸಂಗೀತವು ದೈವಿಕ ಶಕ್ತಿಯನ್ನು ಪಡೆಯಲು 'ಜಯ' ಮರಣದ ನಂತರವೂ ಕಾರಣವಾಗುತ್ತಾಳೆ.

**"ಕಲೆಯ 'ತಪಸ್ಸಿ'ನಲ್ಲಿ ಮುಳುಗಿ ಆತ ಸಂಗೀತ ಸಾರ್ವಭೌಮನಾಗುತ್ತಾನೆ. ಜಯಾ ಸಂಗೀತ ಶಾರದೆಯಾಗಿ ಅವನ ಪ್ರೇರಕ ಶಕ್ತಿಯಾಗಿದ್ದಾಳೆ"**[೧]

'ಜಯ'ಳ ರೂಪ ಎದುರಿಗೆ ಬಂದು ನಿಂತು, ಅವನಲ್ಲಿ ಜಾಗೃತಿಯನ್ನು ಮೂಡಿಸುತ್ತದೆ. ಮತ್ತೆ ಲಕ್ಷ್ಮಣ ತನ್ನ ಸಂಗೀತ ಸಾಧನೆಗೆ ಮರಳುತ್ತಾನೆ. ಒಂದು ರೀತಿಯಲ್ಲಿ ಲಕ್ಷ್ಮಣನ ಬದುಕು ಮತ್ತೆ ಹೊಸ ರೀತಿಯಿಂದ ಆರಂಭಗೊಳ್ಳುತ್ತದೆ.

ಮೊದಲಿನಿಂದಲೂ ಲಕ್ಷ್ಮಣನಿಗೆ ದಕ್ಷಿಣಾದಿ ಸಂಗೀತಕಲೆಯಲ್ಲಿ ಆಸಕ್ತಿ ಹೆಚ್ಚು. ಅಂತೆಯೇ ಆತ ತಂಜಾವೂರು ಕೃಷ್ಣಯ್ಯರ ಶಿಷ್ಯನಾಗಿ ಸೇರುತ್ತಾನೆ. ಇಲ್ಲಿಯೂ ಅವನು ಒಬ್ಬ ಶಿಷ್ಯನಾಗಿ ಕಂಡುಬರುವುದಕ್ಕಿಂತಲೂ ಹೆಚ್ಚಾಗಿ, ತನ್ನ ಸಂಗೀತ ಸಾಮರ್ಥ್ಯವನ್ನು ಮತ್ತೊಮ್ಮೆ ಸಾಬೀತು ಪಡಿಸುತ್ತಾನೆ. ಪೂರ್ವಿಕೃಷ್ಣಯ್ಯನೆಂದೇ ಖ್ಯಾತರಾದ ಅವರು ಲಕ್ಷ್ಮಣನಿಗೆ ಪೂರ್ವಿಯನ್ನು ದತ್ತಿ ನೀಡುತ್ತಾರೆ. ಪೂರ್ವಿರಾಗ ಮತ್ತೊಮ್ಮೆ ಲಕ್ಷ್ಮಣನ ಬದುಕನ್ನು ಆವರಿಸುತ್ತದೆ.

**"ನಿನ್ನ ವಿದ್ಯೆ ದೈವೀಕವಾದದ್ದು ಅದನ್ನು ಸತ್ಪಾತ್ರರಿಗೆ ಧಾರೆಯೆರೆ, ನಿನ್ನ ಬೆಳಕಿನಿಂದ ಹಲವು ಹೃದಯಗಳು ಬೆಳಗುತ್ತವೆ. ಬೆಳಗಿಸು. ಲೋಕವನ್ನೇ ಅಂಧಕಾರಕೂಪದಿಂದ ನಿವೃತ್ತಿಮಾಡು"**[೨]

---

೧. 'ರಸಚೇತನ' – ಅ.ನ.ಕೃ. ಅಮರ ಪಾತ್ರಗಳು – ದಯಾನಂದ ತೊರ್ಕೆ ಪು. ಸಂ. ೪೯೩

೨. ಸಂಧ್ಯಾರಾಗ –ಅ.ನ.ಕೃ. ಪು.ಸಂ. ೧೩೪.

ಲಕ್ಷ್ಮಣನ ಬಗೆಗಿನ ಕೃಷ್ಣರಾಯರ ಈ ಮಾತುಗಳಲ್ಲಿ, ಲಕ್ಷ್ಮಣನ ಸಂಗೀತ ದೈವೀಕತೆಯನ್ನು ಮುಟ್ಟಿದುದರ ಸೂಚನೆಯಿದೆ. ಒಂದು ಅಧ್ಯಾತ್ಮ ಸಂಸ್ಪರ್ಶ, ಅಲೌಕಿಕ ಶಕ್ತಿಯನ್ನು ಲಕ್ಷ್ಮಣ ತನ್ನ ಸಂಗೀತದಲ್ಲಿ ಪಡೆದಿರುವುದು ವಿದಿತವಾಗುತ್ತದೆ. ಈ ಮೂಲಕ ಲಕ್ಷ್ಮಣ ತನ್ನ ಸಂಗೀತ ಕಲೆಯಲ್ಲಿ ಪೂರ್ಣತೆಯ ಕಡೆಗೆ ಸಾಗುತ್ತಿರುವುದರ ಚಿತ್ರಣ ಇಲ್ಲಿ ದೊರೆಯುತ್ತದೆ.

ಲಕ್ಷ್ಮಣ ಹೇಗೆ ತನ್ನ ಸಂಗೀತ ಸಾಧನೆಯಲ್ಲಿ ಪೂರ್ಣತೆಯ ಹಂತಕ್ಕೆ ಸಾಗುತ್ತಾನೋ, ಅದೇ ರೀತಿ, ರಾಮಚಂದ್ರನ ದುರ್ನಡತೆಗಳಿಗೆ ಅಂತ್ಯ ದೊರೆಯುತ್ತದೆ. ಆತ ತನ್ನ ತಪ್ಪುಗಳಿಗೆ ತಕ್ಕ ಶಿಕ್ಷೆಯನ್ನನುಭವಿಸಿ, ಪಶ್ಚಾತ್ತಾಪಕ್ಕೆ ಗುರಿಯಾಗುತ್ತಾನೆ. ಪರಸ್ಪರ ವಿರುದ್ಧ ಶಕ್ತಿಗಳ ಪ್ರದರ್ಶನದಲ್ಲಿ ರಾಮಚಂದ್ರ ಸೋಲುತ್ತಾನೆ. ಆ ಮೂಲಕ ಕೆಡುಕಿನ ಸೋಲು, ಒಳಿತಿನ ಜಯವನ್ನು ಇಲ್ಲಿ ತೆರೆದಿಡಲಾಗಿದೆ. ಆರಂಭದಿಂದಲೂ ಕೃತಿಯ ಒಳಗೇ ಕಂಡು ಬರುವ, ಎರಡು ಸ್ವಭಾವಗಳ ತೌಲನಿಕ ದೃಷ್ಟಿಯು ಕಂಡುಕೊಂಡ ನಿರ್ಧಾರವಿದು.

ಈ ನಡುವೆ ಲಕ್ಷ್ಮಣನಿಗೆ ಮದರಾಸಿನಲ್ಲಿ ಅನೇಕ ಕಛೇರಿಗಳು ಏರ್ಪಾಟಾದವು. ದೊಡ್ಡ ದೊಡ್ಡ ಕಲಾಭಿಮಾನಿಗಳ ಮನೆಗಳಲ್ಲಿ ಲಕ್ಷ್ಮಣನು ಹಾಡುವಂತಾಯಿತು. ಮದರಾಸಿನಲ್ಲಿ ಎಲ್ಲರೂ ಅವನನ್ನು ಗುರುತಿಸುವಷ್ಟರಮಟ್ಟಿಗೆ ಆತ ಪ್ರಸಿದ್ಧಿಯಾದ.

ಇಷ್ಟು ದಿನ ಲಕ್ಷ್ಮಣನು ಸಂಗೀತದಲ್ಲಿ ಪಡೆದಿದ್ದ ವಿದ್ವತ್ತು ಲೋಕದೆದುರು ತೆರೆದುಕೊಂಡ ಹಂತವಿದು. ಆತನ ಸಾಧನೆ ಪ್ರಪಂಚದ ಜನರಿಂದ ಗುರುತಿಸಲ್ಪಟ್ಟು ಆತ ಲೋಕವ್ಯಕ್ತಿಯಾದ.

ಮೈಸೂರಿನ ವೈಣಿಕ ಶಿಖಾಮಣಿ ವೀಣೆ ಶೇಷಣ್ಣನವರ ಮನೆಯಲ್ಲಿ ಸಂಗೀತ ಕಛೇರಿ ಏರ್ಪಾಟಾಗುತ್ತದೆ. ಅಲ್ಲಿ ಲಕ್ಷ್ಮಣ ಪಾಲಘಾಟಿನಿಂದ ಬಂದ ಭಾಗವತರಿಗೆ, ನಿಜವಾದ 'ತೋಡಿ ರಾಗ' ಯಾವುದೆಂಬುದನ್ನು ತನ್ನ ಪಾಂಡಿತ್ಯದಿಂದ ತೋರಿಸಿಕೊಡುತ್ತಾನೆ. ಮಾತ್ರವಲ್ಲ ಅವರೆಲ್ಲರ ಮೆಚ್ಚುಗೆಗೆ ಪಾತ್ರವಾಗುತ್ತಾನೆ. ಈ ಒಂದೊಂದು ಘಟ್ಟದಲ್ಲೂ ಲಕ್ಷ್ಮಣನ ಸಂಗೀತ ವಿದ್ವತ್ತು ಶಿಖರದಿಂದ ಶಿಖರವನ್ನು ಏರುತ್ತಾ ಹೋಗುತ್ತದೆ. ಆರಂಭದಲ್ಲಿ ಸಂಗೀತ ಕಛೇರಿಗಳಿಗೆ ಒಪ್ಪುತ್ತಿರದಿದ್ದ ಲಕ್ಷ್ಮಣನ ಸಂಗೀತ, ಅರಮನೆಯಲ್ಲಿ ಏರ್ಪಾಟಾಗುತ್ತದೆ. ಅಲ್ಲಿನ ವಿದ್ವಜ್ಜನರ ಬಾಯಲ್ಲಿ ಲಕ್ಷ್ಮಣನ ಪಾಂಡಿತ್ಯದ ಮೆಚ್ಚುಗೆಗಳು ನಲಿದಾಡುತ್ತದೆ. ಆದರೆ ಈ ಎಲ್ಲಾ ಸಂದರ್ಭಗಳಲ್ಲೂ ಲಕ್ಷ್ಮಣ, ಜೀವನಕ್ಕೂ, ಅದಕ್ಕೆ ಸಂಬಂಧಪಟ್ಟ ಎಲ್ಲಾ ವಿಚಾರಗಳಿಗೂ ಅತೀತನಾಗಿ ಕಂಡುಬರುತ್ತಾನೆ. ಅವನ ಸಂಗೀತ ಎಲ್ಲರನ್ನೂ ರಂಜಿಸಿದರೂ, ಅವನಿಗಿನ್ನೂ ತೃಪ್ತಿಯನ್ನು ನೀಡಿಲ್ಲ. ತನ್ನ ಗಾಯನದಲ್ಲಿ ಅವನಿನ್ನೂ ತನ್ನ ಅಂತರಂಗದ ದೈನ್ಯ ಭಾವಗಳನ್ನು ಕಂಡಿಲ್ಲ.

ಲಕ್ಷ್ಮಣನ ಸಂಗೀತಕಲೆ ದೈವಿಕ ಸ್ಥಿತಿಯನ್ನು ಮುಟ್ಟುತ್ತಿದ್ದಂತೆ, ಪ್ರಕೃತಿಯೂ ಅದರಲ್ಲಿ ಬೆರೆಯಲಾರಂಭಿಸಿತು. ಅದರ ಚೇತನಾಚೇತನ ವಸ್ತುಗಳು ಅಮರಗಾನಸುಧೆಯನ್ನು ಲಕ್ಷ್ಮಣನಿಗೆ ನೀಡುತ್ತಿದ್ದವು. ಅದರ ಸೂಕ್ಷ್ಮ ವಿಚಾರಗಳನ್ನರಿಯಲು ಲಕ್ಷ್ಮಣ ಪ್ರಯತ್ನಪಡುವನು. ಇಷ್ಟರವರೆಗೂ ಅವನ ಸಂಗೀತದಲ್ಲಿನ ಮಾಧುರ್ಯ,

ಲಯ, ಸ್ವರಸ್ಥಾನಗಳಿಗೆ, ಅದು ಇತರರಿಗೆ ನೀಡುತ್ತಿದ್ದ ಆನಂದದ ಬಗ್ಗೆ ಗಮನ ನೀಡುತ್ತಿದ್ದ ಕಾದಂಬರಿ, ಇಲ್ಲಿ ಅವನ ಕಲೆ ಒಂದು ಅಪೂರ್ವ, ಅಲೌಕಿಕ ಶಕ್ತಿಯನ್ನು ಪಡೆದಿರುವುದನ್ನು ಬಹಳ ಸುಂದರವಾಗಿ ಕಟ್ಟಿಕೊಡುತ್ತದೆ.

ತಾಯಿಯ ನಲ್ನುಡಿಯನ್ನು ಕೇಳಿದಾಗ ಯಾವ ರೀತಿಯ ಆನಂದವು ದೊರೆಯುತ್ತದೆಯೋ, ಅದೇ ನಿಜವಾದ ಸಂಗೀತವೆಂದು ಲಕ್ಷ್ಮಣನ ಭಾವನೆ. ಯಾವಾಗ ಅವನ ಸಂಗೀತಕ್ಕೆ ಹೃದ್ಯತೆ ಬಂದು ಸೇರುತ್ತದೋ, ಅದರೊಂದಿಗೆ ಅವನ ವಿನಯ – ದೈನ್ಯತೆಗಳು ಮೇಳವಿಸಿ, ಲಕ್ಷ್ಮಣನಿಗೆ ಆತ್ಮತೃಪ್ತಿಯನ್ನು ನೀಡುತ್ತದೆ. ಇದು ಕಲಾವಿದ ಲಕ್ಷ್ಮಣನ ಸಾಧನೆಯ ಪರಮಾವಧಿಯ ಹಂತ. ಆತನಿಗೆ ಯಾವಾಗ ತನ್ನ ಸಂಗೀತ, ನಿಜವಾದ ಸಂಗೀತ ಎಂದು ಅರಿವಿಗೆ ಬರುತ್ತದೆಯೋ, ಅಲ್ಲಿಗೆ ಅವನ ಸಾಧನೆ ಪೂರ್ಣತೆಯತ್ತ ಸಾಗಿರುವುದು ಸ್ಪಷ್ಟವಾಗುತ್ತದೆ.

ಮುಂದಿನದು, ಅವನ ಕಲೆ ಒಂದು ಆದರ್ಶ ಸ್ಥಿತಿಯನ್ನು ಮುಟ್ಟಲು ದಿವ್ಯವಾದ ವೇದಿಕೆಯು ನಿರ್ಮಾಣವಾಗುವ ಸಂದರ್ಭ. ಕಾದಂಬರಿಯ ಈ ಅಂತ್ಯ ಪರಿಣಾಮಕಾರಿಯಾಗಿ ಮೂಡಿ ಬಂದಿದೆ. ಲಕ್ಷ್ಮಣ ತನ್ನ ಕಲೆಯಲ್ಲಿಯೇ ಐಕ್ಯವಾಗುವುದರೊಂದಿಗೆ ಕಾದಂಬರಿ ಅಂತ್ಯ ಕಾಣುತ್ತದೆ.

ಗೋಪಾಲ, ಲಕ್ಷ್ಮಣನ ಸಂಗೀತ ಕಛೇರಿಯನ್ನು ಬೆಂಗಳೂರಿನ ಗಾಯನ ಸಮಾಜದಲ್ಲಿ, ಏರ್ಪಡಿಸುತ್ತಾನೆ. ಅಲ್ಲಿ ಅವನಿಗೆ ಸನ್ಮಾನವೂ ನಡೆಯುತ್ತದೆ. ಆದರೆ ಲಕ್ಷ್ಮಣ ಈ ಸನ್ನಿವೇಶದಲ್ಲಿ ಬಹಳ ನಿರ್ಲಿಪ್ತನಂತೆ ವರ್ತಿಸುತ್ತಾನೆ. ಬಹುಶಃ ಅವನಿಗೆ ತನ್ನ ಮುಂದಿನ ದಾರಿ ಸ್ಪಷ್ಟವಾದಂತೆ ತೋರುತ್ತದೆ. ಕಾದಂಬರಿಯ ಆರಂಭದಿಂದಲೂ ಸಂಧ್ಯಾಪೂರ್ವಿ ಲಕ್ಷ್ಮಣನ ಜೀವನವನ್ನೆಲ್ಲಾ ಆವರಿಸಿರುತ್ತದೆ. ಮೊದಲಿನಿಂದಲೂ ಆ ರಾಗ ಅವನ ಪ್ರೀತಿ – ಉಸಿರು. ಮುಳಬಾಗಿಲು ಚೆನ್ನಪ್ಪನವರು ಆ ರಾಗವನ್ನು ಹಾಡಿದ ಮೇಲೆ; ತಾನೂ ಅವರ ಮಟ್ಟದಲ್ಲಿಯೇ ಆ ರಾಗವನ್ನು ಹಾಡಬೇಕೆಂಬುದು ಅವನ ಹಂಬಲವಾಗಿರುತ್ತದೆ. ಅಂತೆಯೇ ಆತ ಎಲ್ಲಾ ರಾಗದಲ್ಲಿ ಹಾಡಿದರೂ, ಪೂರ್ವಿಯನ್ನು ಹಾಡುವುದಿಲ್ಲ. ತನ್ನೊಳಗಿನಿಂದಲೇ ಆ ರಾಗ ಹುಟ್ಟಿ ಬರುವವರೆಗೆ ನಿರೀಕ್ಷಿಸುತ್ತಾನೆ. ತನ್ನಿಡೀ ಜೀವನವನ್ನು ಅದರ ಸಾರ್ಥಕತೆಗಾಗಿ ಮೀಸಲಿರಿಸುತ್ತಾನೆ. ಒಂದಲ್ಲ ಒಂದು ದಿನ ಅದು ತನ್ನ ಹೃದಯವನ್ನು ಭೇದಿಸಿಕೊಂಡು ಹೊರಬರುತ್ತದೆಂದು ಆತನ ನಂಬಿಕೆ. ಕಛೇರಿಯ ಆರಂಭದಲ್ಲಿ ಲಕ್ಷ್ಮಣ ಕೆಲವು ಕೀರ್ತನೆಗಳು, ವಚನಗಳನ್ನು ಹಾಡುತ್ತಾನೆ. ಅವನ ಸಂಗೀತ ಎಡೆ–ಬಿಡದೆ ಸಾಗುತ್ತದೆ. ಆನಂದ ಭೈರವಿಯನ್ನು ಹಾಡುತ್ತಿದ್ದಂತೆಯೇ, ಲಕ್ಷ್ಮಣನಿಗೆ ಒಂದು ರೀತಿಯ ಆವೇಶ ಬಂದು ಬಿಡುತ್ತದೆ. ಅವನ ಮನೋಭೂಮಿಕೆಯ ಮೇಲೆ, 'ಜಯ' ಮೂಡುತ್ತಾಳೆ. ಒಂದು ಕಡೆ ಅವನ ಮೂರೂ ಜನ ಗುರುಗಳೂ ನಿಂತು, ಅವನನ್ನು ಹರಸುತ್ತಿರುವಂತೆ ಅವನಿಗೆ ಭಾಸವಾಗುತ್ತದೆ. ಅಪೂರ್ವ ಶಕ್ತಿಯೊಂದು ಲಕ್ಷ್ಮಣನ ಹೃದಯವನ್ನು ಪ್ರವೇಶಿಸಿದಂತಾಗುತ್ತದೆ. ಆನಂದ ಭೈರವಿಯನ್ನು ಮುಗಿಸಿದ ತಕ್ಷಣವೇ, ಪೂರ್ವಿರಾಗ ಅವನ ಹೃದಯದಿಂದ ಧುಮ್ಮಿಕ್ಕಲಾರಂಭಿಸುತ್ತದೆ. ಅಲ್ಲಿದ್ದ ಎಲ್ಲರೂ ಲಕ್ಷ್ಮಣ ಪೂರ್ವಿಯನ್ನೇಕೆ ಹಾಡುತ್ತಿರುವನೆಂದು ಗೊಂದಲಗೊಳ್ಳುತ್ತಾರೆ. ಆದರೆ ಲಕ್ಷ್ಮಣನಿಗೆ ಇದಾವುದರ ಪರಿವೆಯೂ ಇಲ್ಲ. ಆತನ ಕಣ್ಣುಗಳಿಂದ ಅಶ್ರುಧಾರೆಯಾಗಿ ಹರಿಯಲಾರಂಭಿಸುತ್ತದೆ. ಸಂಪೂರ್ಣವಾಗಿ ಈ ಲೋಕದಿಂದ ಬೇರ್ಪಟ್ಟಂತೆ ಲಕ್ಷ್ಮಣ ಗೋಚರಿಸುತ್ತಾನೆ. ಆ ರಾಗದಲ್ಲಿ ಕಳೆದುಹೋದ ಲಕ್ಷ್ಮಣ ತಂಬೂರಿಯ ಜೊತೆ

ನೆಲಕ್ಕುರುಳುತ್ತಾನೆ. 'ಜಯ' ಎಂಬ ಮಾತುಗಳೇ ಅವನ ಕಡೆಯ ಮಾತುಗಳಾಗುತ್ತವೆ. 'ಸಂಧ್ಯಾರಾಗ'ದಲ್ಲಿ ಲಕ್ಷ್ಮಣ ತನ್ನ ಆತ್ಮ ಪ್ರಣತಿಯನ್ನು ತೇಲಿಬಿಡುತ್ತಾನೆ.

**"ಸಂಧ್ಯಾರಾಗ ಎಲ್ಲರ ಕಿವಿಗೂ ಬಿದ್ದಿತು. ಆದರೆ ಉದಯರಾಗ ಕೇಳಿ ಬಂದುದು ಲಕ್ಷ್ಮಣನೊಬ್ಬನಿಗೇ!"**[೧]

ಲಕ್ಷ್ಮಣನ ಜೀವನ ಸಂಧ್ಯಾರಾಗ ಕೊನೆಗೊಂಡಿತ್ತು, ಎಲ್ಲರಿಗೂ ತಿಳಿಯುವ ರೀತಿಯಲ್ಲಿ. ಆದರೆ ಆ ಕೊನೆಯೊಂದಿಗೆ, ಅವನು ಸಾಧಿಸಿದ ಕಲಾಪೂರ್ಣತೆಯ ಉದಯರಾಗ ಕೇಳಿಸಿದ್ದು ಅವನಿಗೆ ಮಾತ್ರ. ಸಂಗೀತ ಕಲೆಗಾಗಿ ತನ್ನಿಡೀ ಜೀವನವನ್ನು ಮೀಸಲಿಟ್ಟ ಲಕ್ಷ್ಮಣ, ಅದೇ ಕಲೆಗಾಗಿ ತನ್ನನ್ನು ತಾನೇ ಸಮರ್ಪಿಸಿಕೊಳ್ಳುತ್ತಾನೆ. ಈ ಸನ್ನಿವೇಶದಲ್ಲಿ ಅವನಲ್ಲುಂಟಾಗುವ ಅಂತರಂಗಿಕ ಒಳತೋಟಿ – ವಿಪ್ಲವಗಳು ಅಷ್ಟೇ ದುರಂತಮಯವಾದದ್ದು.

ಕಾದಂಬರಿಯ ಈ ಅಂತಿಮ ಹಂತದಲ್ಲಿ ಓದುಗರ ಮನಸ್ಸು ವಿಚಿತ್ರವಾದ ಉದ್ವೇಗಕ್ಕೆ ಒಳಗಾಗುತ್ತದೆ. ಲಕ್ಷ್ಮಣ ಕೊನೆಯುಸಿರೆಳೆಯುತ್ತಿದ್ದಂತೆ ಓದುಗರು ನಿಟ್ಟುಸಿರು ಬಿಡುವಂತಾಗುತ್ತದೆ.

ಲಕ್ಷ್ಮಣನ ಅಂತ್ಯದೊಂದಿಗೆ ಕಲೆ–ಕಲಾವಿದ ಪರಸ್ಪರ ಒಂದಾಗುತ್ತಾರೆ. ತನ್ನ ಸಂಗೀತ ಕಲೆಯಲ್ಲಿ ಬ್ರಹ್ಮಾನಂದದ ಸ್ಥಿತಿಯನ್ನು ಅವನು ಸಾಧಿಸುತ್ತಾನೆ. ಇದೊಂದು ಆದರ್ಶಮಯ ಸ್ಥಿತಿ. ಕಾದಂಬರಿಯ ಆರಂಭದಲ್ಲಿ ಅ.ನ.ಕೃ. ರವರು ಹೇಳಿರುವಂತೆ – ಪೂರ್ಣತೆಯ ಹಂತವನ್ನು ಅಥವಾ ಸಾಧನೆಯ ಪರಮಾವಧಿಯನ್ನು ಲಕ್ಷ್ಮಣ ಪರಿಣಾಮಕಾರಿಯಾಗಿ ತಲುಪಿದ್ದಾನೆಂಬುದರಲ್ಲಿ ಯಾವುದೇ ಸಂಶಯವಿಲ್ಲ. ಆ ಮೂಲಕ ಅವನು ತನ್ನ ಕಲೆಗೆ ಒಂದು ಸಾರ್ಥಕ್ಯವನ್ನು ನೀಡಿದ್ದಾನೆ.

**"ಈ ಸಮುಜ್ವಲಗಳಿಗೆಯಲ್ಲಿ ಕಲಾವಿದ ಕಣ್ಮರೆಯಾಗಿ, ಲೋಕಕ್ಕೆ, ಕೊಡುಗೆಯಾಗಿ ಉಳಿದದ್ದು ಲಕ್ಷ್ಮಣರಾಯನ 'ಪೂರ್ವಿ ಕಲ್ಯಾಣಿ ರಾಗ'"**[೨].

ಕಾದಂಬರಿಯ ಆರಂಭದಿಂದ ಅಂತ್ಯದವರೆವಿಗೂ ಲಕ್ಷ್ಮಣ, ಸಂಗೀತ ಸಿದ್ಧಿಯ ಒಂದೊಂದು ಮೆಟ್ಟಿಲನ್ನು ಏರುತ್ತಲೇ ಹೋಗುತ್ತಾನೆ. ಕಡೆಗೆ ಸಂಗೀತದಲ್ಲೇ ಐಕ್ಯಗೊಂಡು ಅಮರನಾಗುತ್ತಾನೆ. ಇಲ್ಲಿ ಲಕ್ಷ್ಮಣನಿಗೆ ದೊರೆತಿರುವುದು ದೈವದತ್ತ ಪ್ರತಿಭೆ. ಬಾಲ್ಯದಿಂದಲೂ ಆತ ಕಲಿಕೆಯ ಹಂತದಲ್ಲಿ ಕಂಡು ಬರುವುದೇ ಇಲ್ಲ. ಪೂರ್ಣ ಕಲಾವಿದನಾಗಿಯೇ ಜನಿಸಿ, ಕಲೆಯ ಸಾರ್ಥಕತೆಯೆಡೆಗೆ, ಅಥವಾ ಪರಮಾವಧಿಯೆಡೆಗೆ ಆತ ಮುಂದುವರೆಯುತ್ತಾನೆ. ಒಂದು ರೀತಿಯ ಭಾವಾವೇಶತೆ, ಇಡೀ ಕತೆಯಲ್ಲಿ ಗೋಚರವಾಗುತ್ತದೆ. ಆದ್ದರಿಂದಲೇ ವಾಸ್ತವಿಕತೆಯ ಕೊರತೆ ಸ್ವಲ್ಪಮಟ್ಟಿಗೆ ಕಾಡುತ್ತದೆ. ಲಕ್ಷ್ಮಣನಿಗೆ ಅವನ ಕಲಾಜೀವನದಲ್ಲಿ ಯಾವ ತೊಡಕೂ ಎದುರಾಗುವುದಿಲ್ಲ. ಅವನ ಜೀವನದ ಇತರ ಸಮಸ್ಯೆಗಳು ಆ ಕಲೆಯನ್ನು ಕೆಲಕಾಲ ಮಂಕುಗೊಳಿಸುತ್ತದೆ. ಅದು ಬಿಟ್ಟರೆ ಅವನ ಕಲಾಪ್ರಪಂಚದಲ್ಲಿ ಯಾವ ಅಡ್ಡಿ – ಆತಂಕಗಳೂ ಬರುವುದಿಲ್ಲ.

---

೧. ಸಂಧ್ಯಾರಾಗ – ಅ.ನ.ಕೃ. ಪು. ೧೭೪.

೨. 'ರಸಚೇತನ' – ಅ.ನ.ಕೃ. ಸಾಹಿತ್ಯದಲ್ಲಿ ಪುರುಷ ಪಾತ್ರಗಳು – ಎಲ್.ವ್ಹಿ.ಪೈ. ಪು. ೪೬೨.)

ಅದೇ ರೀತಿ ಕೃತಿಯ ಆರಂಭದಲ್ಲಿ ಲೇಖಕರು ಹೇಳುವಂತೆ ಪೂರ್ಣ ಜೀವನವನ್ನು ಲಕ್ಷ್ಮಣ ಯಾವ ರೀತಿ ಸಾಧಿಸುತ್ತಾನೆಂಬುದು ಮುಖ್ಯಪ್ರಶ್ನೆ. ಲಕ್ಷ್ಮಣ ಪೂರ್ಣತೆಯನ್ನು, ಸಾರ್ಥಕತೆಯನ್ನು ತನ್ನ ಕಲೆಯಲ್ಲಿ ಸಾಧಿಸುತ್ತಾನೆಯೇ ಹೊರತು, ಜೀವನದಲ್ಲಿ ಅಲ್ಲ. ಇದು ಕಾದಂಬರಿಯಲ್ಲೇ ಸ್ಪಷ್ಟವಾಗುವ ಅಂಶ. ಇದಕ್ಕೆ ಮುಖ್ಯವಾಗಿ ಲೇಖಕರ ದೃಷ್ಟಿಯೇ ಕಾರಣ.

ಕಾದಂಬರಿ ಪ್ರಮುಖವಾಗಿ ಒತ್ತುಕೊಟ್ಟಿರುವುದು ಲಕ್ಷ್ಮಣನ ಕಲೆಗೆ. ಇಲ್ಲಿ ಅವನ ಕಲೆಯು ಜೀವನಕ್ಕಿಂತಲೂ ಹೆಚ್ಚಿನ ಸ್ಥಾನ ಪಡೆದಿದೆ. ಈ ಪ್ರಯತ್ನದಲ್ಲಿ ಲಕ್ಷ್ಮಣನ ಜೀವನ ಸೋಲನ್ನನುಭವಿಸಿದೆ. ಆದರೆ 'ಸಂಧ್ಯಾರಾಗ' ಒಂದು ಶ್ರೇಷ್ಠ ಕಾದಂಬರಿ. ಅದರ ಕಥಾವಸ್ತು ಹಾಗೂ ಕತೆಯಲ್ಲಿ ಕಲೆಗೆ ನೀಡಿರುವಂತಹ ಮಹತ್ವ ಅನನ್ಯವಾದುದು. ಜೀವನವನ್ನೂ ಮೀರಿ ಇಲ್ಲಿ ಕಲೆಯ ಪಾತ್ರ ನಿಲ್ಲುತ್ತದೆ. ಒಟ್ಟಿನಲ್ಲಿ ಕಾದಂಬರಿಯು, 'ಕಲೆ' ಮಾನವ ಜೀವನಕ್ಕಿಂತಲೂ ಮಿಗಿಲಾದ ಅನನ್ಯ ಶಕ್ತಿಯೆಂಬುದನ್ನು ಧ್ವನಿಸುತ್ತದೆ.

* * *

## ಅಧ್ಯಾಯ – ೪

# ‘ಸುಬ್ಬಣ್ಣ’ದ ಪಾತ್ರಗಳು

ಒಂದು ಕೃತಿಯ ಅಂತಃಸತ್ವವೆಂದರೆ, ಆ ಕೃತಿಯ ಪಾತ್ರಗಳು. ಕೃತಿಯೊಂದಕ್ಕೆ ಜೀವ ತುಂಬುವಂತಹ ಶಕ್ತಿ, ಆ ಕೃತಿಯ ಪಾತ್ರಗಳಿಗಿರುತ್ತದೆ, ಕೃತಿಕಾರನ ದೃಷ್ಟಿ–ಧೋರಣೆ, ಮನೋಧರ್ಮಗಳನ್ನು ಪಾತ್ರಗಳು ತಮ್ಮ ವರ್ತನೆಯ ಮೂಲಕ ಸ್ಪಷ್ಟಪಡಿಸುತ್ತವೆ. ಕೆಲವೊಮ್ಮೆ ಪಾತ್ರಗಳು ಲೇಖಕನ ನಿಯಂತ್ರಣವನ್ನು ಮೀರಿ, ಸ್ವತಂತ್ರವಾಗಿ–ಸಹಜವಾಗಿ ಬೆಳೆಯಬಲ್ಲವು. ಒಟ್ಟಿನಲ್ಲಿ ಪಾತ್ರಗಳು ಲೇಖಕನ ಪ್ರತಿಭೆಯ ಪ್ರತೀಕಗಳು.

ಮಾಸ್ತಿಯವರು ತಮ್ಮ ಸಾಹಿತ್ಯದಲ್ಲಿ ತರುವುದು ಸರಳ ಪಾತ್ರಗಳನ್ನೇ. ಸಮಾಜದಲ್ಲಿ ಕಂಡುಬರುವ ಸಾಮಾನ್ಯ ಪಾತ್ರಗಳು ಅವರ ಸಾಹಿತ್ಯದಲ್ಲಿ ಹೊಸತನವನ್ನು ಪಡೆದು ಅರಳುತ್ತವೆ. ಒಬ್ಬ ಸಾಧಾರಣ ವ್ಯಕ್ತಿಗಳೂ ಅಸಾಧಾರಣ ವ್ಯಕ್ತಿತ್ವವನ್ನು ಪಡೆದು ಅಪೂರ್ವವಾಗುವಂತೆ ಮಾಡುವ ಕಲೆ ಮಾಸ್ತಿಯವರಿಗಿದೆ.

‘ಸುಬ್ಬಣ್ಣ’ ನೀಳ್ಗತೆಯಲ್ಲಿ ಸುಬ್ಬಣ್ಣನ ಜೀವನಯಾತ್ರೆ ಪ್ರಧಾನವಾಗಿದ್ದರೂ, ಸುಬ್ಬಣ್ಣ ಇದರ ನಾಯಕನಾದರೂ ಉಳಿದ ಪಾತ್ರಗಳು ಜೀವಂತಿಕೆಯಲ್ಲಿ ಮೈವೆತ್ತಿವೆ. ಇಲ್ಲಿನ ಪ್ರತಿಯೊಂದು ಪಾತ್ರವೂ ಓದುಗರ ಗಮನವನ್ನು ಸೆಳೆಯುವಲ್ಲಿ ಯಶಸ್ವಿಯಾಗಿವೆ.

‘ಸುಬ್ಬಣ್ಣ’ ಈ ಕಿರುಕಾದಂಬರಿಯ ಕೇಂದ್ರ ವ್ಯಕ್ತಿ. ಸುಬ್ಬಣ್ಣ ಕಲಾವಿದನಾದರೂ, ಆತನ ಆತ್ಮೋದ್ಧಾರ ಕತೆಯ ಮುಖ್ಯ ಕಾಳಜಿ. ‘ಸುಬ್ಬಣ್ಣ’ ಒಬ್ಬ ಸಾಧಾರಣ ವ್ಯಕ್ತಿ, ಆದರೆ ಆತನ ವ್ಯಕ್ತಿತ್ವ ಮಾಗುತ್ತಾ, ಪರಿಪಕ್ವವಾಗುತ್ತಾ ಒಂದು ಅಸಾಮಾನ್ಯ ವ್ಯಕ್ತಿತ್ವವನ್ನು ಆತ ಗಳಿಸುತ್ತಾನೆ. ಅವನ ಆತ್ಮೋದ್ಧಾರದಿಂದಾಗಿ ಅವನ ಸಂಗೀತವೂ ಉದ್ಧಾರಗೊಳ್ಳುತ್ತದೆ. ಕಠಿಣ ಶಿಲೆಯೊಂದು, ಅಪರಂಜಿಯಾಗುವ ರೀತಿ, ಸುಬ್ಬಣ್ಣನೂ ಒಬ್ಬ ವಿಶಿಷ್ಟ ವ್ಯಕ್ತಿಯಾಗಿ ರೂಪುಗೊಳ್ಳುತ್ತಾನೆ.

ಬಾಲ್ಯದಿಂದಲೂ ಸುಬ್ಬಣ್ಣನಿಗೆ ಸಂಗೀತದ ಬಗೆಗೇ ಹೆಚ್ಚಿನ ಆಸಕ್ತಿ. ಅವನ ತಂದೆ ಪುರಾಣದ ಶಾಸ್ತ್ರಿಗಳಿಗೆ ಮಗನು ಸಂಸ್ಕೃತದಲ್ಲಿ ಪಾಂಡಿತ್ಯಗಳಿಸಬೇಕೆಂಬ ಹಂಬಲ. ಆದರೆ ಸುಬ್ಬಣ್ಣ ಅವನ ತಂದೆಯ ಆಸೆಯಂತೆ ನಡೆಯುವುದಿಲ್ಲ. ಒಮ್ಮೆ ಪ್ರಭುಗಳು ಆತ ಸಂಗೀತದಲ್ಲಿ ವಿದ್ವಾಂಸನಾದರೆ ಖಿಲ್ಲತ್ತು ಕೊಡುತ್ತೇವೆ ಎಂದು ಹುರಿದುಂಬಿಸುತ್ತಾರೆ. ಇದು ಹುಡುಗ ಸುಬ್ಬಣನ ಮೇಲೆ ಪರಿಣಾಮ ಬೀರುತ್ತದೆ. ಆ ವಯೋಸಹಜವಾದ ಆಸೆ, ಅವನಲ್ಲಿ ಸಂಗೀತಗಾರನಾಗಲೇಬೇಕೆಂಬ ಮಹದಾಸೆಯನ್ನು ಬಿತ್ತುತ್ತದೆ. ಕೇವಲ ಮಹಾರಾಜರಿಂದ ಸನ್ಮಾನಿಸಿಕೊಳ್ಳಬೇಕೆಂಬ ಅಭಿಲಾಶೆ ಅವನನ್ನು ಸಂಗೀತಗಾರನಾಗಲು ಪ್ರೇರೇಪಿಸಿತು. ಅಂದರೆ ಸಂಗೀತದಲ್ಲಿ ಸಾಧನೆ ಮಾಡಬೇಕೆಂಬ ಯಾವುದೇ ಉನ್ನತ ಆದರ್ಶಗಳು ಒಂದು ಹಂತದವರೆಗೂ ಅವನಲ್ಲಿ ಮೂಡಿರುವುದಿಲ್ಲ.

ಕತೆಯು ನಡೆದ ಕಾಲಘಟ್ಟದಲ್ಲಿ ಸಂಗೀತದ ಬಗ್ಗೆ ಉತ್ತಮ ಅಭಿಪ್ರಾಯಗಳಿರುವುದಿಲ್ಲ. ಕಾರಣ ಸಂಗೀತದ ಅಭ್ಯಾಸಕ್ಕೆ ವಾರಸ್ತ್ರೀಯರ ಮನೆಗಳಿಗೂ ಹೋಗಬೇಕಾಗುತ್ತಿತ್ತು. ಆದರೆ ಸುಬ್ಬಣ್ಣ ಇವೆಲ್ಲವನ್ನೂ ಮೀರುತ್ತಾನೆ. ಅಂದಿನ ಸಾಮಾಜಿಕ ವ್ಯವಸ್ಥೆಯನ್ನೂ ದಾಟುತ್ತಾನೆ. ಹೀಗೆ ವಿವಿಧ ಸಂಗೀತ ಕಛೇರಿಗಳಿಗೆ ಭೇಟಿ ನೀಡಿ, ಹಲವಾರು ವಾರಸ್ತ್ರೀಯರ ಮನೆಗಳಲ್ಲಿ ನಡೆಯುವ ಸಂಗೀತ ಸಭೆಯಲ್ಲಿ ಭಾಗವಹಿಸಿ, ಆತ ದೊಡ್ಡ ಸಂಗೀತಗಾರರ ಸಮುದಾಯದಲ್ಲಿ ಸೇರಿಹೋದನೆಂದು ನಿರೂಪಕರು ಹೇಳುತ್ತಾರೆ. ಆದರೆ ಯಾವ ಗುರುವಿನ ನೆರವೂ ಇಲ್ಲದೆ, ತಾನಾಗಿ ಸಂಗತಿ–ವರೇಕುಗಳನ್ನು ಹಾಕುತ್ತಾ, ಅಭಿಜಾತ ರಾಗಗಳಲ್ಲಿ ಪ್ರಾವೀಣ್ಯತೆ ಸಾಧಿಸಿದ್ದಾದರೂ ಹೇಗೆ ಎಂಬ ಪ್ರಶ್ನೆ ಮೂಡುವುದು ಸಹಜ. ಇದು ಗುರುವಿನ ನೆರವಿಲ್ಲದೆ ಸಾಧಿಸುವುದು ಸುಲಭವಲ್ಲ ಎಂಬುದು ಸತ್ಯ. ಆದರೆ ಸುಬ್ಬಣ್ಣ ಒಂದು ರೀತಿಯಲ್ಲಿ ಏಕಲವ್ಯನಿದ್ದಂತೆ. ಸುಬ್ಬಣ್ಣನಲ್ಲಿ ಚಿಕ್ಕಂದಿನಲ್ಲೇ ದೈವದತ್ತವಾದ ಪ್ರತಿಭೆ ಸಿದ್ಧಿಸಿತ್ತು. ಈ ಕಾರಣದಿಂದಲೇ ಆತ ತಂದೆಯಂತೆ ಸಂಸ್ಕೃತದೆಡೆಗೆ ಸರಿಯದೆ, ಸಂಗೀತದತ್ತ ಹೊರಳುತ್ತಾನೆ. ಅದು ಮತ್ತಷ್ಟು ಸ್ಥಿರವಾದುದು ಮಾತ್ರ ಮಹಾರಾಜರ ಮಾತುಗಳಿಂದ.

ಸುಬ್ಬಣ್ಣನು ತನ್ನ ಸಂಗೀತಾಭ್ಯಾಸದ ಭರದಲ್ಲಿ ತನ್ನ ಸಂಸಾರದ ಬಗೆಗೆ ಹೆಚ್ಚುಗಮನವನ್ನು ನೀಡುವುದಿಲ್ಲ. ಹೆಂಡತಿಯನ್ನು ಕುತ್ತಿಗೆಗೆ ಸುತ್ತಿದ ಶನಿ ಎಂದೇ ಭಾವಿಸಿರುತ್ತಾನೆ. ಆತ ಯಾರದೋ ಮೇಲಿನ ಕೋಪಕ್ಕಾಗಿ ಹೆಂಡತಿಯನ್ನು ಹೊಡೆದಾಗಲಂತು, ಒಂದು ಕ್ಷಣ ಸುಬ್ಬಣ್ಣ ಓದುಗರ ದೃಷ್ಟಿಯಲ್ಲಿ ಕೆಳಗಿಳಿಯುತ್ತಾನೆ. ಸುಬ್ಬಣ್ಣನದು ಎಂತಹ ಸಂಕುಚಿತ ವ್ಯಕ್ತಿತ್ವ ಎಂದು ಯೋಚಿಸುವಂತಾಗುತ್ತದೆ. ಆದರೆ ಇದೇ ಸುಬ್ಬಣ್ಣ ತನ್ನ ಹೆಂಡತಿಗೆ ಮನೆಯಲ್ಲಿ ಅನ್ಯಾಯವಾಗುತ್ತಿದೆ ಎಂದಾಗ ಮನೆಯನ್ನು ತೊರೆಯುತ್ತಾನೆ. ಅವನ ಈ ನಿರ್ಧಾರ ಮೆಚ್ಚುವಂತದ್ದು. ಇದುವರೆಗೂ ಅವನ ಪ್ರಪಂಚದಲ್ಲಿದ್ದುದು ಸಂಗೀತ ಒಂದೇ. ಈ ನಿರ್ಧಾರದೊಂದಿಗೆ ಸುಬ್ಬಣ್ಣ ಸಂಸಾರದತ್ತ ಮುಖ ಮಾಡುತ್ತಾನೆ. ಇದು ಅವನ ಪರಿವರ್ತನೆಯ ಆರಂಭದ ಹಂತ. ನಂತರದಲ್ಲಿ ಸುಬ್ಬಣ್ಣ ಒಬ್ಬ ಗೃಹಸ್ಥನಂತೆ ತೋರಿಬರುತ್ತಾನೆ. ಆದರೆ ಅವನ ಹಠ, ಅಹಂಕಾರಗಳು ಅವನಿಂದ ದೂರವಾಗುವುದು ಸಾಕಷ್ಟು ಸಮಯದ ನಂತರ.

ತನ್ನ ಹಠದ ಕಾರಣದಿಂದಾಗಿಯೇ ಸುಬ್ಬಣ್ಣ ತಂದೆ–ತಾಯಿಯನ್ನು ಭೇಟಿ ಮಾಡುವ ಅವಕಾಶವಿದ್ದರೂ ಅವರನ್ನು ಭೇಟಿ ಮಾಡುವುದಿಲ್ಲ. ಎಂತಹ ಸಂದರ್ಭದಲ್ಲೂ ತನ್ನ ನಿರ್ಧಾರವನ್ನು ಸಡಿಲಿಸದ ಅವನ ಗುಣ, ತಂದೆ–ತಾಯಿಯರ ಮೇಲಿನ ಅವನ ಮಮತೆಯನ್ನೂ ಮೀರಿ ನಿಲ್ಲುತ್ತದೆ. ಒಬ್ಬ ಮಗನಾಗಿ ನಡೆದುಕೊಳ್ಳಬೇಕಾದ ರೀತಿಯಲ್ಲಿ ಅವನು ನಡೆದುಕೊಳ್ಳುವುದಿಲ್ಲ. ಅವನ ವ್ಯಕ್ತಿತ್ವದ ಮಿತಿಗಳು ಇಲ್ಲಿ ಸ್ಪಷ್ಟಗೋಚರವಾಗುತ್ತದೆ.

'ಸುಬ್ಬಣ್ಣ'ನ ವ್ಯಕ್ತಿತ್ವದ ಬದಲಾವಣೆಗೆ ಕಾರಣವಾಗುವುವು ಅವನ ಕಲ್ಕತ್ತೆಯ ಜೀವನ ಹಾಗೂ ಅಲ್ಲಿ ಅವನು ಅನುಭವಿಸುವ ಅಪಾರಕಷ್ಟಗಳು. ತನ್ನ ಸಂಸಾರದ ಸಣ್ಣ–ಪುಟ್ಟ ಅವಶ್ಯಕತೆಗಳನ್ನು ಸುಬ್ಬಣ್ಣ ಪೂರೈಸಿಕೊಳ್ಳಲು ಅಲ್ಲಿ ಸಾಧ್ಯವಾದರೂ, ಅವನು ಸುಖವನ್ನನುಭವಿಸುವುದಿಲ್ಲ. ಯಾರೊಂದಿಗೂ ಹೊಂದಿಕೊಳ್ಳಲು ಇಚ್ಛಿಸದ ಅವನ ಗುಣವೇ ಇದಕ್ಕೆ ಕಾರಣ. ಆದರೆ ಸುಬ್ಬಣ್ಣ ಇಲ್ಲಿ ತನ್ನ ಹೆಂಡತಿ ಮಕ್ಕಳಿಗೆ ಹೆಚ್ಚು ಹತ್ತಿರವಾಗುತ್ತಾನೆ. ಆ

ಮೂಲಕ ಅವನ ಅಹಂಕಾರ, ಹಠದ ಸ್ವಭಾವಗಳು ಕರಗಲು ಆರಂಭಿಸುತ್ತದೆ. ಇಲ್ಲಿಂದ ಅವನ ಆತ್ಮಯಾತ್ರೆಯು ಅವನಿಗರಿವಿಲ್ಲದಂತೆಯೇ ಆರಂಭವಾಗುತ್ತದೆ.

ಲಕ್ಷ್ಮಣನ ಸಂಗೀತದ ಬದುಕು ಆರಂಭವಾಗುವುದು ಕಲ್ಕತ್ತೆಯಲ್ಲಿಯೇ. ಅಲ್ಲಿ ಅವನು ವಿವಿಧ ಶೋಕ ಪರಂಪರೆಗೆ ಗುರಿಯಾಗಬೇಕಾಗಿ ಬರುತ್ತದೆ. ತನ್ನ ಸಂಸಾರವನ್ನೆಲ್ಲ ಸುಬ್ಬಣ್ಣ ಕಳೆದುಕೊಳ್ಳುತ್ತಾನೆ. ಆದರೆ ಅವನು ಅನುಭವಿಸುವ ಕೌಟುಂಬಿಕ ದುರಂತಗಳು, ಅವನ ವ್ಯಕ್ತಿತ್ವದಲ್ಲಿ ಆಶ್ಚರ್ಯಕರವಾದ ಬದಲಾವಣೆಯನ್ನು ತರುತ್ತವೆ. ಅವನನ್ನು ಹೆಚ್ಚು–ಹೆಚ್ಚು ಮೌನಿಯೂ, ಅಂತರ್ಮುಖಿಯೂ ಆಗಿ ಮಾಡುತ್ತದೆ. ಹೆಂಡತಿಯು ಖಾಯಿಲೆಗೆ ತುತ್ತಾದಾಗ ಸುಬ್ಬಣ್ಣನ ವರ್ತನೆ ಅತ್ಯಂತ ಸ್ನೇಹಮಯ. ಹೆಂಡತಿಯನ್ನು ಮಗುವಿನಂತೆಯೇ ಸುಬ್ಬಣ್ಣ ನೋಡಿಕೊಳ್ಳುತ್ತಾನೆ. ತನ್ನ ಸ್ವಾರ್ಥ, ಹಟ, ಅಹಂಕಾರಗಳಲ್ಲೇ ಮುಳುಗಿಹೋಗಿದ್ದ ಸುಬ್ಬಣ್ಣ ಆತ್ಮ ವಿಮರ್ಶೆಯ ಹಂತವನ್ನು ತಲುಪಿರುವುದನ್ನು ಕಾಣಬಹುದು. ನಾಸ್ತಿಕನಾಗಿದ್ದ ಸುಬ್ಬಣ್ಣ, ಆಸ್ತಿಕನಾಗುತ್ತಾನೆ. ಎಲ್ಲಕ್ಕಿಂತಲೂ ಹೆಚ್ಚಾಗಿ ಸುಬ್ಬಣ್ಣನಲ್ಲಿ ಜೀವನದ ಮೂಲಭೂತ ಪ್ರಶ್ನೆಗಳು ಹುಟ್ಟಲಾರಂಭಿಸಿರುತ್ತದೆ. ಹುಟ್ಟು–ಸಾವುಗಳ ಜಿಜ್ಞಾಸೆ ಅವನನ್ನು ಕಾಡಲಾರಂಭಿಸುತ್ತದೆ.

ಸುಬ್ಬಣ್ಣನಲ್ಲಿ ಆವರಿಸುವುದು ಒಂದು ಬಗೆಯ ಶೂನ್ಯ ವಿರಕ್ತಿ. ಈ ಶೂನ್ಯತೆಯ ಹಂತದಲ್ಲಿಯೇ 'ಸುಬ್ಬಣ್ಣ' ಉಳಿದುಬಿಟ್ಟಿದ್ದರೆ, ಅದು ಒಂದು ಮಹತ್ವದ ಪಾತ್ರವಾಗುತ್ತಲೇ ಇರಲಿಲ್ಲ. ಆದರೆ ಈ ಶೂನ್ಯತೆಯನ್ನು 'ಸುಬ್ಬಣ್ಣ' ದಾಟುತ್ತಾನೆ. ತನ್ನವರಲ್ಲದವರನ್ನೂ ತನ್ನವರೆಂದು ಭಾವಿಸಿ ಪ್ರೀತಿ ತೋರುತ್ತಾನೆ.

ಮಿಠಾಯಿ ಅಂಗಡಿಯ ಮುಂದೆ ಪಿಟೀಲು ಬಾರಿಸಿದಾಗ, ಸಾಹುಕಾರನ ಮನೆಯಲ್ಲಿ, ಅವನ ಮಗಳು ಹಣ್ಣು ಕೊಟ್ಟಾಗ, 'ಸುಬ್ಬಣ್ಣ'ನಿಗೆ ಒಂದೊಂದು ಸಂದರ್ಭದಲ್ಲೂ ಜೀವನದ ಹೊಸ ಅನುಭವವಾಗುತ್ತದೆ. "ಕಟ್ಟಿಕೊಂಡವರಿಗೆ ಬಿಟ್ಟ ದುಃಖ ತಪ್ಪಿದ್ದಲ್ಲ ಬಿಟ್ಟೇ ಇರುವವನಿಗೆ ದುಃಖವೇ ಇಲ್ಲ"– ಎಂಬ ಗೀತೆಯ ಸತ್ಯ ಸುಬ್ಬಣ್ಣನಿಗೆ ಅರಿವಾಗುತ್ತದೆ. ಸಾಹುಕಾರ ಮನೆಯಲ್ಲಿ 'ಸಾವಿರಹೇ ತವ ದೀನಾ' ಎಂದು ಪಿಟೀಲು ನುಡಿಸುತ್ತಿರುವಾಗ, ವಿರಹದಿಂದ ವ್ಯಥೆಪಡುತ್ತಿರುವವನು ತಾನೇ ಎಂದು, ತನ್ನ ದೇವರನ್ನು ಕಾಣಲು ಪಡುತ್ತಿರುವ ಕ್ಷೋಭೆಯೇ ವಿರಹವೆಂದು ಸುಬ್ಬಣ್ಣನಿಗೆ ಭಾಸವಾಗುತ್ತದೆ. ಇಷ್ಟುವರ್ಷಗಳ ಅವನ ಜೀವನಾನುಭವ ಅವನಲ್ಲಿ ಈ ಶರಣಾಗತಿಯ ಭಾವವನ್ನು ತಂದಿವೆ.

ಅದುವರೆಗೂ ತಂದೆ–ತಾಯಿಯರ ಬಗೆಗೆ ಮೂಡಿದ್ದ ಭಾವನೆಯನ್ನು ಹತ್ತಿಕ್ಕುತ್ತಿದ್ದ ಸುಬ್ಬಣ್ಣ, ಅವರಲ್ಲಿ ಕ್ಷಮಾಪಣೆ ಕೇಳಲು ಹೊರಡುತ್ತಾನೆ. ಅವರು ತೀರಿಹೋದರೆಂಬ ಸುದ್ದಿಯನ್ನು ಕೇಳಿ, ಅವರಿಗೆ ತರ್ಪಣ ಬಿಡುತ್ತಾನೆ, ಅದು ಮಗನಾಗಿ ಅವನು ಮಾಡಲು ಸಾಧ್ಯವಾದ ಏಕೈಕ ಕರ್ತವ್ಯ. ಆ ತಿಳಿವು – ಪಶ್ಚಾತ್ತಾಪ ಅವನಿಗುಂಟಾಗಿದೆ. ಅವನ ಆತ್ಮ ಕೇಂದ್ರಿತ ವ್ಯಕ್ತಿತ್ವ ವಿಶ್ವಕೇಂದ್ರಿತವಾಗುತ್ತಾ ಹೋಗುವುದು ಇಲ್ಲಿ ಸ್ಪಷ್ಟವಿದೆ.

ಯಾರದೋ ಮನೆಯ ಜಗುಲಿ, ಯಾವುದೋ ದೇವಸ್ಥಾನ ಮುಂಭಾಗಗಳಲ್ಲಿ ಕಾಲಕಳೆಯುವ ಸುಬ್ಬಣ್ಣ, ಇತರರಿಗೆ ತನ್ನಿಂದಾಗುವ ಉಪಕಾರಗಳ ಬಗ್ಗೆ ಯೋಚಿಸಲಾರಂಭಿಸುತ್ತಾನೆ. ಆದರೆ ಇತರರಿಂದ ಅವನ ಅಪೇಕ್ಷೆ ಶೂನ್ಯ. ಬದಲಿಗೆ ಯಾರ ಸಹವಾಸವೂ ತನಗೆ ಬೇಡ, ಸಂಸಾರದ ಬಂಧನವೇ ಬೇಡ ಎಂಬ ನಿಸ್ಸಂಗತ್ವ ಅವನನ್ನು ಆವರಿಸುತ್ತದೆ. ಆದರೆ ಈ ಭಾವನೆ ಸುಬ್ಬಣ್ಣನಲ್ಲಿ ಹೆಚ್ಚು ದಿನ ಉಳಿಯುವುದು ಸಾಧ್ಯವಿರಲಿಲ್ಲ. ಅಂತೆಯೇ ನಟುವರ ವೆಂಕಟರಮಣನಿಗೆ ಪ್ರೀತಿಯಿಂದ ಪಾಠವನ್ನು ಹೇಳಿಕೊಡುತ್ತಾನೆ. ಎಲ್ಲವನ್ನೂ ಕಳೆದುಕೊಂಡದ್ದಾಯಿತು, ಇನ್ನು ಈ ಸಂಸಾರದ ಯಾವ ವಸ್ತುವಿನ ಬಗೆಗೂ ತನಗೆ ಮೋಹ ಬೇಡ, ಎಂದು ಭಾವಿಸುವ ಸುಬ್ಬಣ್ಣನಲ್ಲಿ ಉಳಿದದ್ದು ಅವನ ಸಂಗೀತದ ಹೆಮ್ಮೆ ಮಾತ್ರ. ಅದನ್ನೂ ಬಿಡಬೇಕೆಂದು ನಿರ್ಧರಿಸುವ ಸುಬ್ಬಣ್ಣ, ಪಿಟೀಲನ್ನು ಒಡೆಯಲು ಮನಸ್ಸು ಬಾರದೆ, ನೀರಿನಲ್ಲಿ ಬಿಟ್ಟು ಬರುತ್ತಾನೆ. ಆದರೆ ಪ್ರಾಣವೇ ಕಳೆದುಕೊಂಡವನಂತೆ ಸಂಕಟ ಅನುಭವಿಸುತ್ತಾನೆ. ಪಿಟೀಲು ಅವನನ್ನು ಬಿಟ್ಟು ಹೋಗುವುದಿಲ್ಲ. ಆರಂಭದಿಂದಲೂ ಸಂಗೀತಗಾರನಾಗಿದ್ದ ಸುಬ್ಬಣ್ಣನ ಅಂತರ್ಮುಖಿತನಕ್ಕೆ ಈ ಪಿಟೀಲು ಒಂದು ಸಂಕೇತ. ಸಂಗೀತ ಸದಾ ಅವನ ಜೊತೆಯಲ್ಲಿದ್ದುದಕ್ಕೂ, ಅದನ್ನು ಅವನು ಬಿಡಲು ಪ್ರಯತ್ನಿಸುವುದಕ್ಕೂ, ಒಂದು ಪ್ರತೀಕ. ಇದರಿಂದ ಸುಬ್ಬಣ್ಣ ಹೆಚ್ಚು ಮೌನಿಯಾಗಲು ಅನುಕೂಲಕರವಾಗಿದೆ.

ಆರಂಭದಲ್ಲಿ ನಿರಾಕರಿಸಿದರೂ, ಅನಂತರ ಸುಬೇದಾರರ ಮಗಳಿಗೆ ಪಿಟೀಲು ಹೇಳಿಕೊಡಲು ಒಪ್ಪುತ್ತಾನೆ. ಮಾತ್ರವಲ್ಲ ಆ ಕುಟುಂಬದೊಂದಿಗೆ ಹೃತ್ಪೂರ್ವಕವಾದ ಸಂಬಂಧ ಬೆಳೆಸಿಕೊಳ್ಳುತ್ತಾನೆ. ಸಹಮಾನವಪ್ರೇಮ, ಆತ್ಮೀಯತೆಗಳಿಂದ ತನ್ನ ಬದುಕಿನ ಶೂನ್ಯವನ್ನು ಸುಬ್ಬಣ್ಣ ತುಂಬಿಕೊಳ್ಳುತ್ತಾನೆ. ತನ್ನ ಪ್ರೇಮವನ್ನು ಇತರರಿಗೆ ನೀಡಿ, ಅವರಿಂದ ಪ್ರೇಮವನ್ನು ಪಡೆಯುವಲ್ಲಿ ಒಂದು ಬಗೆಯ ಆನಂದವನ್ನು ಕಂಡುಕೊಳ್ಳುತ್ತಾನೆ.

ಸಂಸಾರ ಸಾಗರವನ್ನು ಸುಬ್ಬಣ್ಣ ಈಸಿ ಜಯಿಸಿದರೂ, ಅದರಿಂದ ಪೂರ್ಣ ಬಿಡುಗಡೆ ಅವನಿಗೆ ಸಾಧ್ಯವಾಗಲಿಲ್ಲ. ತಾನು ಎಷ್ಟೇ ಜೀವನದಿಂದ ಹೊರಗುಳಿಯಲು ಪ್ರಯತ್ನಿಸಿದರೂ, ಅದರ ಆವರಣದೊಳಗೇ ಸೇರಿಕೊಳ್ಳುತ್ತಾನೆ. ಜೀವನದ ಅಂತ್ಯದವರೆಗೂ ಅವನ ಈ ಪ್ರಯತ್ನ ನಡದೇ ಇದೆ. ಅದಕ್ಕೆ ಪ್ರತಿಯಾಗಿ ಅವನ ಮನಸ್ಸು ಜೀವನದೆಡೆಗೆ ತುಡಿಯತ್ತದೆ, ಇತರ ಮಾನವ ಸಂಬಂಧಗಳಿಗೆ ಸ್ಪಂಧಿಸುತ್ತದೆ.

ಸುಬ್ಬಣ್ಣನ ಜೀವನದ ಆರಂಭದಿಂದ ಅಂತ್ಯದವರೆಗೂ ಸಂಗೀತ ಅವನ ಜೊತೆಯಾಗಿ ನಿಲ್ಲುತ್ತದೆ. ಅವನ ಆತ್ಮೋದ್ಧಾರಕ್ಕೆ ಪೋಷಕವಾಗಿದೆ. ಸುಬ್ಬಣ್ಣ ಉದ್ಧಾರವಾಗುವುದು, ಆತನ ಜೀವನದ ಕಷ್ಟ-ಸುಖಗಳ ಪರಿಪಾಕದಿಂದ, ಆತನ ಸಂಗೀತದಿಂದಲ್ಲವೆಂಬುದು ಸತ್ಯ. ಆದರೆ ಆತ ಉದ್ಧಾರವಾದದ್ದರಿಂದ ಅವನ ಸಂಗೀತವೂ ಅಪೂರ್ವ, ಕಾಂತಿಯನ್ನು ಪಡೆಯಿತು. ಅಂತಹ ಸಂಗೀತದ ಜೊತೆ ಇದ್ದದ್ದರಿಂದಲೇ ಸುಬ್ಬಣ್ಣ ತನ್ನ ಏಕಾಂಗಿತನವನ್ನು ನೀಗಿಕೊಳ್ಳಲು ಸ್ವಲ್ಪವಾದರೂ ಸಾಧ್ಯವಾಯಿತು. ಅವನ ಜೀವನದ ಕಡೆಯ ಘಟ್ಟದಲ್ಲಿ, ಜೀವನದಲ್ಲಿ ಯಾರ ಸಹವಾಸವೂ ಬೇಡವೆಂದು ಅವನು ಭಾವಿಸಿದ್ದ ಸಂದರ್ಭದಲ್ಲಿ, ಅವನನ್ನು ಇತರ ಮಾನವ ಸಂಬಂಧಗಳೊಡನೆ

ಹೊಂದಿಸುವುದು ಅವನ ಸಂಗೀತವೇ. ಬದುಕಿನ ಕಷ್ಟ–ನಷ್ಟಗಳ ಫಲವಾದ ಅವನ ವಿರಕ್ತಿಯ ಭಾವ, ಅಂತೆಯೇ ಅದನ್ನು ತುಂಬುವ ಸಹಮಾನವ ಪ್ರೇಮ ಎಲ್ಲವೂ ಸುಬ್ಬಣ್ಣನನ್ನು ಪರಿಪಕ್ವಗೊಳಿಸಿದವು. ಈ ಹಿನ್ನಲೆಯಲ್ಲಿ ಅವನ ಕಲೆಯೂ ಪರಿಪಕ್ವವಾಯಿತು. ಆ ಮೂಲಕ ಒಂದು ತಿಳಿವೂ ಸುಬ್ಬಣ್ಣನಿಗೆ ಸಾಧ್ಯವಾಯಿತು. ತನ್ನ ಸಂಗೀತದಲ್ಲಿ ಸುಬ್ಬಣ್ಣ ಮಹತ್ತರವಾದದ್ದೇನನ್ನೂ ಸಾಧಿಸಲಿಲ್ಲ, ಸಂಗೀತಕ್ಕಾಗಿಯೇ ತನ್ನ ಬದುಕನ್ನು ಅರ್ಪಿಸಿಕೊಳ್ಳಲಿಲ್ಲ, ಆದರೆ ಒಂದು ಉತ್ತಮವಾದ ಜೀವನವನ್ನು ಆತ ಬದುಕಿದ, ಸಾಧಿಸಿದ – ಎಂಬುದರಲ್ಲಿ ಉತ್ಪ್ರೇಕ್ಷೆಯಿಲ್ಲ. ವೈರಾಗ್ಯ, ಭಕ್ತಿ, ಜ್ಞಾನ ಅಂತೆಯೇ ಜೀವನ ಪ್ರೀತಿ, ಎಲ್ಲವೂ ಏಕಕಾಲದಲಿ ಅವನಿಗೆ ಸಿದ್ಧಿಸಿದವು.

ವಾಸ್ತವವಾಗಿ ನವರತ್ನರಾಮರಾಯರ ಪರಿಚಿತ ವೃದ್ಧಗಾಯಕ 'ಶಾಮಣ್ಣ', ಮಾಸ್ತಿಯವರ ಕಥೆಯಲ್ಲಿ ಸುಬ್ಬಣ್ಣನಾಗಿದ್ದಾನೆ. ಇದನ್ನು ಮಾಸ್ತಿಯವರೂ ತಮ್ಮ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ. ಆದರೆ ಶಾಮಣ್ಣ, ಸುಬ್ಬಣ್ಣನಾಗುವಲ್ಲಿ ಎಷ್ಟರ ಮಟ್ಟಿಗಿನ ಅಂತರವಿದೆಯೆಂಬುದನ್ನು ಮೂರ್ತಿರಾಯರ ಮಾತುಗಳಲ್ಲೇ ನೋಡಬಹುದು.

**"ಸುಬ್ಬಣ್ಣ ಶಾಮಣ್ಣನವರ ಅಚೇತನ ತಸ್ವೀರಲ್ಲ. ಆ ಪೂಜ್ಯ ವ್ಯಕ್ತಿಯ ನೈಸರ್ಗಿಕ ಬಣ್ಣದ ಅದ್ಭುತ ಚಲನಚಿತ್ರ"**[೧]. ಒಟ್ಟಿನಲ್ಲಿ 'ಸುಬ್ಬಣ್ಣ' ಜೀವನದಿಂದಾಚೆಗೆ ಮುಕ್ತಿ ಸಾಧಿಸುವುದಿಲ್ಲ. ಆತ ಮುಕ್ತಿಯನ್ನು ಸಾಧಿಸುವುದು ತಾನು ಬದುಕಿದ ರೀತಿಯಿಂದ. ಉತ್ತಮವಾದ ರೀತಿಯಲ್ಲಿ ಜೀವನವನ್ನು ನಡೆಸಿಯೇ ಮುಕ್ತಿಯನ್ನು ಸಾಧಿಸಬಹುದೆಂಬುದನ್ನು ಸುಬ್ಬಣ್ಣ ತೋರಿಸಿಕೊಡುತ್ತಾನೆ. ತನ್ನ ಆತ್ಮ ಸಂಸ್ಕಾರದಿಂದ, ಅಂತಃಕರಣಗಳಿಂದ ಸುಬ್ಬಣ್ಣ ಮುಕ್ತಿಯನ್ನು ಸಾಧಿಸುತ್ತಾನೆಯೇ ಹೊರತು, ತನ್ನ ಶೂನ್ಯತೆ, ವಿರಕ್ತಿಗಳಿಂದ ಅಲ್ಲವೆಂಬುದನ್ನು ನೆನಪಿಡಬೇಕು. ಇದನ್ನು ನಿರೂಪಕರ ಮಾತುಗಳೂ ಸ್ಪಷ್ಟಪಡಿಸುತ್ತವೆ. ಬದುಕಿಗೆ ಅತೀತವಾಗಿರಲು ಸುಬ್ಬಣ್ಣ ಎಷ್ಟೇ ಪ್ರಯತ್ನಿಸಿದರೂ ಜೀವನಮುಖಿ ಧೋರಣೆಯೇ ಅವನಲ್ಲಿರುವುದು ವೇದ್ಯವಾಗುತ್ತದೆ. ಇದೇ ಅವನ ನಿಜವಾದ ಅಂತಃಸತ್ವ.

'ಸುಬ್ಬಣ್ಣ'ನಷ್ಟೇ ಪ್ರಬಲವಾದ, ಓದುಗರ ಮನಸ್ಸನ್ನು ಸೆಳೆಯುವ ಪಾತ್ರವೆಂದರೆ ಲಲಿತಳದ್ದು. ಆಕೆಯ ಅರ್ಪಣಾ ಮನೋಭಾವ, ತ್ಯಾಗಗುಣಗಳು ಎಂತಹವರನ್ನೂ ಸೆರೆಹಿಡಿಯುತ್ತದೆ. ಸುಬ್ಬಣ್ಣನ ಹೆಂಡತಿಯಾಗಿ, ಸೊಸೆಯಾಗಿ, ಒಬ್ಬ ಹೆಂಗಸಾಗಿ ಆಕೆ ನಡೆದುಕೊಳ್ಳುವ ರೀತಿ ಮನಮುಟ್ಟುತ್ತದೆ. ಲಲಿತ ಸುಬ್ಬಣ್ಣನಿಗಿಂತಲೂ ಪ್ರಬುದ್ಧಳು, ಆತ್ಮಯಾತ್ರೆಯಲ್ಲಿ ಸುಬ್ಬಣ್ಣನಿಗಿಂತಲೂ ಹೆಚ್ಚು ಮುಂದುವರೆದವಳು. ಯಾವುದೇ ಸದ್ದು ಗದ್ದಲವಿಲ್ಲದೆ ಕೃತಿಯನ್ನು ಪ್ರವೇಶಿಸುವ ಲಲಿತಳ ಪಾತ್ರ ಅನನ್ಯವಾಗಿ ಬೆಳೆಯುತ್ತದೆ.

'ಸುಬ್ಬಣ್ಣ'ನ ದೃಷ್ಟಿಯಲ್ಲಿ ಆರಂಭದಲ್ಲಿ ಅವಳಗಿದ್ದ ಸ್ಥಾನ 'ಕುತ್ತಿಗೆಗೆ ಸುತ್ತಿದ ಶನಿ' ಮಾತ್ರ. ಆದರೆ ಮುಂದೆ ಅದೇ ಲಲಿತೆ ಸುಬ್ಬಣ್ಣನನ್ನು ಉದ್ಧರಿಸಿದ ದೇವತೆಯೇ ಆಗುತ್ತಾಳೆ. ಸುಬ್ಬಣ್ಣನಿಗೆ ಮೊದಮೊದಲು ಸಂಸಾರದಲ್ಲಿ ಅಶ್ರದ್ಧೆ, ಸಂಗೀತದಲ್ಲಿ ಆಸಕ್ತಿ. ಆ ಸಂಗೀತಕ್ಕೆ ಅಗತ್ಯವಾದ ವಾತಾವರಣ, ಉಪಚಾರಗಳು ಅವನಿಗೆ ವಾರಸ್ತ್ರೀಯ ಮನೆಯಲ್ಲಿ ದೊರೆಯುತ್ತಿದ್ದರಿಂದ, ಹೆಂಡತಿಯ ಅಸ್ತಿತ್ವ ಅವನ ಗಮನವನ್ನು ಸೆಳೆದಿರುವುದೇ ಇಲ್ಲ. ಮನೆಯ

---

೧. 'ಶ್ರೀನಿವಾಸ' – 'ಸುಬ್ಬಣ್ಣ'ನ ಬಗೆಗೆ ಪುನರ್ವಿಚಾರ – ಗೌರೀಶ ಕಾಯ್ಕಿಣಿ – ಪು.ಸಂ. ೧೦೮

ಸಾಂಪ್ರದಾಯಿಕ ಚೌಕಟ್ಟಿನಲ್ಲಿ ಲಲಿತ ಸುಬ್ಬಣ್ಣನಿಗೆ ಹತ್ತಿರವಾಗುವುದು ಸಾಧ್ಯವಿರಲಿಲ್ಲ. ಹೀಗಾಗಿ ಸುಬ್ಬಣ್ಣನಿಗೆ ಲಲಿತ ಅರ್ಧ ಅನಿಷ್ಟದ ಭಾರವಾಗಿದ್ದಳು.

ಲಲಿತೆ ಸುಬ್ಬಣ್ಣನೊಡನೆ ಮಾನಸಿಕವಾಗಿ ಒಂದಾಗುವುದು, ಒಂದು ಹೃದಯಂಗಮ ಸನ್ನಿವೇಶ. ಯಾವುದೋ ಸಿಟ್ಟಿಗಾಗಿ 'ಸುಬ್ಬಣ್ಣ' ಲಲಿತಳ ಕೆನ್ನೆಗೆ ಹೊಡೆಯುತ್ತಾನೆ. ಮುಗ್ದ ಲಲಿತ ಒಂದು ಮಾತನ್ನು ಆಡುವುದಿಲ್ಲ. ಅವಳ ಮೌನ ಓದುಗರ ಕಣ್ಣಲ್ಲಿ ನೀರು ತರಿಸುತ್ತದೆ. ಆದರೆ ಲಲಿತೆ ಸುಬ್ಬಣ್ಣನ ವರ್ತನೆಯಿಂದ ನೊಂದುಕೊಳ್ಳುವುದಿಲ್ಲ. ಬದಲಿಗೆ, ಅವಳಿಗೆ ತಾನೂ–ತನ್ನ ಗಂಡನೇ ಒಂದು ಪ್ರಪಂಚ, ಉಳಿದವರೇ ಒಂದು ಪ್ರಪಂಚ ಎಂದು ಭಾವನೆ ಮೂಡುತ್ತದೆ. ಇಷ್ಟಕ್ಕೂ ಹೊಡೆದದ್ದು ಯಾರು ತನ್ನ ಗಂಡನೇ ತಾನೆ? ತನ್ನ ಭಾಗದ ಪ್ರತ್ಯಕ್ಷ ದೇವರು–ಎಂಬ ವಿಶಾಲ ದೃಷ್ಟಿ ಅವಳದ್ದು.

**"ತನ್ನನ್ನು ಹೊಡೆದಿದ್ದ ಆ ಬಲಗೈಯನ್ನು ನೋಡಿ..... ಒಂದು ಮುತ್ತಿಟ್ಟಳು...... ಸುಬ್ಬಣ್ಣ ಪರ್ವತರಾಜಕನ್ಯೆಯ ತಪಸ್ಸಿಗೆ ಮೆಚ್ಚಿದ ಪರಶಿವನಂತೆ..... "ಶಾನೆ ನೋವಾಯಿತೇ?"**[೧] ಎಂದನು.

ಅಂದಿನಿಂದ ಅವರ ಆತ್ಮ–ಮನಸ್ಸುಗಳು ಒಂದಾದವು. ಲಲಿತೆ ನಿಜವಾದ ಅರ್ಥದಲ್ಲಿ ಗೃಹಿಣಿಯಾದಳು. ಸುಬ್ಬಣ್ಣನಿಗೆ ಯಜಮಾನಿಯಾದಳು. ತನ್ನ ಗಂಡನ ಮನೋರಾಜ್ಯದಲ್ಲಿ ಅರಸಿಯ ಪಟ್ಟವನ್ನು ಪಡೆದ ಲಲಿತಳಿಗೆ ಬೇರೆ ನಿರೀಕ್ಷೆಗಳೇ ಇರುವುದಿಲ್ಲ.

ಲಲಿತ ಸನಾತನ ಮೌಲ್ಯಗಳ ಆಶ್ರಯದಲ್ಲಿ ಬೆಳೆದವಳು, ಸಂಪ್ರದಾಯದ ಮನೆತನದಲ್ಲಿ ಹುಟ್ಟಿ ಸಂಪ್ರದಾಯಸ್ಥ ಮನೆಗೆ ಸೊಸೆಯಾಗಿ ಬಂದವಳು. ಅಂತಹ ಹಲವು ಅಂಶಗಳನ್ನೇ ನಾವು ಅವಳಲ್ಲಿ ಕಾಣುತ್ತೇವೆ. ಅದೇ ರೀತಿ ಯಾರ ಮಾತಿಗೂ ಎದುರಾಡದೆ ಮೌನವಾಗಿ ಸಹಿಸಿಕೊಳ್ಳುವ ಮೃದು ಸ್ವಾಭಾವ ಅವಳದ್ದು. ಅತ್ತೆ ತನ್ನನ್ನು ಎಷ್ಟೇ ಕೆಟ್ಟದಾಗಿ ನಡೆಸಿಕೊಂಡರೂ, ಅವರಿಗೆ ಎದುರಾಡದೆ ಸುಮ್ಮನಿರುವ ಸಾಧ್ವಿ ಲಲಿತೆ. ಗರ್ಭಿಣಿಯಾದ ತನ್ನಲ್ಲಿ ಅತ್ತೆ ಬೇಧಭಾವ ತೋರಿದರೂ ಅವಳಲ್ಲಿ ಯಾವುದೇ ಪ್ರತಿಭಟನೆಯಿಲ್ಲ.

'ಸುಬ್ಬಣ್ಣ' ಮನೆಬಿಡುವ ನಿರ್ಧಾರ ಮಾಡಿದಾಗ, ಲಲಿತೆ ಅವನನ್ನು ತಡೆಯುತ್ತಾಳೆ, ಅವನ ತಂದೆ–ತಾಯಿ ಎಲ್ಲಿ ನೊಂದುಕೊಳ್ಳುವರೋ ಎಂದು ಆತಂಕಗೊಳ್ಳುತ್ತಾಳೆ. ಲಲಿತೆಗಿರುವ ವಿವೇಕ ಸುಬ್ಬಣ್ಣನಿಗೇ ಇಲ್ಲ.

ಮೇಲುನೋಟಕ್ಕೆ ಲಲಿತಳ ವರ್ತನೆ ಸಾಧಾರಣ ಎನಿಸಬಹುದು. ಆದರೆ ಅವಳ ಸಂಧರ್ಭೋಚಿತ ವಿವೇಕ, ಅತ್ತೆ ತನಗೆ ನೋವು ಕೊಟ್ಟರೂ ಅದನ್ನು ಸಹಿಸಿಕೊಂಡು ಅವರನ್ನು ಬಿಟ್ಟುಕೊಡದ ಅವಳ ಗುಣ, ಅವಳ ಪ್ರಬುದ್ಧತೆ–ಎಲ್ಲರಿಗೂ ಸುಲಭವಾಗಿ ಬರುವಂತದ್ದಲ್ಲ ಎಂಬುದನ್ನು ನೆನಪಿಡಬೇಕು.

---

೧. ಸುಬ್ಬಣ್ಣ– ಶ್ರೀನಿವಾಸ – ಪು. ಸಂ. ೧೭

ಕಲ್ಕತ್ತೆಯಲ್ಲಿ ಸುಬ್ಬಣ್ಣನ ಜೀವನವನ್ನು ಲಲಿತ ಹೊಸತೊಂದು ರೀತಿಯಲ್ಲಿ ಆರಂಭಮಾಡುತ್ತಾಳೆ, ಸುಬ್ಬಣ್ಣನನ್ನು ತಿದ್ದುತ್ತಾಳೆ. ಸುಬ್ಬಣ್ಣನ ಆತ್ಮೋದ್ಧಾರಕ್ಕೆ ಲಲಿತಳ ಜೀವನವೇ ಕಾರಣ. ಅವಳಿಗೆ ಸುಬ್ಬಣ್ಣನೇ ಪ್ರಪಂಚ, ಅವನೇ ದೇವರು. ಬೇರೆ ಯಾವ ಆಸೆ–ಆಕಾಂಕ್ಷೆಗಳೂ ಜೀವನದ ಬಗ್ಗೆ ಅವಳಿಗೆ ಇಲ್ಲ. ತನ್ನ ಬದುಕು ತನ್ನ ಆಸೆಗಳ ಬಗ್ಗೆ ಎಂದಿಗೂ ಆಕೆ ಯೋಚಿಸುವುದಿಲ್ಲ. ಆದ್ದರಿಂದಲೇ ಲಲಿತ ಬದುಕಿನ ಸಮಸ್ತ ಸಂಸ್ಕಾರಗಳನ್ನೂ ಸಾದಿಸಿ, ಜೀವನದಲ್ಲಿ ದೊಡ್ಡ ಅಂತಸ್ತನ್ನು ಸೇರಿಬಿಡುತ್ತಾಳೆ. ಲಲಿತಳ ಏಕಾಗ್ರತೆ–ತಪಸ್ಸು, ಯಾವ ಋಷಿಯ ತಪಸ್ಸಿಗಿಂತಲೂ ಕಡಿಮೆಯಾದುದಲ್ಲವೆಂದು ನಿರೂಪಕರೇ ಹೇಳುತ್ತಾರೆ. ತನ್ನ ಹೃದಯದ ಸಮಸ್ತ ಮಮತೆಯನ್ನೂ, ಪ್ರೀತಿಯನ್ನು ಆಕೆ ಗಂಡ–ಮಕ್ಕಳಿಗೆ ಧಾರೆಯೆರೆದು, ಅವರ ರಕ್ಷಕಳಾಗುತ್ತಾಳೆ. ಅಷ್ಟರ ಮಟ್ಟಿಗೆ ಅವಳ ಜೀವನ ಸಾರ್ಥಕತೆಯನ್ನು ಪಡೆಯುತ್ತದೆ.

ಆದರೆ ಲಲಿತ ಕಲ್ಕತ್ತೆಯಲ್ಲಿ ಅನುಭವಿಸುವ ಸಂಕಟಗಳು ಕಡಿಮೆಯೇನಲ್ಲ. ಮಗ ಶೇಷ ವಿಷಮಶೀತ ಜ್ವರದಿಂದ ಮರಣಿಸಿದರೆ, ವಯಸ್ಸಿಗೆ ಬಂದ ಮಗಳು ಪ್ರವಾಹಕ್ಕೆ ಆಹುತಿಯಾಗುತ್ತಾಳೆ. ಲಲಿತ ಈ ಕಷ್ಟಪರಂಪರೆಯಿಂದ ಸಂಪೂರ್ಣ ಕುಸಿಯುತ್ತಾಳೆ. ಸುಬ್ಬಣ್ಣನಿಗಾದರೋ ಆ ಶೋಕ ಪರಂಪರೆ, ಅವನ ಆತ್ಮೋದ್ಧಾರಕ್ಕೆ ಕಾರಣವಾಯಿತು. ಆದರೆ ಲಲಿತೆಗೆ ಇವುಗಳನ್ನನುಭವಿಸಿ ನೋವುಂಡದ್ದಷ್ಟೇ ಭಾಗ್ಯ. ಇವುಗಳಿಂದ ದಿಕ್ಕುತೋಚದೆ ಲಲಿತ ಗೌರೀವ್ರತಗಳಲ್ಲಿ ತನ್ನ ಮನಸ್ಸನ್ನು ತಿರುಗಿಸುತ್ತಾಳೆ. ಅವಳ ಪಾಲಿಗೆ ತನ್ನ ದೇವರು, ತನ್ನ ಪತಿ ಇಬ್ಬರೇ ಸತ್ಯ. ಹೀಗೆ ಆಕೆ ತನ್ನ ಸುಖ–ಸಂತೋಷಗಳನ್ನು ಮರೆತು ಬದುಕುತ್ತಾಳೆ. ತನ್ನ ದೇವರಾದ ಗೌರೀದೇವಿಯಲ್ಲಿ ಆಕೆ ಕೇಳಿಕೊಳ್ಳುವ ಕಡೆಯ ಆಸೆಗಳೂ ಅವೇ ಆಗಿರುತ್ತದೆ. ತನ್ನ ಗಂಡನನ್ನು ಸುಖವಾಗಿ ನೋಡಿಕೊ, ತನ್ನನ್ನು ಸುಮಂಗಲಿಯಾಗಿ ನಿನ್ನ ಪಾದ ಸೇರಿಸಿಕೋ–ಎಂಬುದಷ್ಟೇ ಅವಳ ಕೊನೆಯ ಅಪೇಕ್ಷೆಗಳು ತನ್ನ ಜೀವನದ ನೋವು ಸಂಕಷ್ಟಗಳ ನಡುವೆ ಆಕೆ ಸಮಾಧಾನ ಕಂಡುಕೊಳ್ಳುವುದೂ ಸಾಂಪ್ರದಾಯಿಕ ಚಾಕಟ್ಟಿನಲ್ಲಿಯೇ ಲಲಿತ ಹಾಗೂ ಸುಬ್ಬಣ್ಣನ ಕಡೆಯ ದಿನಗಳ ದಾಂಪತ್ಯ ಒಂದು ಆದರ್ಶಮಯ, ಅಪೂರ್ವ ದಾಂಪತ್ಯ. ಕೊನೆ–ಕೊನೆಯಲ್ಲಿ ಅವರಿಬ್ಬರೂ ಗಂಡ–ಹೆಂಡತಿಯಂತಿರುವುದನ್ನು ಬಿಟ್ಟುಬಿಟ್ಟರು. ಒಂದು ಧಾರಾಳವಾದ – ವಿಚಿತ್ರ ಸ್ನೇಹದಿಂದ ಇದ್ದರೆಂಬ ಚಿತ್ರಣ ಬರುತ್ತದೆ. ಇಂತಹ ಭಾವಪೂರ್ಣ ದಾಂಪತ್ಯಕ್ಕೆ ಲಲಿತಳ ವ್ಯಕ್ತಿತ್ವವೇ ಕಾರಣ. ಲಲಿತಳ ಜೀವನ, ಅವಳ ನಡತೆ, ಸುಬ್ಬಣ್ಣನಿಗೆ ಬದುಕುವುದನ್ನು ಕಲಿಸುತ್ತದೆ. ಲಲಿತ ತನ್ನ ಬದುಕಿನುದ್ದಕ್ಕೂ, ತನ್ನ ಮರಣದ ನಂತರವೂ ಸುಬ್ಬಣ್ಣನ ವ್ಯಕ್ತಿತ್ವದ ಮೇಲೆ ಅಪಾರ ಪ್ರಭಾವವನ್ನು ಬೀರುತ್ತಾಳೆ.

ಸ್ವತಃ ಸುಬ್ಬಣ್ಣನ ಬಾಯಿಂದ ಅವಳ ವ್ಯಕ್ತಿತ್ವದ ಬಗೆಗಿನ ಮಾತುಗಳು ಸಹಜವಾಗಿ ಬಂದಿವೆ. ಲಲಿತಳ ಜೀವನ ಎಷ್ಟು ಸಂಸ್ಕಾರ ಪಡೆದದ್ದು ನಾನು ಹೇಳಿದ್ದನ್ನೆಲ್ಲಾ ಮಾಡಿ, ತಾನು ಎನ್ನುವುದನ್ನು ಮರೆತವಳು, ಅವಳದು ಎಂಥಾ ದೇವರ ಭಕ್ತಿ–ಎಂದು ಸುಬ್ಬಣ್ಣ ಭಾವಿಸುತ್ತಾನೆ. ಲಲಿತಳ ಭಕ್ತಿ–ಸುಬ್ಬಣ್ಣನನ್ನೂ ದೈವತ್ವದ ಹಾದಿಗೆ ತರುತ್ತದೆ. ಸುಬ್ಬಣ್ಣ ಸುಬೇದಾರರ ಮಗಳ ಹೆಸರು ಲಲಿತ ಎಂಬ ಕಾರಣಕ್ಕೇ ಪಾಠ ಹೇಳಲು ಒಪ್ಪಿಕೊಳ್ಳುತ್ತಾನೆಂದರೆ, ಅವಳದ್ದು ಎಂತಹಾ ಪ್ರೇಮಮಯಿ ಜೀವನವೆಂಬುದು ಅರ್ಥವಾಗುತ್ತದೆ.

**"ಸುಬ್ಬಣ್ಣನ ಬದುಕಿನಲ್ಲಿ ಅವನ ಹೆಂಡತಿ ಲಲಿತಮ್ಮನ ಪಾತ್ರ ಅತ್ಯಂತ ಮಹತ್ವಪೂರ್ಣವಾದದ್ದು. ಪ್ರೀತಿಯ ನಿಜವಾದ ಅರ್ಥವೇನೆಂಬುದನ್ನು ಮನವರಿಕೆ ಮಾಡಿಕೊಟ್ಟವಳೇ ಆಕೆ. ತನ್ನ ಶಾಂತ, ಸ್ನಿಗ್ಧ ನಡವಳಿಕೆಯಿಂದ, ತನ್ನಪ್ರೇಮಲ ಸ್ವಭಾವದಿಂದ, ಸುಬ್ಬಣ್ಣನ ಹೃದಯದ ಮೇಲೆ ಅಪಾರ ಪ್ರಭಾವ ಬೀರಿದಳು"**[೧] – ಎಂಬ ಮಾತುಗಳು ಉತ್ಪ್ರೇಕ್ಷೆಯೆನಿಸುವುದಿಲ್ಲ.

ಮಾಸ್ತಿಯವರಿಗೆ ಸ್ತ್ರೀಯರಲ್ಲಿ ಅಪಾರ ಗೌರವ. ಅವರ ಈ ಗೌರವ ದೃಷ್ಟಿಯ ಪ್ರತೀಕವೆಂಬಂತೆ ಮೂಡಿ ಬಂದಿರುವುದು ನೀಲಸಾನಿಯ ಪಾತ್ರ. 'ನೀಲಸಾನಿ' ವಾರಸ್ತ್ರೀಯಾದರೂ, ಕೃತಿಯಲ್ಲಿ ಆಕೆಗೆ ಒಂದು ಪ್ರಮುಖ ಸ್ಥಾನ, ಅಷ್ಟೇ ಗೌರವಯುತವಾಗಿ ದೊರೆತಿದೆ. ನೀಲಸಾನಿ ಹೆಚ್ಚು ಕಾಲ ಮನಸ್ಸಿನಲ್ಲಿ ಉಳಿಯುವ ಪಾತ್ರವಾಗಿದ್ದಾಳೆ. ಸುಬ್ಬಣ್ಣ–ನೀಲಸಾನಿಯರ ಅನ್ಯೋನ್ಯ ಸಂಬಂಧ, ಕೃತಿಯಲ್ಲಿ ಬಹಳ ಮಧುರವಾಗಿ ಚಿತ್ರಿತವಾಗಿದೆ.

ಸುಬ್ಬಣ್ಣ ಸಂಗೀತಾಭ್ಯಾಸಕ್ಕೆ ವಿವಿಧ ವಾರಸ್ತ್ರೀಯರ ಮನೆಗೆಹೋಗಿಬರುತ್ತಿದ್ದ. ಅವರುಗಳಲ್ಲಿ ನೀಲಸಾನಿಯೂ ಒಬ್ಬಳು. ಆಕೆಯ ದೃಷ್ಟಿಯಲ್ಲಿ ಸುಬ್ಬಣ್ಣನ ಸ್ಥಾನವೇ ಬೇರೆ. ಅವನ ಸಂಗೀತದ ಅಭ್ಯಾಸಕ್ಕೆ ಅವಶ್ಯಕವಾದ ಏಕಾಂತ ವಾತಾವರಣ, ಅಗತ್ಯವಾದ ಉಪಚಾರಗಳು, ಎಲ್ಲವನ್ನೂ ನೀಲಸಾನಿ ಒದಗಿಸಿಕೊಡುತ್ತಾಳೆ. ಸುಬ್ಬಣ್ಣನ ಹಾಡುಗಾರಿಕೆಯಿಂದಲೂ, ಅವನು ಬ್ರಾಹ್ಮಣನಾದುದರಿಂದಲೂ ಅವನನ್ನು ದೇವರಂತೆ ನೋಡುತ್ತಿದ್ದಳು.

ನೀಲಸಾನಿ ಸುಬ್ಬಣ್ಣನಿಗೆ ಮಾಡುತ್ತಿದ್ದ ಶುಶ್ರೂಷೆ, ಒದಗಿಸಿಕೊಟ್ಟಿದ್ದ ಅನುಕೂಲಗಳು ವಿಶಿಷ್ಟ ರೀತಿಯವು. ಸುಬ್ಬಣ್ಣ ಬಂದರೆ ಕಾಲು ತೊಳೆಯಲು ನೀರು, ಅವನ ಸಂಗೀತಾಭ್ಯಾಸಕ್ಕೆ ಅನುಕೂಲಕರವಾದ ವೀಣೆ, ಮೃದಂಗ, ಪಿಟೀಲು–ಎಲ್ಲವನ್ನೂ ಒಳಗೊಂಡಿರುವ ಕೋಣೆ, ಮಧ್ಯೆ–ಮಧ್ಯೆ ಸುಬ್ಬಣ್ಣನಿಗೆ ಬಾಯಾಡಿಸಲು ತಿಂಡಿ–ಎಲ್ಲವೂ ಸಿದ್ಧವಿರುತ್ತಿತ್ತು. ಹೆಚ್ಚು ಮಾತೇ ಆಡದ ಸುಬ್ಬಣ್ಣನೊಡನೆ, ಹತ್ತು ನಿಮಿಷದ ನಗುವಿನ ಮಾತು. ಒಮ್ಮೊಮ್ಮೆ ಸುಬ್ಬಣ್ಣ ತನ್ನ ಸಂಗೀತದ ರಾಗ, ವರೇಕು, ಸಂಗತಿಗಳಲ್ಲಿ ತನ್ನನ್ನು ಮರೆತು ಗಾನಯೋಗದಲ್ಲಿ ಮುಳುಗಿ ಹೋಗಿದ್ದರೆ, ನೀಲಸಾಯೇ ಬಂದು – 'ದೇವರಿಗೆ ಮನೆಗೆ ಹೋಗುವ ಹೊತ್ತಾಯಿತೆಂದು' ಹೇಳಿ ಎಚ್ಚರಿಸುತ್ತಿದ್ದಳು.

ಸುಬ್ಬಣ್ಣನೊಡನೆ ನೀಲಸಾನಿಯ ಸಂಬಂಧ– ಒಡನಾಟಗಳು ಇಷ್ಟಕ್ಕೆ ಮಾತ್ರವೇ ಸೀಮಿತ. ಸುಬ್ಬಣ್ಣನ ಮನಸ್ಸು ಸಂಸಾರದತ್ತ ಕೇಂದ್ರೀಕೃತವಾಗುವ ಮೊದಲು ಅವನ ಪ್ರಜ್ಞೆಯನ್ನು ಆವರಿಸಿದ್ದುದು ನೀಲಸಾನಿ ಮಾತ್ರ. ಮನೆಯಲ್ಲಿ ಆತ ಬಯಸುತ್ತಿದ್ದ ಉಪಚಾರಗಳೆಲ್ಲವೂ ಅವನಿಗೆ ನೀಲಸಾನಿಯ ಮನೆಯಲ್ಲಿಯೇ ದೊರೆಯುತ್ತಿತ್ತು. ಒಂದು ಹಂತದವರೆಗೂ ನೀಲಸಾನಿ, ಸುಬ್ಬಣ್ಣನ ಜೀವನದ ಒಂದು ಭಾಗವಾಗಿದ್ದಳು. ಸುಬ್ಬಣ್ಣನಿಗೆ ಮನೆಯ ಬಗೆಗೆ ಇದ್ದ ಅತೃಪ್ತಿಯ ಕಾರಣವಾಗಿ, ನೀಲಸಾನಿಯೊಡನೆ ಅನ್ಯೋನ್ಯತೆ ಬೆಳೆದಿತ್ತು.

---

೧. ಮಾಸ್ತಿ (ಜ್ಞಾನಪೀಠ ಪ್ರಶಸ್ತಿವಿಜೇತರು) – ನಾ. ಲಕ್ಷ್ಮೀನಾರಾಯಣ – ಪು. ೨೮

ನೀಲಸಾನಿ ಮತ್ತು ಸುಬ್ಬಣ್ಣರ ಸಂಬಂಧ ನಿರ್ಮಲವಾದುದು, ಪವಿತ್ರವಾದುದು. ನೀಲಸಾನಿ ವಾರಸ್ತ್ರೀಯಾದ ಮಾತ್ರಕ್ಕೆ ಸುಬ್ಬಣ್ಣ ಕೆಟ್ಟುಹೋದನೆಂದೇನೂ ಭಾವಿಸಬೇಕಾದ್ದಿಲ್ಲ. ನೀಲಸಾನಿಯ, ಸುಬ್ಬಣ್ಣನ ಬಗೆಯ ಭಾವನೆಗಳು ಹೃದಯವೇದ್ಯವಾದುದು. ಇಷ್ಟಕ್ಕೂ ಕೆಡುವುದೆಂದರೇನೋ ನನಗೆ ತಿಳಿಯದೆಂದು ನಿರೂಪಕರು ಇದರ ಬಗ್ಗೆ ಹೇಳುತ್ತಾರೆ.

**"ಇನ್ನೂ ದೋಷವನ್ನರಿಯದೆ ತಾಯ ಎದೆಯ ಬಳಿ ಮುಖವನ್ನಿಟ್ಟು ಸ್ತನ್ಯಕ್ಕಾಗಿ ಅರಸುವ ಮಗುವಿನಂತೆ ಜೀವನದ ವಿಚಾರವನ್ನು ತಿಳಿಯದೆ ಇಲ್ಲಿ ಏನಿದೆಯೋ ಎಂದು ತಿಳಿಯಲು ಯತ್ನ ಮಾಡುತ್ತಿರುವ ಪೂರ್ವಯೌವನದ ಆ ಒಂದು ಸರಳತೆ"**[೧] ಈ ಸರಳತೆ, ಮುಗ್ಧತೆಗಳೇ ನೀಲಸಾನಿಗೆ ಸುಬ್ಬಣ್ಣನನ್ನು ಹತ್ತಿರಕ್ಕೆ ತಂದಿರುತ್ತದೆ. ನೀಲಸಾನಿಗೆ ಅವನಲ್ಲಿ ಮೂಡುವುದು ಒಂದು ಬಗೆಯ ಮಮತೆ ಮಾತ್ರವೇ. ಅದೇ ರೀತಿ ಸುಬ್ಬಣ್ಣನನ್ನು ನೀಲಸಾನಿಯ ಬಳಿಗೆ ಎಳೆದು ತರುವುದು ಅವಳ ಗುಣ-ನಡತೆಗಳೇ ಹೊರತು ಅಲ್ಲಿ ಮತ್ತಾವುದೇ ಭಾವವಿಲ್ಲ. ನೀಲಸಾನಿ-ಸುಬ್ಬಣ್ಣನ ಸಂಬಂಧವೇ, ನೀಲಸಾನಿಯ ಪಾತ್ರಕ್ಕೆ ಹೆಚ್ಚಿನ ಸತ್ವವನ್ನು ಒದಗಿಸಿದೆ ಎನ್ನಬಹುದು.

ನೀಲಸಾನಿಗೆ 'ಸುಬ್ಬಣ್ಣ' ಪ್ರತ್ಯಕ್ಷವಾಗಿ ಬಂದ ಕೃಷ್ಣನೇ ಆಗಿದ್ದ. ಅವನನ್ನು ಆರಾಧಿಸುವ ಗೋಪಸ್ತ್ರೀ ಆಕೆ. ಹೀಗೆ ನೀಲಸಾನಿಗೆ ಸುಬ್ಬಣ್ಣನಲ್ಲಿ ಒಂದು ಭಕ್ತಿಯ ಭಾವನೆ. ಅವರಿಬ್ಬರ ಸಂಬಂಧ ಈ ತೆರನಾದುದು. ಇವರಿಬ್ಬರ ಸಂಬಂಧವೇ ನೀಲಸಾನಿಯ ಪಾತ್ರ ಇಲ್ಲಿ ಎಷ್ಟು ಉತ್ಕೃಷ್ಟವಾದುದು ಎಂಬುದನ್ನು ತಿಳಿಸುತ್ತದೆ.

ಸುಬ್ಬಣ್ಣ ಮನೆಬಿಡುವ ನಿರ್ಧಾರ ಮಾಡಿದಾಗ, ಅವನು ಹಣಪಡೆಯುವುದು ನೀಲಸಾನಿಯ ಬಳಿಯಲ್ಲಿ. ಅವನು ಕೇಳಿದ್ದಕ್ಕಿಂತ ಹೆಚ್ಚು ಹಣ ನೀಡುವ ನೀಲಸಾನಿ, ಅದಕ್ಕೆ ಕಾರಣವನ್ನೂ ಕೇಳುವುದಿಲ್ಲ. ಬದಲಿಗೆ ಆನಂದ, ಕೃತಜ್ಞತೆಗಳಿಂದ ಆ ಹಣವನ್ನು ನೀಡುತ್ತಾಳೆ. ಸುಬ್ಬಣ್ಣನಿಗೆ ನೀಡುವುದರಿಂದಲೇ ತನ್ನ ಜನ್ಮ ಸಾರ್ಥಕಗೊಳ್ಳುವುದು ಎಂದು ಭಾವಿಸುತ್ತಾಳೆ. ಇಲ್ಲಿ ನೀಲಸಾನಿ ತನ್ನ ಆರಾಧ್ಯ ದೈವಕ್ಕೆ ಮೂರ್ತರೂಪವನ್ನು ಸುಬ್ಬಣ್ಣನಲ್ಲಿ ಕಲ್ಪಿಸಿಕೊಳ್ಳುತ್ತಾಳೆ. ಆದರೆ ಸುಬ್ಬಣ್ಣ ಮಾತ್ರ, ತಾನು ಊರು ಬಿಡುವ ಸಂದರ್ಭದಲ್ಲಿ ಅವಳಿಗೆ ಒಂದು ಮಾತನ್ನೂ ಹೇಳುವುದಿಲ್ಲ, ಒಂದು ಕ್ಷಣವೂ ಅವಳ ಬಗ್ಗೆ ಯೋಚಿಸದೆ, ತನ್ನ ಭಾವಶೂನ್ಯತೆಯಿಂದಾಗಿ ಅವಳನ್ನು ತೊರೆಯುತ್ತಾನೆ.

ಸುಬ್ಬಣ್ಣನು ನೀಲಸಾನಿಗೆ ಹಣವನ್ನು ಸಂದಾಯ ಮಾಡಿದ ಮೇಲೆ, ಅವಳು ಪಡುವ ವೇದನೆ ಅಷ್ಟಿಷ್ಟಲ್ಲ. ತನ್ನ ದೇವರನ್ನು ದೂರ ಕಳುಹಿಸುವುದಕ್ಕಾಗಿ ತಾನೇ ಹಣದ ಸಹಾಯ ಮಾಡಿದಂತೆ ಆಯಿತಲ್ಲ ಎಂದು ನೊಂದುಕೊಳ್ಳುತ್ತಾಳೆ. ವರ್ಣಿಸಲಾಗದ ಸಂಕಟ ಪಡುತ್ತಾಳೆ. ನಂತರ ಆ ಹಣವನ್ನು ದೇವರ ಪೆಟ್ಟಿಗೆಯಲ್ಲಿಟ್ಟು ಪೂಜಿಸಲು ಆರಂಭಿಸುತ್ತಾಳೆ.

---

೧. 'ಸುಬ್ಬಣ್ಣ' - ಶ್ರೀನಿವಾಸ - ಪು.ಸಂ. ೬

ಇಂತಹ ಪೂಜ್ಯಭಾವ ಎಷ್ಟು ಜನರಿಗೆ ಬರಲು ಸಾಧ್ಯವಿದೆ? ಆದ್ದರಿಂದಲೇ ನೀಲಸಾನಿ ಓದುಗರ ದೃಷ್ಟಿಯಲ್ಲಿ ಎತ್ತರಕ್ಕೇರುತ್ತಾಳೆ. ನಿರೂಪಕರಿಂದಲೂ ಅವಳಿಗೆ ಅಂತಹ ಸ್ಥಾನ ದೊರೆತಿದೆ. ಆದರೆ ಸುಬ್ಬಣ್ಣ ಮರಳಿ ಮೈಸೂರಿಗೆ ಬಂದಾಗ ಅವಳನ್ನು ನೋಡಲು ಹೋಗುವುದಿಲ್ಲ. ಆ ಸಂದರ್ಭದಲ್ಲಿ ಅವಳನ್ನು ನೆನಪಿಸಿಕೊಳ್ಳುವುದೂ ಇಲ್ಲ. ಹಾಗಾದರೆ ಸುಬ್ಬಣ್ಣ ಅವಳನ್ನು ಪೂರ್ತಿಯಾಗಿ ಮರೆತುಬಿಡುತ್ತಾನೆಯೇ, ಎಂದರೆ ಇಲ್ಲ. ನಟುವರ ವೆಂಕಟರಮಣನಲ್ಲಿ ಅವನು ನೀಲಸಾನಿಯ ನೆನಪನ್ನು ತಂದುಕೊಳ್ಳುತ್ತಾನೆ. ಆ ಕಾರಣದಿಂದಾಗಿಯೇ ಅವನಲ್ಲೂ ಹೆಚ್ಚಿನ ಆದರ ತೋರಿಸುತ್ತಾನೆ. ಇಂತಹ ಸಂಬಂಧಗಳಿಂದ ಹೃದಯದಲ್ಲಿ ಸ್ನೇಹವು ಹುಟ್ಟುವುದೆಂದು ನಿರೂಪಕರೂ ಹೇಳುತ್ತಾರೆ. ಇದು ನೀಲಸಾನಿಯ ಪರಿಶುದ್ಧ ಸ್ನೇಹದ ಸ್ಮೃತಿ. ಅವಳ ವ್ಯಕ್ತಿತ್ವ ಅಷ್ಟು ಗಾಢವಾಗಿ ಸುಬ್ಬಣ್ಣನನ್ನು ಪ್ರಭಾವಿಸಿರುತ್ತದೆ.

'ನೀಲಸಾನಿ' – ಒಬ್ಬ ವಾರಸ್ತ್ರೀಯ ಪಾತ್ರವಾದರೂ, ಆ ಪಾತ್ರದ ಸತ್ವ ಸಾಕಷ್ಟು ಮೌಲ್ಯಯುತವಾಗಿದೆ. ಆ ಪಾತ್ರದ ವ್ಯಕ್ತಿತ್ವ, ಭಾವನೆಗಳೂ ಗುರುತಿಸಲ್ಪಟ್ಟಿವೆ. ಪೂಜ್ಯತೆಯ ಚೌಕಟ್ಟು ಆ ಪಾತ್ರವನ್ನು ಆವರಿಸಿದೆ. ಸುಬ್ಬಣ್ಣನ ಸ್ಮೃತಿಯಿಂದ ಮಾತ್ರವಲ್ಲ, ಓದುಗರ ಸ್ಮೃತಿಯಿಂದಲೂ ಸುಲಭವಾಗಿ ಮರೆಯಾಗದಂತಹ ಪಾತ್ರ – ನೀಲಸಾನಿ.

ಕೃತಿಯಲ್ಲಿ ಕೆಲವೇ ಸಮಯದವರೆಗೆ ಮಾತ್ರ ಕಾಣಿಸಿಕೊಂಡರೂ, ಗಾಢವಾದ ಛಾಪನ್ನು ಮೂಡಿಸುವ ಪಾತ್ರಗಳು ಹಲವಾರು. ಅಂತಹಾ ಪಾತ್ರಗಳಲ್ಲಿ ವೆಂಕಟರಮಣನೂ ಒಬ್ಬ. ಅವನ ಪಾತ್ರ ಸಾಕಷ್ಟು ಲವ–ಲವಿಕೆಯನ್ನು ಮೂಡಿಸಿಕೊಂಡು ಮೈವೆತ್ತಿದೆ. ಆ ಲವಲವಿಕೆಯನ್ನು ಆತ ಕೃತಿಯಲ್ಲೂ ತುಂಬಿಬಿಡುತ್ತಾನೆ. ವೆಂಕಟರಮಣನ ಆಗಮನಕ್ಕಿಂತಲೂ ಮುಂಚೆ, ಸುಬ್ಬಣ್ಣನ ವೈರಾಗ್ಯ, ವಿರಕ್ತಿಗಳತ್ತ ಗಮನನೀಡಿದ್ದ ಕೃತಿಯಲ್ಲಿ, ಅವನ ಆಗಮನದಿಂದ ಉತ್ಸಾಹದ ಬುಗ್ಗೆಯೊಂದು ಕೃತಿಯನ್ನು ಪ್ರವೇಶಿಸಿದಂತಾಗುತ್ತದೆ. ಒಂದು ನಿರ್ದಿಷ್ಟ ಮನಸ್ಥಿಯಲ್ಲಿ ಆಲೋಚಿಸುತ್ತಿದ್ದ ಓದುಗರನ್ನು ಹಿಡಿದು ನಿಲ್ಲಿಸುವ ವೆಂಕಟರಮಣ, ಅವರಲ್ಲಿ ಹೆಚ್ಚಿನ ಆಸಕ್ತಿಯನ್ನು ಹುಟ್ಟು ಹಾಕುತ್ತಾನೆ.

ಸುಬ್ಬಣ್ಣನ ಜೀವನದಲ್ಲಿ, ಕತೆಯ ಬೆಳವಣಿಗೆಯಲ್ಲಿ, ಓದುಗರ ಆಲೋಚನಾಕ್ರಮದಲ್ಲಿ ವೆಂಕಟರಮಣನ ಆಗಮನ ಒಂದು ಬಹು ಮುಖ್ಯ ತಿರುವು. ವೈರಾಗ್ಯದತ್ತ ಮುಖ ಮಾಡಿದ್ದ ಸುಬ್ಬಣ್ಣನನ್ನು ಮತ್ತೆ ಸಹಮಾನವ ಲೋಕಕ್ಕೆ ಎಳೆದು ತಂದು, ಅವನಲ್ಲಿ ಉಪಕಾರಬುದ್ಧಿ, ದಾಕ್ಷಿಣ್ಯ, ಮಾನವಪ್ರೇಮಗಳು ಹುಟ್ಟುವುದಕ್ಕೆ ಕಾರಣನಾಗುವವನು ವೆಂಕಟರಮಣ. ನಿಂತು ಹೋಗಿದ್ದ 'ಸುಬ್ಬಣ್ಣ'ನ ಬದುಕನ್ನು ಮುನ್ನಡೆಸುವ ಚಾಲಕ ಶಕ್ತಿಯಾಗಿ ಆತ ಕಂಡು ಬರುತ್ತಾನೆ.

ವೆಂಕಟರಮಣ ನಟುವರನು ಅವನಿಗೆ ಸಂಗೀತ ತಿಳಿದಿತ್ತು. ಸ್ವಲ್ಪ ಮಟ್ಟಿಗೆ ಪಿಟೀಲು ಬರುತ್ತಿತ್ತು. 'ಸುಬ್ಬಣ್ಣ'ನ ಬಗೆಗೆ ಅವನಿಗೆ ವಯೋಸಹಜವಾದ ಕುತೂಹಲ. ವೆಂಕಟರಮಣನ ಉತ್ಸಾಹ, ಅವನ ಸಂಗೀತದ ಬಗೆಗಿನ

ಆಸಕ್ತಿ, ಪಿಟೀಲಿನ ಬಗೆಗಿನ ಕುತೂಹಲ –ಇವು ಸುಬ್ಬಣ್ಣನನ್ನು ಅವನೊಡನೆ ಸಂಗೀತದಲ್ಲಿ ಸ್ಪರ್ಧಿಗಿಳಿಯುವಂತೆ ಮಾಡುತ್ತವೆ. 'ಸುಬ್ಬಣ್ಣ'ನ ಅಂತರಂಗದಲ್ಲಿದ್ದ, ಸಂಗೀತದ ಬಗೆಗಿನ ಹೆಮ್ಮೆಯನ್ನು ವೆಂಕಟರಮಣ ಹೊರಗೆಳೆಯುತ್ತಾನೆ. ಸುಬ್ಬಣ್ಣನ ಏಕಾಂಗಿತನ, ಅನಾಥಪ್ರಜ್ಞೆಯ ಭಯವನ್ನು ಹೋಗಲಾಡಿಸುವಲ್ಲಿ ವೆಂಕಟರಮಣ ನೆರವಾಗುತ್ತಾನೆ.

ವೆಂಕಟರಮಣನ ವರ್ತನೆಯಿಂದ ಸುಬ್ಬಣ್ಣನಿಗೆ, ತನ್ನಲ್ಲಿ ಉಳಿದಿರುವುದು ಸಂಗೀತದ ಮೇಲಿನ ಚಪಲ ಒಂದೇ, ವೈರಾಗ್ಯದತ್ತ ಹೊರಟಿರುವವನಿಗೆ ಅದರ ಹಂಗೇಕೆ ಎಂದು ಭಾಸವಾಗುತ್ತದೆ. ಆದ್ದರಿಂದಲೇ ಆತ ಪಿಟೀಲನ್ನು ನದಿಯಲ್ಲಿ ಬಿಟ್ಟು ಬಂದುಬಿಡುತ್ತಾನೆ. ಆದರೆ 'ಸುಬ್ಬಣ್ಣ' ನಂತಹ ಸಂಗೀತಗಾರನ ಮನಸ್ಸನ್ನು, ಅವನ ಸಂಗೀತ ಪ್ರೇಮವನ್ನು ಸರಿಯಾಗಿ ಅರ್ಥಮಾಡಿಕೊಳ್ಳುವ ವೆಂಕಟರಮಣ, ಅವನ ಪ್ರಾಣಪ್ರದವಾದ ಪಿಟೀಲನ್ನು ಹಿಂತಿರುಗಿಸುತ್ತಾನೆ. ಸುಬ್ಬಣ್ಣನ ವರ್ತನೆ ಮಿದುವಾಗುತ್ತದೆ. ಅವನು ವೆಂಕಟರಮಣನ ದಾಕ್ಷಿಣ್ಯಕ್ಕೆ ಕಟ್ಟು ಬೀಳುತ್ತಾನೆ. ಸಂಪೂರ್ಣ ಶೂನ್ಯತ್ವದತ್ತ ಮುಖಮಾಡಿದ್ದ ಸುಬ್ಬಣ್ಣನನ್ನು ಜೀವನದೆಡೆಗೆ ತಿರುಗಿಸಿ, ಹೊಸತೊಂದು ಅನುಭವವನ್ನು ನೀಡುವವನು ವೆಂಕಟರಮಣ.

ವೆಂಕಟರಮಣ ನಟುವರನು ಎಂಬ ಕಾರಣಕ್ಕಾಗಿ ಸುಬ್ಬಣ್ಣನಿಗೆ ನೀಲಸಾನಿಯ ಸ್ಮೃತಿ ಮರುಕಳಿಸಿ, ಆದರ ಹೆಚ್ಚಾಗುತದೆ. 'ಸುಬ್ಬಣ್ಣ'ನಲ್ಲಿ ಗತಕಾಲದ ನೆನಪುಗಳು ಜೀವಂತವಾಗಿವೆ ಎಂದು ಸ್ಪಷ್ಟಪಡಿಸುವ ಪಾತ್ರ ವೆಂಕಟರಮಣನದ್ದು. ಅವನ ಧೈರ್ಯ –ಉತ್ಸಾಹಗಳು ಚಿಕ್ಕಂದಿನ ಸುಬ್ಬಣ್ಣನನ್ನು ನೆನಪಿಗೆ ತರುವಂತದ್ದು. ಎಲ್ಲಕ್ಕಿಂತಲೂ ಹೆಚ್ಚಾಗಿ, ಸುಬ್ಬಣ್ಣ ಕಡೆದುಕೊಳ್ಳಲಾಗದ, ಸುಬೇದಾರರ ಆತ್ಮೀಯ ಸಂಬಂಧ ಉಂಟಾಗುವುದು ವೆಂಕಟರಮಣನ ದೆಸೆಯಿಂದಾಗಿಯೇ.

"ಜೀವನ ಸಾಕೆಂದು ಶೂನ್ಯದತ್ತ ತೆರಳುತ್ತಿದ್ದ ವೃದ್ಧನೊಬ್ಬನನ್ನು ರಮಿಸಿ ಒಲಿಸಿ, ಮತ್ತೆ ಜೀವನಕ್ಕೇ ಕೈ ಹಿಡಿದು ಕರೆತಂದ ಮುಗ್ಧ ಬಾಲಕ ವೆಂಕಟರಮಣ".

ವೆಂಕಟರಮಣನಿಂದ ಸುಬ್ಬಣ್ಣ, ಲೋಕ ಜೀವನದಲ್ಲಿ ಒಂದು ಕೆಲಸವನ್ನು ಒಪ್ಪಿಕೊಂಡ ಹಾಗಾಯಿತು. ವೆಂಕಟರಮಣ ಇಲ್ಲದಿದ್ದಲ್ಲಿ ಬಹುಶಃ ಸುಬ್ಬಣ್ಣ ಲೋಕದತ್ತ ಮುಖ ಮಾಡುವುದು ಅಷ್ಟು ಸುಲಭವಾಗಿರಲಿಲ್ಲ. ಆದರೆ ಸುಬ್ಬಣ್ಣ ವೆಂಕಟರಮಣನನ್ನು ಹತ್ತಿರಕ್ಕೆಳೆದುಕೊಂಡ. ಅವನಿಂದ ಪ್ರೀತಿಯನ್ನು ಪಡೆದು, ತಾನೂ ಪ್ರೀತಿಯಿಂದ ಪಾಠ ಹೇಳಿಕೊಟ್ಟ.

ವಿರಕ್ತಿಯಿಂದ ಜೀವನದೆಡೆಗೆ, ಹೃದಯ ಮೃದುತ್ವದಿಂದ ಪರಿಪಕ್ವತೆಯೆಡೆಗೆ, ಸುಬ್ಬಣ್ಣ ಸಾಗುವುದು ವೆಂಕಟರಮಣನಿಂದಲೇ ಸಾಧ್ಯವಾದುದು. 'ಸುಬ್ಬಣ್ಣ'ನ ಕೊನೆಯ ಘಟ್ಟದ ಬದುಕನ್ನು ವೆಂಕಟರಮಣ ಮತ್ತೆ ಮೊದಲಿನಿಂದ ಆರಂಭ ಮಾಡುವ ದಾರ್ಷ್ಯತೆ ತೋರಿದ.

'ನೀಳ್ಗತೆ'ಯ ಮಿತಿಯಲ್ಲಿಯೇ ಆಕರ್ಷಕವಾಗಿ ಮೂಡಿನಿಂತಿದ್ದಾರೆ ಸುಬೇದಾರರು. ಇವರು ನಿರೂಪಕರ ಮಾವನವರೂ ಹೌದು. ಅವರ ಗತ್ತು, ಜಂಭಗಳು ಸಹಜವಾಗಿವೆ. ಅದು ಅವರ ಸ್ಥಾನ ನೀಡಿದ ಆತ್ಮಗೌರವವಷ್ಟೇ.

ಸುಬೇದಾರರು, ಅವರ ಹೆಂಡತಿ, ಮಗಳು ಲಲಿತ – ಎಲ್ಲರೂ ಸುಬ್ಬಣ್ಣನನ್ನು ಬಿಡಿಸಲಾಗವ ಸಂಬಂಧದಲ್ಲಿ ಕಟ್ಟಿಹಾಕುತ್ತಾರೆ.

ಸುಬೇದಾರರಿಗೂ ಸಂಗೀತದಲ್ಲಿ ಅಭಿರುಚಿ. ಅಲ್ಪ–ಸ್ವಲ್ಪ ಸಂಗೀತವೂ ಬರುತ್ತಿತ್ತು. ಈ ಅಭಿರುಚಿಯೇ ಅವರನ್ನು 'ಸುಬ್ಬಣ್ಣ'ನ ಸಂಗೀತದತ್ತ ಸೆಳೆಯಿತು. ಆದರೆ 'ಸುಬ್ಬಣ್ಣ' ಅವರು ಕರೆದಾಗ ಬರುವುದಿಲ್ಲ. ಸುಬೇದಾರರು ಅವರಿಗೆ ಜಂಭವೆಂದುಕೊಂಡರು. ಆದರೆ, ದೇವಸ್ಥಾನದಲ್ಲಿ ಅವರ ಸಂಗೀತ ಕೇಳಿದ ಮೇಲೆ, ಸುಬೇದಾರರಿಗೆ ತಮ್ಮ ತಪ್ಪಿನ ಅರಿವಾಗಿ, ಸುಬ್ಬಣ್ಣನನ್ನು ಮಗಳು ಲಲಿತಳಿಗೆ ಪಾಠ ಹೇಳಲು ಒಪ್ಪಿಸುತ್ತಾರೆ.

ಸುಬೇದಾರರ ಮಗಳು ಲಲಿತ, ಸುಬ್ಬಣ್ಣನ ಹೃದಯಕ್ಕೆ ಹತ್ತಿರವಾಗುವ ಇನ್ನೊಬ್ಬಳು ಲಲಿತ. ಇಡೀ ಕೃತಿಯಲ್ಲಿ ಈ ಲಲಿತಳ ಪಾತ್ರ ಮಾತೇ ಆಡುವುದಿಲ್ಲ. ಆದರೆ ಆ ಪಾತ್ರದ ಇರುವಿಕೆ, ಓದುಗರನ್ನು ಗಾಢವಾಗಿ ಆವರಿಸುತ್ತದೆ. ತನ್ನ ಅಂತಿಮ ಘಟ್ಟದಲ್ಲಿ ಸುಬ್ಬಣ್ಣನಿಗೆ ಅಚ್ಚುಮೆಚ್ಚಾಗುವವಳು, ಪ್ರಿಯವಾಗುವವಳು ಲಲಿತಳೇ. ವೆಂಕಟರಮಣ ಆರಂಭ ಮಾಡಿದ್ದ ಸುಬ್ಬಣ್ಣನ ಜೀವನವನ್ನು ಲಲಿತ ಮುಂದುವರೆಸುತ್ತಾಳೆ.

ಸುಬೇದಾರರ ವರ್ತನೆಯಿಂದ ಸುಬ್ಬಣ್ಣನ ನಯವೂ, ಸುಬ್ಬಣ್ಣನ ನಡತೆಯಿಂದ ಸುಬೇದಾರರ ನಯವೂ ಹೊರಬಂದಿತು. ಸುಬ್ಬಣ್ಣನ ದೃಷ್ಟಿಯಲ್ಲಂತೂ ಸುಬೇದಾರರು ಚಿನ್ನ; ಅಪರಂಜಿಯ ಚಿನ್ನ.

ಇನ್ನು ಸುಬೇದಾರರ ಪತ್ನಿ. ಕೃತಿಯಲ್ಲಿ ಆಕೆಗೆ ಹೆಸರಿಲ್ಲ. ಆದರೆ ಆ ಪಾತ್ರ ಬಹು ಸುಂದರವಾಗಿ ಮೂಡಿಬಂದಿದೆ. ಆಕೆ ಜನರ ಕಷ್ಟವನ್ನು ಸಹಿಸುವಂಥವಳಲ್ಲ. ಅಂಥವರ ಮೇಲೆ ಅಪಾರ ಕನಿಕರ, ಗಂಡ–ಮಕ್ಕಳು ಎಂದರೆ ಅತಿಶಯವಾದ ಪ್ರೇಮ ಭಕ್ತಿ. ಒಂದು ರೀತಿಯಲ್ಲಿ ಈಕೆ ಸುಬ್ಬಣ್ಣನ ಹೆಂಡತಿ ಲಲಿತಳ ಸ್ವಭಾವವನ್ನೇ ಪಡೆದವಳು. ಆದ್ದರಿಂದಲೇ ಸುಬ್ಬಣ್ಣನಿಗೆ ಆಕೆಯನ್ನು ಕಂಡರೆ ವಿಶೇಷ ಗೌರವ – ಮರ್ಯಾದೆ. ಸುಬ್ಬಣ್ಣ ತನ್ನ ಜೀವನದಲ್ಲಿ ಕಂಡ ಇಬ್ಬರು ಅದ್ಭುತ ಹೆಂಗಸರಲ್ಲಿ, ಒಬ್ಬಳು ಸುಬ್ಬಣ್ಣನ ಪತ್ನಿಯಾದರೆ, ಮತ್ತೊಬ್ಬಳು ಈಕೆ.

ಹೀಗೆ ಸುಬೇದಾರರ ಕುಟುಂಬದೊಂದಿಗೆ ಸುಬ್ಬಣ್ಣನ ಹಾರ್ದಿಕವಾದ ಸಂಬಂಧ ಬೆಳೆಯಿತು. ಸಂಸಾರ ಬೇಡ – ಬೇಡವೆನ್ನುತ್ತಾ ದೂರ ಸರಿಯುತ್ತಿದ್ದ ಸುಬ್ಬಣ್ಣನನ್ನು ಸಂಸಾರದ ಸುಖಗಳು ತನ್ನ ರಾಟೆಯ ಓಟದಲ್ಲಿ ಸೇರಿಸಿಕೊಂಡಿತು. ಇದಕ್ಕೆ ಕಾರಣವಾದುದು ಸುಬೇದಾರರ ಕುಟುಂಬವರ್ಗ. ಅದರಲ್ಲೂ ಲಲಿತಳಿಗೆ ಪಾಠ ಹೇಳಿಕೊಡಲು ಸುಬ್ಬಣ್ಣ ಒಪ್ಪಿಕೊಂಡದ್ದರಿಂದ, ಅವನಲ್ಲಿ ಸ್ವಲ್ಪ ಮಟ್ಟಿನ ಸಮಾಧಾನ ಮನಶಾಂತಿಗಳು ಹುಟ್ಟಲು ಸಾಧ್ಯವಾಯಿತು. ಲಲಿತಳಿಗೆ ಪಾಠ ಹೇಳಿಕೊಡುವಲ್ಲಿ ಸುಬ್ಬಣ್ಣನಿಗೆ ಅತೀವವಾದ ಆನಂದ. ಸುಬೇದಾರರ ಮನೆಗೆ ಹೋಗಿ ಬರುವುದಕ್ಕೆ ಅವನಿಗೂ ಒಂದು ರೀತಿಯ ಸಂತೋಷವೇ. ಸುಬ್ಬಣ್ಣ ತನಗರಿವಿಲ್ಲದಂತೆಯೇ ಜೀವನದತ್ತ ದೃಷ್ಟಿ ಹರಿಸಲು, ಸುಬೇದಾರರ ಕುಟುಂಬದೊಂದಿಗೆ ಬೆಳೆದ ಮೈತ್ರಿಯೇ ಕಾರಣ.

ಸುಬೇದಾರರೆಂದರೆ ಸುಬ್ಬಣ್ಣನಿಗೆ ಅಮಿತ ಗೌರವ. ಇನ್ನು ಲಲಿತಳೆಂದರೆ, ಕೆಲವು ದಿನಗಳ ಕಾಲವಾದರೂ ಪಾಠ ಹೇಳದೆ ಇರಲಾರೆನೆನ್ನುವಷ್ಟು ಅಕ್ಕರೆ. ಸುಬೇದಾರರ ಹೆಂಡತಿಯೆಂದರೆ ಅತೀವ ವಿಶ್ವಾಸ. ಪರಲೋಕದಲ್ಲಿ ಪರಶಿವನೇನಾದರೂ ಹಠ ಮಾಡಿದರೆ, ಅದಕ್ಕೂ ಅಮ್ಮನವರ ಬಳಿಯಲ್ಲೇ ಅಪೀಲು ಹೋಗುತ್ತೇನೆ – ಎನ್ನುವಷ್ಟು ಭರವಸೆ ಸುಬ್ಬಣ್ಣನಿಗೆ. ಸುಬ್ಬಣ್ಣನ ಹೃದಯ ಪರಿಪಕ್ವವಾಗಲು, ಅದು ಪೂರ್ಣ ಸಂಸ್ಕಾರದ ಸ್ಥಿತಿಯನ್ನು ತಲುಪಲು ಸುಬೇದಾರರ ಕುಟುಂಬವರ್ಗ ತೋರಿಸಿದ ಅವ್ಯಾಜ ಪ್ರೇಮವೇ ಕಾರಣ.

ಕೃತಿಯ ಕೊನೆಯಲ್ಲಿ ಬರುವಂತಹ ಅದ್ಭುತ ಸನ್ನಿವೇಶ ಈ ಎಲ್ಲಾ ಅಂಶಗಳನ್ನು ನಿಚ್ಚಳವಾಗಿಸುತ್ತದೆ. ಮಾತ್ರವಲ್ಲ ಮೇಲಿನ ಎಲ್ಲಾ ಪಾತ್ರಗಳನ್ನು ಓದುಗರ ಹೃದಯದಲ್ಲಿ ಅವಿಸ್ಮರಣೀಯಗೊಳಿಸುತ್ತದೆ.

ಒಮ್ಮೆ ಸುಬೇದಾರರ ಕುಟುಂಬಕ್ಕೆ ಬೆಂಗಳೂರಿಗೆ ವರ್ಗವಾಗಿ ಬಿಡುತ್ತದೆ. ಆಗ ಸುಬ್ಬಣ್ಣನ ಪಾತ್ರ ತಲ್ಲಣಿಸುತ್ತದೆ. ಅವರನ್ನು ಬಿಟ್ಟಿರಲಾರದೆ, ಮೂರು ಮೈಲಿ ದೂರದಿಂದ ಗಾಡಿಯ ಹಿಂದೆ ಸುಬ್ಬಣ್ಣ ಓಡಿ ಬರುತ್ತಾನೆ. ಸಂಸಾರದ ಬಂಧನ ಬೇಡವೆಂದು ಹೊರಟುಹೋಗಿದ್ದರೂ ತನ್ನಿಂದ ಬಿಟ್ಟಿರಲಾಗಲಿಲ್ಲವೆನ್ನುತ್ತಾನೆ. ಲಲಿತೆಯನ್ನು ಆಶೀರ್ವಾದಿಸಿ ಸುಬ್ಬಣ್ಣ ಹೊರಟುಹೋಗುತ್ತಾನೆ. ತನ್ನ ಜೀವನದ ಕೊನೆಯವರೆಗೂ ಸುಬ್ಬಣ್ಣ ಲಲಿತಳನ್ನು ಬಿಟ್ಟಿರಲಾಗುವುದಿಲ್ಲ.

ಹೀಗೆ ಬರಡಾಗಿದ್ದ ಸುಬ್ಬಣ್ಣನ ಬದುಕಿನಲ್ಲಿ ಒಂದು ರೀತಿಯ ಚೈತನ್ಯವನ್ನು ತುಂಬಿದವರು ಸುಬೇದಾರರು ಮತ್ತು ಅವರ ಮನೆಯವರು. ಸುಬ್ಬಣ್ಣನ ಜೀವನದಲ್ಲಿ ಆವರಿಸಿದ್ದ ಶೂನ್ಯವನ್ನು ಈ ಕುಟುಂಬ ತನ್ನ ಸಹೃದಯತೆಯಿಂದ ತುಂಬಿಕೊಟ್ಟಿತು. ಸುಬ್ಬಣ್ಣನ ಆತ್ಮೋದ್ಧಾರಕ್ಕೆ ಸಹ ಮಾನವ ಪ್ರೇಮದ ಅಮೃತ ಹರಿದು ಬಂದುದು ಈ ಪಾತ್ರಗಳಿಂದ ಕೃತಿಯಲ್ಲಿ ಈ ಪಾತ್ರಗಳು ಇನ್ನಷ್ಟು ಆಕರ್ಷಕವಾಗಬಹುದಾದ ಸಾಧ್ಯತೆ ಇತ್ತೇನೋ ಎನಿಸುತ್ತದೆ.

ಇವು ಕೃತಿಯಲ್ಲಿ ಬರುವ ಮುಖ್ಯ ಪಾತ್ರಗಳು. ಇದಲ್ಲದೇ ಇನ್ನೂ ಕೆಲವು ಸಣ್ಣ – ಪುಟ್ಟ ಪಾತ್ರಗಳು ಮಿಂಚಿಮಾಯವಾಗುತ್ತವೆ. ಇವುಗಳಲ್ಲಿ ಕೆಲವೊಂದು ಪಾತ್ರಗಳು ಹೆಚ್ಚು ಪರಿಣಾಮವನ್ನೇನೂ ಬೀರುವುದಿಲ್ಲ.

ನಾರಾಯಣ ಶಾಸ್ತ್ರಿಗಳ ಸಂಸಾರದ ವಿಚಾರಗಳು ಬಹಳ ಸ್ವಾರಸ್ಯಕರವಾಗಿ ಮೂಡಿಬಂದಿವೆ. ನಾರಾಯಣ ಶಾಸ್ತ್ರಿಗಳ ಗಾಂಭೀರ್ಯತೆ ಹೆಚ್ಚು ಇಷ್ಟವಾಗುತ್ತದೆ. ಪುರಾಣದ ಶಾಸ್ತ್ರಿಗಳು ಎಂದೇ ಅವರು ಪ್ರಸಿದ್ಧರು. ಸಂಸ್ಕೃತದಲ್ಲಿ ಅಪಾರ ಪಾಂಡಿತ್ಯ, ಅರಮನೆಯಲ್ಲಿ ಕೆಲಸ. ಕಥೆಯು ಶಾಸ್ತ್ರಿಗಳ ಸಂಸಾರದ ಚಿತ್ರಣದೊಂದಿಗೇ ಆರಂಭವಾಗುತ್ತದೆ. ಶಾಸ್ತ್ರಿಗಳಿಗೂ ಅವರ ಪತ್ನಿಗೂ ತಮ್ಮ ಏಕೈಕ ಪುತ್ರ ಸುಬ್ಬಣ್ಣನ ಮೇಲೆ ಅತಿಶಯವಾದ ಪ್ರೀತಿ. ಆದರೆ ಸುಬ್ಬಣ್ಣನಿಗೆ ತಂದೆಯ ಗಂಭೀರ ಕಂಠ ಬಳುವಳಿಯಾಗಿ ದೊರೆತಿತ್ತೇ ಹೊರತು, ಅವರ ಸಂಸ್ಕೃತ ಇಳಿದುಬರಲಿಲ್ಲ. ಈ ಕಾರಣವಾಗಿ ಮನೆಯಲ್ಲಿ ಸುಬ್ಬಣ್ಣನಿಗೂ ಅವನ ತಂದೆ–ತಾಯಿಗಳಿಗೂ ಮನಸ್ತಾಪ ನಡೆಯುತ್ತಲೇ ಇರುತ್ತದೆ. ಸುಬ್ಬಣ್ಣನ ಸಂಗೀತಕ್ಕೆ ಅವನ ತಂದೆ–ತಾಯಿಗಳಿಂದ ಯಾವ ಪ್ರೋತ್ಸಾಹವೂ ದೊರೆಯುವುದಿಲ್ಲ. ಶಾಸ್ತ್ರಿಗಳ ಸಂಪ್ರದಾಯಬದ್ಧ ಭಾವನೆಗಳು ಸುಬ್ಬಣ್ಣ ಮನೆ ತೊರೆಯಲು ಮುಖ್ಯ ಕಾರಣ.

ಶಾಸ್ತ್ರಿಗಳು ಸ್ವಭಾವತಃ ಒಳ್ಳೆಯ ವ್ಯಕ್ತಿ. ಗಂಡನ ಆಸರೆಯೂ ಇಲ್ಲದೆ ಅತ್ತೆಯ ಬೈಗುಳಗಳ ನಡುವೆ ಬೇಯುತ್ತಿದ್ದ ಲಲಿತಳೊಂದಿಗೆ ಮೃದುವಾಗಿ ವರ್ತಿಸುತ್ತಿದ್ದುದು ನಾರಾಯಣ ಶಾಸ್ತ್ರಿಗಳು ಮಾತ್ರ. ಇಂತಹ ಶಾಸ್ತ್ರಿಗಳೂ ಒಮ್ಮೆ ಮಗನನ್ನು ಅನ್ನಕ್ಕೆ ಹೊರೆ ಎಂದು ಬಿಡುತ್ತಾರೆ. ಇದೇ ಸುಬ್ಬಣ್ಣ ಮನೆಯನ್ನು ತೊರೆಯಲು ನೆಪವಾಗುತ್ತದೆ.

ಇತರ ಪಾತ್ರಗಳಲ್ಲಿ ಮುಖ್ಯವಾಗಿ ಹೇಳಲೇಬೇಕಾದುದು ಶಾಸ್ತ್ರಿಗಳ ಹೆಂಡತಿಯದ್ದು, ಅಂದರೆ ಸುಬ್ಬಣ್ಣನ ತಾಯಿಯ ಪಾತ್ರ. ಲಲಿತಳಿಗಂತೂ ಆಕೆ ಅಕ್ಷರಶಃ ಅತ್ತೆಯೇ. ಆಕೆಗೆ ಸೊಸೆಯನ್ನು ಹತೋಟಿಯಲ್ಲಿಟ್ಟುಕೊಳ್ಳಬೇಕೆಂಬ ಆಸೆ. ಅದೇ ರೀತಿ ಲಲಿತಳ ಮೇಲೆ ಅವಳದ್ದು ಅತಿಯಾದ ಅಂಕೆ. ಅವಳು ಮಾಡುವ ಕೆಲಸಗಳಲ್ಲೆಲ್ಲಾ ತಪ್ಪು ಕಂಡು ಹಿಡಿಯುತ್ತಿದ್ದಳು. ಸೊಸೆ ತನ್ನನ್ನು ಮಗನನ್ನು ದೂರ ಮಾಡಲು ಬಂದವಳು, ತನ್ನ ಮಗನ ಮೇಲೆ ದೊರೆತನ ಮಾಡಲು ಬಯಸುವಳು, ಹೀಗೆ ತನ್ನ ಸೊಸೆಯ ಬಗ್ಗೆ ಅಸಹಜವಾದ ಕಲ್ಪನೆಗಳು ಅವಳಿಗೆ. ಲಲಿತ ಗರ್ಭಿಣಿಯಾದಾಗಲೂ ಅವಳನ್ನು ಯಜಮಾನತಿ ಕೆಟ್ಟದಾಗಿಯೇ ನಡೆಸಿಕೊಳ್ಳುತ್ತಾಳೆ; ಪಕ್ಷಪಾತ ಮಾಡುತ್ತಾಳೆ. ಕೆಲವೊಂದು ಸನ್ನಿವೇಶಗಳಲ್ಲಂತೂ, ಅವಳಿಗೆ ಮಾನವೀಯತೆಯೇ ಇಲ್ಲವೆಂದು ಭಾಸವಾಗುತ್ತದೆ. ಒಟ್ಟಿನಲ್ಲಿ ಲಲಿತ ಮನೆ ಬಿಟ್ಟು ಹೋಗುವವರೆವಿಗೂ ಅವಳಲ್ಲಿ ಸೊಸೆಯ ಬಗ್ಗೆ ಪ್ರೀತಿಯಿಲ್ಲ. ಮಗನ ಮೇಲೆ ಮಮತೆ ಇದ್ದಿತಾದರೂ, ಅವಳ ವರ್ತನೆಯಲ್ಲಿ ಎಲ್ಲಿಯೂ ಅದು ಕಂಡು ಬರುವುದಿಲ್ಲ. ಆಕೆ ಬಹಳ ಕಠಿಣಳಂತೆ ತೋರಿಬರುತ್ತಾಳೆ.

ಲಲಿತ ಮನೆ ಬಿಟ್ಟು ಹೋದ ಮೇಲಷ್ಟೆ ನಮಗೆ ಯಜಮಾನತಿಯ ಇನ್ನೊಂದು ಮುಖ ಪರಿಚಯವಾಗುವುದು. ಅವಳ ವರ್ತನೆಗಳಿಗೆ ಮಾಸ್ತಿಯವರು ಸಮರ್ಥನೆಯನ್ನು ನೀಡಿದ್ದಾರೆ. ಮಾತು ಕಠಿಣವಾಗಿದ್ದರೂ, ನಡತೆ ಕಠಿಣವಾಗಿದ್ದರೂ, ಮನಸ್ಸಿನಲ್ಲಿ ಮಾತ್ರ ಅವರು ಕಠಿಣರಾದವರಲ್ಲವೆಂಬ ಮಾತುಗಳು ಬರುತ್ತದೆ. ಆದರೆ ಆಕೆಯಲ್ಲಿ ಒಂದು ಸ್ವಲ್ಪವಾದರೂ ಅಂತಃಕರಣ ಇದ್ದರೂ, ಅದು ಕೃತಿಯಲ್ಲಿ ಎಲ್ಲಿಯೂ ಸುಳಿಯುವುದಿಲ್ಲ. ಸೊಸೆ ಹೊರಟು ಹೋದ ಮೇಲಷ್ಟೆ, ಯಜಮಾನಿಗೆ ಅವಳ ಬಗ್ಗೆ ಕನಿಕರ ಹುಟ್ಟುವುದು, ಅವಳ ಬಗ್ಗೆ ಒಳ್ಳೆಯ ಮಾತುಗಳು ಬರುವುದು.

ಆದರೆ ತನ್ನ ಕೊನೆಯ ಘಳಿಗೆಯಲ್ಲೂ ಆಕೆ ಹಂಬಲಿಸುವುದು ತನ್ನ ಸೊಸೆಗಾಗಿಯೇ ಹೊರತು ಮಗನಿಗಾಗಿ ಅಲ್ಲ – ಎಂಬುದು ಗಮನಾರ್ಹ ಸಂಗತಿ. ಅಂತಹ ಸೊಸೆಯನ್ನು ಇಟ್ಟುಕೊಂಡು ಸಂಸಾರಮಾಡುವ ಭಾಗ್ಯ ಇಲ್ಲ,ಒಂದು ದಿನವೂ ಬದಲು ಹೇಳಲಿಲ್ಲ.... ನನ್ನ ಕಂದ ಎಲ್ಲಿ ಹೋದಳೋ... ಎಂದು ಹಂಬಲಿಸುತ್ತಾಳೆ.

ಸೊಸೆಯಲ್ಲಿ ಹೆಚ್ಚುಸಲಿಗೆ ನೀಡಬಾರದೆಂಬ ಕಾರಣಕ್ಕೆ, ಆಕೆ ಹಾಗೆ ನಡೆದುಕೊಂಡಿರಬಹುದೆಂಬ ಕಾರಣ ಕೃತಿಯಲ್ಲಿದೆ. ಬಹುಶಃ ಅಂದಿನ ಸಾಮಾಜಿಕ ವ್ಯವಸ್ಥೆ, ಸಂಪ್ರದಾಯಬದ್ಧ ವಾತಾವರಣದಲ್ಲಿ ಸಹಜವಾಗಿ ಅತ್ತೆಯಂದಿರ ವರ್ತನೆ ಹಾಗೆಯೇ ಇದ್ದಿತೇನೋ. ಹೀಗೆಂದು ಭಾವಿಸಿದರೆ ಮಾತ್ರ ನಮಗೆ ಯಜಮಾನತಿಯ ವರ್ತನೆ ಅರ್ಥವಾಗಬಹುದು. ಈ ಕಾರಣದಿಂದಲೇ ಮಾಸ್ತಿಯವರು, ನಿಜವಾಗಿ ಆಕೆ ಕೆಟ್ಟ ಹೆಂಗಸಲ್ಲವೆಂದು ತೋರಿಸುವುದಕ್ಕಾಗಿ ಅವಳ ಪರವಾಗಿ ಇಂತಹ ಮಾತುಗಳನ್ನಾಡಿದ್ದಾರೆ.

ಇನ್ನೊಂದು ಮುಖ್ಯ ಸಂಗತಿಯೆಂದರೆ ಇಲ್ಲಿ ನಿರುಪಕರೇ ಒಂದು ಪಾತ್ರವಾಗಿದ್ದಾರೆ. ಅವರೇ ಸುಬೇದಾರರ ಅಳಿಯ, ಲಲಿತಳ ಗಂಡ. ಇಲ್ಲಿ ನಿರೂಪಕರೇ ಒಂದು ಪಾತ್ರವಾಗಿ ಪಾಲ್ಗೊಳ್ಳುವುದರಿಂದ ಆ ಪಾತ್ರದ ಸ್ವಭಾವವಾಗಲೀ, ವ್ಯಕ್ತಿತ್ವವಾಗಲೀ ತಿಳಿಯುವುದು ಸಾಧ್ಯವಿಲ್ಲ. ಒಟ್ಟಿನಲ್ಲಿ ಸುಬ್ಬಣ್ಣನಿಗಂತೂ ಅವರು ಲಲಿತಳ ಗಂಡನೆಂಬ ಕಾರಣಕ್ಕೆ ವಿಶೇಷ ಆದರ.

ಆದರೆ ಈ ಪಾತ್ರದಿಂದ 'ಸುಬ್ಬಣ್ಣ'ನ ಬಗೆಗಿನ ಮುಖ್ಯ ಸಂಗತಿಗಳನ್ನು ತಿಳಿಯಲು ಸಾಧ್ಯ – ಸುಬ್ಬಣ್ಣನ ಚರಿತೆಯೆಲ್ಲವನ್ನು ಸೂಕ್ಷ್ಮವಾಗಿ ಅವರು ಕೇಳಿ ತಿಳಿದು ಕೊಳ್ಳುತ್ತಾರೆ. ಸುಬ್ಬಣ್ಣನ ಆತ್ಮೋದ್ಧಾರದ ಬಗ್ಗೆ ಮಹತ್ವದ ಮಾತುಗಳನ್ನಾಡುತ್ತಾರೆ. ಸುಬ್ಬಣ್ಣನ ಸಂಸ್ಕಾರ – ಅವನು ಸಂಸಾರ ಮಾಡಿದುದರ ಫಲ. ಸಂಸಾರ ಮಾಡದೇ ಇದ್ದಿದ್ದರೆ, ಅವನಿಗೆ ಇಂತಹ ಪರಿಪಕ್ವತೆ ಬರುತ್ತಲೇ ಇರಲಿಲ್ಲವೆಂಬುದು ಅವರ ತಿಳುವಳಿಕೆ. ಸುಬ್ಬಣ್ಣನನ್ನು ಹತ್ತಿರದಿಂದ ಕಂಡು ಬಲ್ಲವರಾದ್ದರಿಂದ, ಅವರ ಮಾತುಗಳು ಹೆಚ್ಚು ಬೆಲೆಯುಳ್ಳದ್ದೆನಿಸುತ್ತದೆ. ಒಮ್ಮೆ ಅವರು ಸುಬ್ಬಣ್ಣನನ್ನು ಕೇಳುತ್ತಾರೆ – ಸಂಗೀತದಲ್ಲಿ ಏಳು ಸ್ವರಗಳೇ ತಾನೆ? – ಆಗ ಸುಬ್ಬಣ್ಣ ಉತ್ತರಿಸುತ್ತಾರೆ – ಏಳು ಎಂದು ಕೊಂಡರೆ ಏಳು, ಇಲ್ಲ ನೂರುಕೋಟಿ ಸ್ವರ, ಇಲ್ಲ ಒಂದೇ ಸ್ವರ.

'ಸುಬ್ಬಣ್ಣ'ನ ಧೋರಣೆ – ಮನಸ್ಥಿತಿಗಳನ್ನು ತಿಳಿಯಲು ಈ ಪಾತ್ರ ನಿರೂಪಕನಾಗಿ ಸಹಾಯಕವಾಗಿದೆ. ಸುಬ್ಬಣ್ಣನಿಗೆ ತನ್ನ ಸಂಗೀತದ ಮೂಲಕವೇ ಸರ್ವತತ್ತ್ವಗಳೂ ತಿಳಿದು ಹೋಗಿತ್ತು. ಇಂತಹ ತಿಳಿವಿನಿಂದಲೇ ಅವನು ಮುಕ್ತಿಯನ್ನು ಸಾಧಿಸಿದ್ದ ಎಂಬುದು ನಿರೂಪಕರದ್ದೇ ಮಾತುಗಳಾಗಿವೆ. ಈ ಪಾತ್ರದಿಂದಲೇ ನಾವು ಸುಬ್ಬಣ್ಣನನ್ನು ಕಾಣಲು ಸಾಧ್ಯವಿರುವುದು.

ಇನ್ನುಳಿದಂತೆ ಸಾಹುಕಾರರು, ಮಿಠಾಯಿ ಅಂಗಡಿಯ ಮುದುಕಿ, ಸಾಹುಕಾರನ ಮಗಳು –ಇವು ಸಣ್ಣ – ಪುಟ್ಟ ಪಾತ್ರಗಳಾದರೂ ಗಮನ ಸೆಳೆಯುತ್ತವೆ.

ಸಾಹುಕಾರರು ಹೃದಯವಂತರು. ಸುಬ್ಬಣ್ಣನ ಗಾನವನ್ನು ಕೇಳಿ ಮೆಚ್ಚಿ, ಅವನನ್ನು ಮನೆಗೆ ಕರೆದೊಯ್ಯುತ್ತಾರೆ. ಸುಬ್ಬಣ್ಣನ 'ಸಾವಿರಹೇ ತವದೀನಾ' – ಎಂಬ ಗಾನವನ್ನು ಕೇಳಿ, ರಾಧೆಯ ದೈನ್ಯವನ್ನು ಆಸ್ವಾದಿಸಿ ಕಣ್ಣೀರು ಮಿಡಿಯುವ ಮೃದುಹೃದಯಿ ಆತ. ಸುಬ್ಬಣ್ಣನೊಡನೆ ಸಾಹುಕಾರರು ಬಹಳ ಔದಾರ್ಯಯುತವಾಗಿ ನಡೆದುಕೊಳ್ಳುತ್ತಾರೆ.

ಸಾಹುಕಾರರ ಮಗಳು ಸುಬ್ಬಣ್ಣನಿಗೆ ಹಣ್ಣು ನೀಡಿಯೇ ಅತೀವ ಸಂತೋಷವನ್ನು ನೀಡುತ್ತಾಳೆ. ಸುಬ್ಬಣ್ಣನಿಗೆ ಅವನ ಮಗಳ ಸ್ಮೃತಿಯನ್ನು ತಂದುಕೊಡುತ್ತಾಳೆ. ಜೀವನದಲ್ಲಿ ನೊಂದು – ಬೆಂದಿದ್ದ ಸುಬ್ಬಣ್ಣನ ಮಮತೆಯನ್ನು ತಡವಿ, ಸ್ವಲ್ಪ ಕಾಲವಾದರೂ ಅವನ ಮನಕ್ಕೆ ತಂಪೆರೆಯುತ್ತಾಳೆ.

ಮಿಠಾಯಿ ಅಂಗಡಿಯ ಮುದುಕಿಯಾದರೋ ಬಡವಳು ಸುಬ್ಬಣ್ಣನ ಗಾಯನದಿಂದ ತನ್ನ ವ್ಯಾಪಾರಕ್ಕೆ ಉಪಕಾರವಾಯಿತೆಂದು, ದಿಕ್ಕಿಲ್ಲದ ಅವನಿಗೆ ಮಿಠಾಯಿ ನೀಡಿ ಉಪಕರಿಸುತ್ತಾಳೆ. ಸುಬ್ಬಣ್ಣನ ಹಮ್ಮು–ಬಿಮ್ಮುಗಳು

ಕಳೆದು ಅವನಿಗೆ ಹೊಸತೊಂದು ಅನುಭವವಾಗುವುದು, ಅವನು ಮಿಠಾಯಿ ಅಂಗಡಿಯ ಮುಂದೆ ನಿಂತು ಪಿಟೀಲು ಬಾರಿಸಿದಾಗಲೇ. ಅರಮನೆಯಲ್ಲಿ ಸಂಗೀತ ಗಾರನಾಗಬೇಕೆಂಬ ಅತನ ವ್ಯಕ್ತಿತ್ವ ವಿಸರ್ಜನೆಯಾಗುವುದು ಈ ಹಂತದಲ್ಲಿಯೇ.

'ಸುಬ್ಬಣ್ಣ'ನ ಮಕ್ಕಳ ಪಾತ್ರಗಳಿಗೆ ಇಲ್ಲಿ ಹೆಚ್ಚು ಅವಕಾಶವಿಲ್ಲ. ಮಗ ಶೇಷನಾಗಲೀ, ವಯಸ್ಸಿಗೆ ಬಂದ ಮಗಳ ಪಾತ್ರವಾಗಲೀ ಅಸ್ತಿತ್ವವನ್ನು ಪಡೆದಿಲ್ಲ. ಈ ಪಾತ್ರಗಳ ಮರಣ 'ಸುಬ್ಬಣ್ಣ'ನ ಆತ್ಮೋದ್ಧಾರಕ್ಕೆ ಕಾರಣವಾಗುತ್ತದೆಯಷ್ಟೆ. ಇದರಿಂದ ಆ ಪಾತ್ರಗಳಿಗಾದ ಉಪಯೋಗವೇನೂ ಇಲ್ಲ. ಆದರೆ ಕತೆಯಲ್ಲಿ ಇದು ಬಹಳ ಮುಖ್ಯವಾದ, ಅನಿವಾರ್ಯವಾದ ಅಂಶವಾಗಿದೆ.

'ಸುಬ್ಬಣ್ಣ' ಕೃತಿಯ ಎಲ್ಲಾ ಪಾತ್ರಗಳನ್ನೂ ನೋಡಿದಾಗ, ಇವು ಸುಬ್ಬಣ್ಣನ ಆತ್ಮೋದ್ಧಾರದ ಕೇಂದ್ರ ಆಶಯಕ್ಕಾಗಿಯೇ ದುಡಿಯುವ ಪಾತ್ರಗಳಾಗಿವೆ ಎನಿಸುತ್ತವೆ. ಇಲ್ಲಿ ಸುಬ್ಬಣ್ಣನ ಆತ್ಮೋಧ್ಧರ ಮುಖ್ಯವಾದ್ದರಿಂದ ಇದು ಸಹಜವೂ ಆಗಿದೆ. ಈ ಎಲ್ಲಾ ಪಾತ್ರಗಳು ತಮ್ಮ ಕಾರ್ಯಗಳನ್ನು ತಕ್ಕಮಟ್ಟಿಗೆ ಯಶಸ್ವಿಯಾಗಿಯೇ ನಿರ್ವಹಿಸಿವೆ. ಅಷ್ಟೇ ಅರ್ಥವಂತಿಕೆಯಿಂದ ಮೈ ತಳೆದಿವೆ. ಈ ಕೃತಿಯಲ್ಲಿ ವ್ಯಕ್ತಿಯ ರೂಕ್ಷತೆಯನ್ನು, ಕೆಡುಕನ್ನು ಚಿತ್ರಿಸುವಂತಹ ಒಂದೂ ಪಾತ್ರಗಳಿಲ್ಲ. ಆದರೆ ಯಾವ ಪಾತ್ರವೂ ಅವಾಸ್ತವವೆನಿಸಿಲ್ಲ. ವಾಸ್ತವತೆ, ಆದರ್ಶತೆಯ ಎರಡೂ ಸ್ಪರ್ಶಗಳೂ ಇಲ್ಲಿನ ಪಾತ್ರಗಳಾಗಿವೆ. ಮುಖ್ಯವಾಗಿ ಸ್ತ್ರೀ ಪಾತ್ರಗಳು, ಬಹಳ ಉತ್ಕೃಷ್ಟವಾದ ರೀತಿಯಲ್ಲಿವೆ. ವಾರಸ್ತ್ರೀಯ ಪಾತ್ರಕ್ಕೂ, ಇಲ್ಲಿ ಯಾವುದೇ ಕಳಂಕ ತಟ್ಟಿಲ್ಲ, ಬದಲಾಗಿ ಪೂಜ್ಯತೆಯಲ್ಲಿ ಮಿಂದಿದೆ.

ಇದು ಮಾಸ್ತಿಯವರ ದೃಷ್ಟಿ. ಅವರ ದೃಷ್ಟಿಯಂತೆಯೇ ಇಲ್ಲಿನ ಪಾತ್ರ ಸೃಷ್ಟಿಯಿದೆ.

* * *

ಅಧ್ಯಾಯ – ೫

# 'ಸಂಧ್ಯಾರಾಗ'ದ ಪಾತ್ರಗಳು

'ಸಂಧ್ಯಾರಾಗ' – ಒಂದು ಕಾದಂಬರಿಯಾದ್ದರಿಂದ ಸಹಜವಾಗಿ ಇದರಲ್ಲಿ ಪಾತ್ರಗಳು ಗಿಜಿಗಿಡುವಂತೆ ತುಂಬಿಕೊಂಡಿವೆ. ಆದರೆ ಇಲ್ಲಿ ಹೆಚ್ಚು ಸಂಕೀರ್ಣ ಪಾತ್ರಗಳಿಲ್ಲ. ಬಹಳ ಸರಳವಾದ, ಆದರ್ಶಮಯ ಪಾತ್ರಗಳು ಭಾಗಶಃ ಕೃತಿಯನ್ನು ಆವರಿಸಿವೆ. ಒಳಿತು –ಕೆಡಕು, ಸರಿ–ತಪ್ಪು – ಎಂಬಂತಹ ಪರಿಕಲ್ಪನೆಗಳಿಗೆ ಮಾತ್ರ ಸೀಮಿತವಾದ ಪಾತ್ರಗಳನ್ನು ಇಲ್ಲಿ ಕಾಣಬಹುದು. ಸ್ವಲ್ಪಮಟ್ಟಿಗೆ ಭಾವಾವೇಶಕ್ಕೆ ಸಿಲುಕಿರುವ ಪಾತ್ರಗಳಂತೆ ಇವು ತೋರುತ್ತವೆ. ಆದರೆ ಇವುಗಳ ನಡುವೆ ಕೆಲವು ಮರೆಯಲಾಗದ ಪಾತ್ರಗಳೂ ಕಾದಂಬರಿಯನ್ನು ಬೆಳಗಿಸಿವೆ.

'ಸಂಧ್ಯಾರಾಗ'ದ ನಾಯಕ ಲಕ್ಷ್ಮಣ, ಹುಟ್ಟುಕಲಾವಿದ. ಆತ 'ಸಾಧಕ'ನಿಗಿಂತ ಹೆಚ್ಚಾಗಿ 'ಸಿದ್ಧ'ನಾಗಿದ್ದಾನೆ. ಅವನ ಕಲೆ ದೈವದತ್ತವಾದುದು. ಅಂತಹ ಕಲೆಯನ್ನು ಒಂದು ಉತ್ಕೃಷ್ಟ ಸ್ಥಿತಿಗೆ ಲಕ್ಷ್ಮಣ ಕೊಂಡೊಯ್ಯುತ್ತಾನೆ. ಒಬ್ಬ ಕಲಾವಿದನಾಗಿ ಎತ್ತರದಲ್ಲಿ ನಿಲ್ಲುವ ಲಕ್ಷ್ಮಣ ಒಬ್ಬ ವ್ಯಕ್ತಿಯಾಗಿ ಅಷ್ಟೇ ಎತ್ತರದಲ್ಲಿ ನಿಲ್ಲುತ್ತಾನೆಂದು ಹೇಳಲಾಗುವುದಿಲ್ಲ. ಅವನ ಸಂಗೀತ ಕಲೆ, ಜೀವನದ ಇತರ ವಿಚಾರಗಳಿಗೆ ಅವನು ಬೆಲೆ ಕೊಡದಂತೆ ಮಾಡಿರುವುದು, ಅವನ ಬಲವೂ ಹೌದು, ದೌರ್ಬಲ್ಯವೂ ಹೌದು. ಅವನ ಇಡೀ ಬಾಳು ಗಾನತಪಸ್ಸಿಗೆ ಮೀಸಲಾಯಿತು. ಆದರೆ ಈ ಸಿದ್ಧಿಯಲ್ಲಿ ಅವನ ಬದುಕು ಗೌಣವಾಯಿತೆಂಬುದೂ ಅಷ್ಟೇ ಸತ್ಯ. ಒಂದು ಹಂತದಲ್ಲಂತೂ ಲಕ್ಷ್ಮಣ ಶುದ್ಧ ಫಲಾಯನವಾದಿಯಂತೆ ಕಂಡುಬರುತ್ತಾನೆ.

ಚಿಕ್ಕಂದಿನಿಂದಲೂ ಲಕ್ಷ್ಮಣನ ಸ್ವಭಾವ ಉಳಿದವರಿಗಿಂತ ಭಿನ್ನವಾದುದು. ಅವನು ಹೆಚ್ಚು ಅಂತರ್ಮುಖಿ, ಸ್ನೇಹಮಯಿ, ಮೃದುಹೃದಯಿ. ಹುಟ್ಟುತಲೇ ಕಲಾವಿದನಾಗಿ ಹುಟ್ಟಿದ ಲಕ್ಷ್ಮಣನಿಗೆ ದೊರೆತ ಪ್ರೋತ್ಸಾಹಗಳೇನೂ ಕಡಿಮೆಯಿಲ್ಲ. ಭಾರತದ ಶಾಮಣ್ಣನ ತಂಬೂರಿಯ ನಾದಗಳಂತೂ, ಅವನ ನರ–ನರಗಳನ್ನೂ ಮಿಡಿಯುತ್ತಿದ್ದವು. ಅವನ ಸಂಗೀತಾಭ್ಯಾಸದ ಆರಂಭದ ಹಂತದಲ್ಲೇ ಮುಳುಬಾಗಿಲು ಚೆನ್ನಪ್ಪನವರ ಆಶೀರ್ವಚನ ಅವನಿಗೆ ಲಭಿಸುತ್ತದೆ.

**"ಚೆಂದಾಕಿ ಶಾರದಾಮ್ನೋರ ಸೇವೆಮಾಡು. ತಾಯಿ ನಿನ್ನ ನಾಲಿಗೆಯಲ್ಲಿ ಬೀಜಾಕ್ಷರ ಬರೆದವ್ಳೆ... ನೀನು ಕಲಿಯೋಕೆ ಹುಟ್ಟಿಲ್ಲ ಅಪ್ಪಯ್ಯ ಕಲ್ಸೋಕೆ"**[೧].

ಈ ಮಾತುಗಳು ಕಲಾವಿದ ಲಕ್ಷ್ಮಣನನ್ನು ಪರಿಚಯ ಮಾಡಿಕೊಡುತ್ತವೆ. ಅವನ ಜೀವನದ ಕೊನೆಯ ಹಂತದವರೆಗೂ ಅವನಲ್ಲಿ ಮುಳುಬಾಗಿಲ ಚೆನ್ನಪ್ಪನವರ ಪ್ರಭಾವ ಎದ್ದುಕಾಣುತ್ತದೆ. ಈ ಹಂತದಲ್ಲಿ ಲಕ್ಷ್ಮಣನಿಗೆ

---

೧. 'ಸಂಧ್ಯಾರಾಗ' – ಅ.ನ.ಕೃ. – ಪು. ೨೬.

ಪೂರ್ವಿಯೊಂದಿಗೆ ಪ್ರಾಣಪ್ರದವಾದ ಸಂಬಂಧ ಬೆಳೆಯುತ್ತದೆ. ಚೆನ್ನಪ್ಪನವರು ಪೂರ್ವಿಯನ್ನು ಹಾಡಿದ ರೀತಿಯಲ್ಲಿಯೇ ತಾನೂ ಹಾಡಬೇಕೆಂಬ ಬಯಕೆ ಅವನಲ್ಲಿ ಬೇರೂರುತ್ತದೆ. ಲಕ್ಷ್ಮಣನ ಕಲಾಜೀವನ ಆರಂಭವಾಗುವುದು, ಅವನ ಅಂತ್ಯವಾಗುವುದೂ ಈ ಸಂಧ್ಯಾರಾಗದಲ್ಲೇ. ಚೆನ್ನಪ್ಪನವರು ಲಕ್ಷ್ಮಣನಲ್ಲಿ ಅವನ ಸಂಗೀತದ ಬಗ್ಗೆ ನಂಬಿಕೆ – ಭರವಸೆಗಳನ್ನು ಬೆಳೆಸುತ್ತಾರೆ. ಈ ಹಾದಿಯಲ್ಲಿಯೇ ಲಕ್ಷ್ಮಣನ ಕಲಾ ಜೀವನ ಮುಂದುವರೆಯುತ್ತದೆ. ಲಕ್ಷ್ಮಣನ ಸಂಗೀತಕ್ಕೆ ಮನೆಯಲ್ಲಿ ಆರಂಭದಲ್ಲಿ ಅಷ್ಟೇನೂ ಪ್ರೋತ್ಸಾಹ ದೊರೆಯುವುದಿಲ್ಲ; ಆದರೆ ಯಾವುದೇ ಅಡ್ಡಿ – ಆತಂಕಗಳೂ ಬರುವುದಿಲ್ಲ. ಲಕ್ಷ್ಮಣನ ಸಂಗೀತಕ್ಕೆ ಪ್ರೇರಣೆ ದೊರೆಯುವುದು ಅವನ ತಾಯಿಯಿಂದ ಮಾತ್ರ. ಆ ಪ್ರೋತ್ಸಾಹ ಅವನ ಸಂಗೀತಕ್ಕೆ ಶ್ರುತಿ ಸೇರಿಸಿತು. ಲಕ್ಷ್ಮಣನಲ್ಲಿ ತಂದೆ – ತಾಯಿಯರ ಆತ್ಮಸಂಸ್ಕಾರ, ಸಹೃದಯತೆಗಳು ಮೈತಳೆದಿದ್ದವು. ಅವನು ಒಬ್ಬ ಸಾಧಕನಾಗಲು ಇದೂ ಸಹ ಕಾರಣವೆನ್ನಬಹುದು.

ಲಕ್ಷ್ಮಣನ ಕಲಾ ಜೀವನವಂತೂ ನಿರಾತಂಕವಾಗಿ ಸಾಗುತ್ತದೆ. ಅಲ್ಲಿ ಅವನಿಗೆ ಯಾವುದೇ ಶ್ರಮವಿಲ್ಲ, ಸೆಣಸಾಟವಿಲ್ಲ. ಅವನಿಗೆ ಎದುರಾಗುವುದು ಜೀವನ ಸಮಸ್ಯೆಯೇ ಹೊರತು ಕಲಾ ಸಮಸ್ಯೆಗಳಲ್ಲ. ಲಕ್ಷ್ಮಣನ ಜೀವನವನ್ನು ನೋಡಿದಾಗ, ಆರಂಭದಿಂದಲೂ ಅವನು ಕಲೆಯಲ್ಲಿ ಹಂತ–ಹಂತವಾಗಿ ಮೇಲೇರಿದಂತೆ ತೋರುವುದಿಲ್ಲ. ಏನಿದ್ದರೂ ಅವನ ಕಲೆ ಇನ್ನಷ್ಟು – ಮತ್ತಷ್ಟು ಪ್ರಖರವಾಗುತ್ತಾ ಪರಮಾವಧಿಯನ್ನು ಮುಟ್ಟುತ್ತದೆ. ಲಕ್ಷ್ಮಣನ ಕಲಾಜೀವನದ ಸಾಧನೆಯೇನಿದ್ದರು ಅವನ ಅಂತ್ಯದ ಪರಿಣಾಮಕಾರಿ ಚಿತ್ರಣದಿಂದ ಮಾತ್ರವೇ ವಿದಿತವಾಗುವುದು.

ಲಕ್ಷ್ಮಣನಿಗೆ ದೊಡ್ಡ – ದೊಡ್ಡ ವಿದ್ವಾಂಸರುಗಳು ಗುರುಗಳಾಗಿ ದೊರೆಯುತ್ತಾರೆ. ಅನಂತಾಚಾರ್ಯರು, ತಂಜಾವೂರು ಕೃಷ್ಣಯ್ಯ – ಈ ವಿದ್ವಾಂಸರ ಸಾನಿಧ್ಯದಿಂದ ಲಕ್ಷ್ಮಣನ ಕಲೆಗೆ ಹೊಸ ಮೆರಗು ಬರುತ್ತದೆ. ಇಲ್ಲಿ ಉದ್ದಕ್ಕೂ ಲಕ್ಷ್ಮಣ ಒಬ್ಬ ವ್ಯಕ್ತಿಗಿಂತ ಹೆಚ್ಚಾಗಿ ಒಬ್ಬ ಕಲಾವಿದನಾಗಿಯೇ ಪರಿಚಯವಾಗುತ್ತಾ ಹೋಗುತ್ತಾನೆ. ಅವನ ಜೀವನದಲ್ಲಿ ಸಮಸ್ಯೆಗಳು ಬರುವವರೆಗೂ ಅವನ ವ್ಯಕ್ತಿತ್ವ ಸ್ಪಷ್ಟವಾಗಿ ತಿಳಿಯುವುದಿಲ್ಲ. ಅಂತಹ ಪ್ರಸಂಗಗಳು ಕೆಲವು ಮಾತ್ರ ಗೋಚರಿಸುತ್ತವೆ.

ದೇವಸ್ಥಾನದಲ್ಲಿ ಭಜನೆಯ ಸಂದರ್ಭ ಊರಿನವರಿಗೆಲ್ಲಾ ಹೊಟ್ಟೆ ತುಂಬಾ ಚರುಪು ಹಂಚುವುದು, ತಂಗಿ ಶಾಂತ ಹೂಗಳನ್ನು ಕಿತ್ತು ಬಿಟ್ಟಾಗ ದಳ–ದಳನೆ ಕಣ್ಣೀರು ಸುರಿಸುವುದು, ಪ್ರೀತಿಯ ಹಳ್ಳಿಯನ್ನು ತೊರೆಯುವಾಗ ನೊಂದುಕೊಳ್ಳುವುದು – ಇವೆಲ್ಲಾ ಲಕ್ಷ್ಮಣ ಎಷ್ಟು ಮೃದು ಹೃದಯಿ ಎಂಬುದನ್ನು ಮನವರಿಕೆ ಮಾಡಿಕೊಡುತ್ತದೆ. ಆದರೆ ಅವನ ಈ ಅತಿಯಾದ ಒಳ್ಳೆತನವೆ ಅವನ ಜೀವನ ದುರಂತಕ್ಕೆ ಕಾರಣವಾಗುವುದು ವಿಪರ್ಯಾಸ.

ಲಕ್ಷ್ಮಣನಿಗೆ ಸಂಗೀತದ ಬಗೆಗೆ ಎಷ್ಟು ಪ್ರೇಮವೆಂದರೆ, ಜಯಾಳ ಸಂಗೀತವನ್ನು ಕೇಳಿಯೇ, ಅವಳನ್ನು ತನ್ನ ಬಾಳ ಸಂಗಾತಿಯಾಗಿ ಸ್ವೀಕರಿಸುತ್ತಾನೆ. ತನ್ನ ಸಂಗೀತ ಯಾವ ಹಂತದಲ್ಲಿದೆ, ಯಾವುದು ನಿಜವಾದ ಸಂಗೀತ, ಎಂಬ ಕಲಾವಿದ ಪ್ರಜ್ಞೆ ಲಕ್ಷ್ಮಣನಿಗಿದೆ. ಹಲವಾರು ಸಂಗೀತ ಕಛೇರಿಗಳನ್ನು ನೀಡಿ ಅವನು ಪ್ರಸಿದ್ಧನಾದರೂ,

ಅವನ ಸಂಗೀತ ಆತ್ಮತೃಪ್ತಿಯನ್ನು ಅವನಿಗೆ ನೀಡಿಲ್ಲ. ತನ್ನ ಸಂಗೀತ ಕೇವಲ 'ಸರಿಗಮಪದನಿಸ'ಗಳ ಹೋರಾಟ, ನಿಜವಾದ ಸಂಗೀತವಲ್ಲ ಎಂಬ ತಿಳಿವನ್ನು ಲಕ್ಷ್ಮಣ ಪಡೆದವನಾಗಿದ್ದಾನೆ. ಇದು ಕಲಾವಿದನೊಬ್ಬನ ನಿಜವಾದ ಮನಸ್ಥಿತಿ. ಯಾವಾಗ ಒಬ್ಬ ಕಲಾವಿದನಿಗೆ, ಅವನ ಕಲೆ ಆತ್ಮತೃಪ್ತಿಯನ್ನು ನೀಡುತ್ತದೆಯೋ ಆಗಲೇ ಅದು ನಿಜವಾದ ಕಲೆಯಾಗುವುದು. ಆ ನಿಜವಾದ ಕಲೆಯನ್ನು ಮುಟ್ಟುವುದರೆಡೆಗೆ ಅವನ ಪಯಣ ಸಾಗುತ್ತದೆ.

ತಂದೆ-ತಾಯಿಗಳ ಮರಣ, ಅಣ್ಣನ ಸರ್ವಾಧಿಕಾರತ್ವ – ಲಕ್ಷ್ಮಣನ ವ್ಯಕ್ತಿತ್ವಕ್ಕೆ ಸವಾಲೊಡ್ಡುವ ಸನ್ನಿವೇಶಗಳು. ಇವು ಲಕ್ಷ್ಮಣನ ಬದುಕನ್ನು ದುರಂತಮಯವಾಗಿಸುತ್ತವೆ. ಅವನ ಸಾಂಸಾರಿಕ ಬದುಕು, ಕಲಾ ಬದುಕು – ಎರಡಕ್ಕೂ ಏಕಕಾಲದಲ್ಲಿ ಪೆಟ್ಟುಬೀಳುತ್ತದೆ. ಇದುವರೆವಿಗೂ ಕಲಾವಿದನಾಗಿ ಓದುಗರ ದೃಷ್ಟಿಯಲ್ಲಿ ಏರುತ್ತಾ ಹೋಗುವ ಲಕ್ಷ್ಮಣನ ವ್ಯಕ್ತಿತ್ವದ ನಿಜವಾದ ಅರ್ಥೈಸುವಿಕೆ ಈ ಹಿನ್ನಲೆಯಲ್ಲಿ ಸಾಧ್ಯವಾಗಿದೆ. ಲಕ್ಷ್ಮಣನ ಹೋರಾಟ – ಸಂಘರ್ಷಗಳು ಇಲ್ಲಿಂದ ಆರಂಭವಾಗಿ, ಅವನ ಜೀವನದ ದಿಕ್ಕನ್ನು ಬದಲಿಸುತ್ತವೆ.

ಅಣ್ಣ ರಾಮಚಂದ್ರನ ಹಠಕ್ಕೆ ಲಕ್ಷ್ಮಣನ ಹೆಂಡತಿ ಪ್ರಾಣ ತೆರಬೇಕಾಗುತ್ತದೆ. ತನ್ನ ಹೆಂಡತಿಗಾಗುತ್ತಿದ್ದ ಎಲ್ಲಾ ಅನ್ಯಾಯಗಳ ಅರಿವಿದ್ದೂ ಲಕ್ಷ್ಮಣ ಮೌನಿ. ಅವನ ಈ ಮೌನ ಓದುಗರಿಗೆ ಸಹ್ಯವಾಗುವಂತದಲ್ಲ. ಲಕ್ಷ್ಮಣ ಎಷ್ಟೇ ದೊಡ್ಡ ಕಲಾವಿದನಾದರೂ, ಆತ ಒಳ್ಳೆಯ ಗಂಡನಾಗಲು ಸಾಧ್ಯವಾಗಲಿಲ್ಲ. ಅವನಲ್ಲಿ ಒಳ್ಳೆಯತನವಿದೆ, ಮೃದುತ್ವವಿದೆ, ಆದರೆ ಛಲವಿಲ್ಲ. ಲಕ್ಷ್ಮಣ ಗುಣವಂತ ಆದರೆ ಧೈರ್ಯವಂತನಲ್ಲ; ಅವನಲ್ಲಿ ಪ್ರತಿಭಟನೆಯ ಲವಲೇಶವೂ ಗೋಚರವಾಗುವುದಿಲ್ಲ. ಜಯಾಳ ಮರಣ, ಲಕ್ಷ್ಮಣನ ಜೀವನದ – ವ್ಯಕ್ತಿತ್ವದ ಸೋಲು. ಲಕ್ಷ್ಮಣನಲ್ಲಿ ಆತ್ಮಾಭಿಮಾನ ಇದ್ದಿದ್ದರೆ, ಅವನು ಜಯಾಳನ್ನು ಉಳಿಸಿಕೊಳ್ಳಬಹುದಾಗಿತ್ತು. ಆದರೆ ತನ್ನ ಸಂಗೀತ ಸಾಧನೆಯ ಭರದಲ್ಲಿ ಲಕ್ಷ್ಮಣ, ಸಂಸಾರಕ್ಕೆ ಅಗತ್ಯ ಗಮನ ಕೊಟ್ಟಂತಿಲ್ಲ. ಜಯಾಳ ಸಾವಿಗೆ ಲಕ್ಷ್ಮಣನೂ ಅಲ್ಪಮಟ್ಟಿಗೆ ಕಾರಣನಾಗಿದ್ದಾನೆಂದರೆ ತಪ್ಪಿಲ್ಲ.

ಆದರೆ ಹೆಂಡತಿಯ ಸಾವು ಲಕ್ಷ್ಮಣನನ್ನು ಕುಸಿಯುವಂತೆ ಮಾಡುತ್ತದೆ. ಅವನ ಅಸ್ತಿತ್ವ ಮಂಕಾಗುತ್ತದೆ. ತನ್ನಷ್ಟಕ್ಕೇ ಹಾಡಿಕೊಳ್ಳುವುದು, ಮೌನವಾಗಿರುವುದು, ತಂಬೂರಿಯನ್ನು ನೋಡಿ ನಗುವುದು, ಹೀಗೆ ತನ್ನ ಮಾನಸಿಕ ಸ್ಥಿಮಿತವನ್ನು ಲಕ್ಷ್ಮಣ ಕಳೆದುಕೊಳ್ಳುತ್ತಾನೆ. ಅಕ್ಷರಶಃ ಹುಚ್ಚನಂತಾದ ಲಕ್ಷ್ಮಣನ ಕಲಾಸಾಧನೆ ಮಸುಕಾಗುತ್ತದೆ. ಅವನಿಗೆ ಮತ್ತೆ ಅರಿವು ಮರುಕಳಿಸುವುದು ಸಂಗೀತದಿಂದಲೇ ಆದರೆ ಈ ಹಿಂದಿನ ಲಕ್ಷ್ಮಣನಿಗೂ, ಈಗಿನ ಲಕ್ಷ್ಮಣನಿಗೂ ಅಂತರವಿದೆ. ಮುಖ್ಯವಾಗಿ ಅವನ ಕಲೆ ಹೆಚ್ಚು ಪಕ್ವಗೊಂಡಿದೆ. ಇಲ್ಲಿ ಅವನು ತನ್ನ ಕಲೆಗೆ ಇನ್ನೂ ಹತ್ತಿರವಾಗಿದ್ದಾನೆ; ಲೋಕದಿಂದ ಬೇರ್ಪಟ್ಟಂತೆ ತೋರುತ್ತಾನೆ.

ಲಕ್ಷ್ಮಣನ ಸಂಗೀತದಲ್ಲಿ ಅವನ ಅಂತರಂಗವೂ ಸೇರಿ, ಅವನನ್ನು ನಿಜವಾದ ಕಲಾವಿದನನ್ನಾಗಿ ಮಾಡುತ್ತದೆ. ಅವನ ಸಂಗೀತ ದೈವಿಕತೆಯನ್ನು ಪಡೆಯುವ ಮೂಲಕ, ಪೂರ್ಣತೆಯೆಡೆಗೆ ಹೆಜ್ಜೆ ಹಾಕಿದೆ. ಲಕ್ಷ್ಮಣನ ಗುರುಗಳಾದ ತಂಜಾವೂರು ಕೃಷ್ಣಯ್ಯನವರು, ಪೂರ್ವೀ ಕೃಷ್ಣಯ್ಯನೆಂದೇ ಪ್ರಸಿದ್ಧರು, ಲಕ್ಷ್ಮಣನಿಗೆ ಸಂಧ್ಯಾರಾಗ ಪೂರ್ವಿಯನ್ನು

ದತ್ತಿ ಕೊಟ್ಟದ್ದು ಒಂದು ರಸಘಳಿಗೆ. ಮೊದಲೇ ಲಕ್ಷ್ಮಣನಿಗೆ ಸಂಧ್ಯಾಪೂರ್ವಿ ಪ್ರಾಣಪ್ರದ ರಾಗ; ಈ ಹಂತದಲ್ಲಿ ಅದು ಇನ್ನೂ ಬಲವಾಯಿತು.

**"ನಿನ್ನ ವಿದ್ಯೆ ದೈವೀಕವಾದದ್ದು ... ನಿನ್ನ ಬೆಳಕಿನಿಂದ ಹಲವು ಹೃದಯಗಳು ಬೆಳಗುತ್ತವೆ.... ಲೋಕವನ್ನೇ ಅಂಧಕಾರರೂಪದಿಂದ ನಿವೃತ್ತಿ ಮಾಡು"**[೧].

ಎಂಬ ಕೃಷ್ಣಯ್ಯನವರ ಮಾತುಗಳು ಲಕ್ಷ್ಮಣನ ಸಂಗೀತಕ್ಕೆ ಕಳಸಪ್ರಾಯವಾಯಿತು. ಮುಂದೆ ಲಕ್ಷ್ಮಣನ ಕಲಾತಪಸ್ಸು ಯಾವ ನೆಲೆಯನ್ನು ಮುಟ್ಟಬಲ್ಲದು ಎಂಬುದನ್ನು ಸೂಚ್ಯವಾಗಿ ಈ ಮಾತುಗಳು ಧ್ವನಿಸುತ್ತದೆ. ಅವನ ಸುಖ–ದುಃಖ, ಆಸೆ – ಆಕಾಂಕ್ಷೆ – ಕನಸುಗಳೆಲ್ಲವೂ ಕಲಾದೇವಿಗೆ ಮುಡಿಪಾದವು.

ವೀಣೆ ಶೇಷಣ್ಣನವರ ಮನೆಯಲ್ಲಿ ಲಕ್ಷ್ಮಣ ಪಾಲಘಾಟಿನ ವಿದ್ವಾಂಸರನ್ನು ಸೋಲಿಸಿದುದು, ತೋಡಿರಾಗದ ಅದ್ಭುತ ಪರಿಚಯ ಮಾಡಿಕೊಡುವುದು – ಎಲ್ಲವೂ ಒಂದು ರೀತಿಯ ವಿಚಿತ್ರ, ವಿಶೇಷ ಸನ್ನಿವೇಶಗಳು, ಲಕ್ಷ್ಮಣನ ಪಾತ್ರವನ್ನು ಮತ್ತಷ್ಟು ಅಮರಗೊಳಿಸುತ್ತವೆ.



ಲಕ್ಷ್ಮಣನ ಸಂಗೀತಕ್ಕೆ ಒಂದು ಅಲೌಕಿಕ ಸ್ಪರ್ಶ ದೊರೆಯುತ್ತಿದ್ದಂತೆಯೇ, ಅವನು ಪ್ರಕೃತಿಯೊಂದಿಗೆ ಬೆರೆಯಲಾರಂಭಿಸುತ್ತಾನೆ. ಪ್ರಕೃತಿಯ ಚರಾಚರ – ಚೇತನಾಚೇತನ ಶಕ್ತಿಗಳೆಲ್ಲಾ ಅವನ ಗಾನದಲ್ಲಿ ಮೇಳೈಸಿತು. ಲಕ್ಷ್ಮಣ ಪ್ರಕೃತಿಯ ಕೂಸಾದ. ಲೌಕಿಕ ಬಂಧನಗಳೆಲ್ಲಾ ದೂರಾಗಿ ಅಲೌಕಿಕತೆಯ ಚೌಕಟ್ಟು ಅವನ ಜೀವನವನ್ನು ಆವರಿಸಿತು. ಅವನು ಲೋಕದಿಂದ ಪರಿಪೂರ್ಣ ಬೇರಾಗಿಲ್ಲ. ಅಂತರಂಗಿಕವಾಗಿ ಒಂದು ಮಹೋನ್ನತ ಸ್ಥಿತಿಯನ್ನು ಮುಟ್ಟುವ ಪ್ರಯತ್ನವನ್ನು ಮಾಡುತ್ತಲೇ, ಭೌತಿಕವಾಗಿ ಲೋಕಕ್ಕೆ ತನ್ನ ಸಂಗೀತವನ್ನು ತೆರೆದಿಟ್ಟ.

ಮದರಾಸು ಮೊದಲಾದ ಕಡೆ ಅವನ ಸಂಗೀತ ಕಛೇರಿಗಳು ಏರ್ಪಾಟಾದವು. ಅರಮನೆಯಲ್ಲಿ ಪ್ರಭುಗಳು ಅವನ ಸಂಗೀತವನ್ನು ಕೇಳಿ ತಣಿದರು. ಲಕ್ಷ್ಮಣ ಲೋಕಪ್ರಸಿದ್ಧಿಯಾದ, ಅಭಿಮಾನದ ಮಹಾಪೂರವನ್ನು ಗಳಿಸಿದ. ಲೋಕ ವ್ಯಕ್ತಿಯಾಗಿ ಆತ ಮಾಡಬೇಕಾದ ಸಾಧನೆಯನ್ನು ಮಾಡಿ ಮುಗಿಸಿದ್ದ. ಇನ್ನೂ ಕಲಾಪ್ರಪಂಚವನ್ನು ಬೆಳಗಲು ತನ್ನನ್ನೇ ದೀವಿಗೆಯನ್ನಾಗಿ ಮಾಡಿಕೊಂಡು ಉರಿಸುವುದು ಬಾಕಿಯಿತ್ತು, ಎಲ್ಲಕ್ಕಿಂತಲೂ ಹೆಚ್ಚಾಗಿ ಅವನ ಜೀವ ಸಮಾನವಾದ ಸಂಧ್ಯಾರಾಗಕ್ಕೆ ಸಾರ್ಥಕತೆಯನ್ನು ಒದಗಿಸಬೇಕಿತ್ತು. ಪೂರ್ವಿರಾಗ ಸಹಜವಾಗಿ, ತನ್ನೊಳಗಿಂದ ಹುಟ್ಟಿಬರಬೇಕೆಂಬುದು ಅವನ ಬಯಕೆಯಾಗಿತ್ತು. ತನ್ನಿಡೀ ಜೀವನವನ್ನು 'ಸಂಧ್ಯಾರಾಗ'ದ ಸಾಕ್ಷಾತ್ಕಾರಕ್ಕೆ ಮೀಸಲಾಗಿಟ್ಟ. ಅವನೊಳಗಿನ ನುಡಿಕಾರನ ಅಪ್ಪಣೆಗೆ ಆ ರಾಗ ಪ್ರತೀಕ್ಷೆ ಮಾಡುತ್ತಿತ್ತು.

**"ಒಂದು ದಿವಸ ಅದನ್ನೂ ಹಾಡುತ್ತೇನೆ. ಸದ್ಯಕ್ಕೆ ಪೂರ್ವಿಯೇತಕ್ಕೋ ಬಾಯಲ್ಲಿ ನುಡಿಯುವುದಿಲ್ಲ. ಒಂದು ದಿನ ಅದು ನನ್ನ ಹೃದಯವನ್ನು ಭೇಧಿಸಿಕೊಂಡು ಬರುತ್ತದೆ"**[೨].

---

೧. 'ಸಂಧ್ಯಾರಾಗ' – ಅ.ನ.ಕೃ. ಪು. ಸಂ. ೧೩೪

೨. ಸಂಧ್ಯಾರಾಗ – ಅ.ನ.ಕೃ. ಪು. ಸಂ. ೧೬೨

ಅವನಾಡುವ ಈ ಮಾತುಗಳು, ಪೂರ್ವಿ ಅವನ ಹೃದಯ ಮಂದಿರದಲ್ಲಿ ಸ್ಥಿರವಾಗಿ ನಿಂತಿರುವುದನ್ನೂ, ಅದರ ರಸೋಜ್ವಲ ಘಳಿಗೆಯ ನಿರೀಕ್ಷೆಯನ್ನೂ ಮಾರ್ತಗೊಳಿಸಲು ಪ್ರಯತ್ನಿಸುತ್ತದೆ.

ಲಕ್ಷ್ಮಣ ತನ್ನ ಕಲೆಯಲ್ಲಿ ಲೀನವಾಗುವುದಂತೂ ಎಷ್ಟು ದುರಂತಮಯವೋ, ಅಷ್ಟೇ ಭವ್ಯವಾದುದು. ಗೋಪಾಲ ಏರ್ಪಡಿಸುವ ಲಕ್ಷ್ಮಣನ ಸಂಗೀತ ಕಛೇರಿ ಈ ಅಪೂರ್ವ ತ್ಯಾಗಕ್ಕೆ ವೇದಿಕೆ. ಇದು ಲಕ್ಷ್ಮಣನ ಕಡೆಯ ಸಂಗೀತ ಕಛೇರಿ. ಲಕ್ಷ್ಮಣನ ಜೀವನ ಅಂತ್ಯ ಕಾಣುವುದರೊಂದಿಗೆ, ಆತ ತನ್ನ ಕಲೆಯಲ್ಲಿ ಆದರ್ಶಮಯ ಪೂರ್ಣಸ್ಥಿತಿಯನ್ನು ತಲುಪುತ್ತಾನೆ.

ಅಂದು ಅವನ ಮನೋಭಿತ್ತಿಯ ಮೇಲೆ ಜಯಾ ಮೂಡುತ್ತಾಳೆ. ಅವನ ಮೂರೂ ಜನ ಗುರುಗಳೂ ನಿಂತು ಅವನನ್ನು ಹರಸುತ್ತಾರೆ. ಆನಂದ ಭೈರವಿಯನ್ನು ಹಾಡುತ್ತಿದ್ದಂತೆಯೇ ಲಕ್ಷ್ಮಣನಲ್ಲಿ ಒಂದು ಬಗೆಯ ಶಕ್ತಿ – ಆವೇಶಗಳು ಮೂಡುತ್ತವೆ. ಅಶ್ರುಧಾರೆಯಾಗಿ ಹರಿಯುತ್ತದೆ. ಅಂದೇ ಅವನ ಪೂರ್ವಿ ಅವನ ಹೃದಯವನ್ನು ಭೇದಿಸಿಕೊಂಡು ಬರುವುದು. ಸಂಧ್ಯಾರಾಗದಲ್ಲಿ ಲಕ್ಷ್ಮಣ ತನ್ನ ಆತ್ಮವನ್ನು ಲೀನಗೊಳಿಸುತ್ತಾನೆ.

ಈ ಸಂದರ್ಭದಲ್ಲಿ ಅವನ ಹೃದಯದಿಂದ ಹೊರಬರುವುದು 'ಜಯಾ' ಎಂಬ ಎರಡಕ್ಷರ; ಅದೇ ರೀತಿ ಕೃತಿಯ ಕಡೆಯಲ್ಲಿ, ಸಂಧ್ಯಾರಾಗ ಎಲ್ಲರಿಗೂ ಕೇಳಿಸಿತ್ತು, ಉದಯರಾಗ ಕೇಳಿಸಿದುದು ಲಕ್ಷ್ಮಣನೊಬ್ಬನಿಗೆ ಎಂಬ ಮಾತುಗಳು ಬರುತ್ತವೆ.

ಕಲೆ–ಕಲಾವಿದ ಇಬ್ಬರೂ ಇಲ್ಲಿ ಒಂದಾಗಿದ್ದಾರೆ. ತನ್ನ ಕಲೆಗಾಗಿ ಲಕ್ಷ್ಮಣ ತನ್ನ ಬದುಕನ್ನೇ ಧಾರೆಯೆರೆದ. ಇದರಿಂದ ಅವನು ಪಡೆದ ಪ್ರತಿಫಲ – ಕಲಾದೇವತೆಯ ಸಾಕ್ಷಾತ್ಕಾರ. ಲೋಕಕ್ಕೆ ದೊರೆತದ್ದು ಅವನ ಪೂರ್ವಿಕಲ್ಯಾಣಿರಾಗ. ಸಂಧ್ಯಾರಾಗದಲ್ಲಿ ವ್ಯಕ್ತಿಯಾಗಿ ಮರೆಯಾದ, ಆದರೆ ಉದಯರಾಗದಲ್ಲಿ ಕಲಾವಿದನಾಗಿ ಲಕ್ಷ್ಮಣ ಚಿರಾಯುವಾದ.

ಲಕ್ಷ್ಮಣನ ಪಾತ್ರಕ್ಕೆ ಇಲ್ಲಿ ಎರಡು ವ್ಯಕ್ತಿತ್ವಗಳಿವೆ. ಒಂದು ಕಲಾವಿದನಾಗಿ ಹಾಗೂ ಇನ್ನೊಂದು, ವ್ಯಕ್ತಿಯಾಗಿ. ಕಲಾವಿದನಾಗಿ ಲಕ್ಷ್ಮಣ ಸಾಧಿಸಿದುದು ಅದ್ಭುತ – ಅನನ್ಯ. ತನ್ನ ಸಂಗೀತದಲ್ಲಿ ಅವನು ಬ್ರಹ್ಮಾನಂದದ ಸ್ಥಿತಿಯನ್ನೇ ತಲುಪಿದ್ದಾನೆ. ಲೇಖಕರು ಮುನ್ನುಡಿಯಲ್ಲಿ ಹೇಳಿರುವಂತೆ ಪೂರ್ಣ ಜೀವನದ ಆದರ್ಶದ ಸ್ಥಿತಿ, ಪರಮಾವಧಿಯ ಹಂತವನ್ನು ಕಲಾಪ್ರಪಂಚದಲ್ಲಿ ಲಕ್ಷ್ಮಣ ಸೊಗಸಾಗಿ ಮುಟ್ಟಿದ್ದಾನೆ. ಆದರೆ ಅವನ ವ್ಯಕ್ತಿ ಜೀವನ ಇಲ್ಲಿ ಈ ಆದರ್ಶದ ಸ್ಥಿತಿಯನ್ನು ತಲುಪಿಲ್ಲ, ಮಾತ್ರವಲ್ಲ ಅದರ ಹತ್ತಿರವೂ ಸುಳಿದಿಲ್ಲ ಇದಕ್ಕೆ ಜಯಾಳ ಮರಣವೇ ಬಲವಾದ ನಿದರ್ಶನ. ಅವನು ಮೃದುಹೃದಯಿ, ಒಳ್ಳೆಯವನು ಎಲ್ಲವೂ ಸರಿ, ಆದರೆ ಅವನ ಈ ಒಳ್ಳೆಯತನದಿಂದ ಯಾರಿಗೂ ಯಾವ ಪ್ರಯೋಜನವೂ ಆಗಿಲ್ಲ. ಲಕ್ಷ್ಮಣನ ಪಾತ್ರವನ್ನು ಕಲಾವಿದನಾಗಿ ಮೆಚ್ಚಬಹುದೇ ಹೊರತು ವ್ಯಕ್ತಿಯಾಗಿ ಅಲ್ಲ.

ಕಾದಂಬರಿಯಲ್ಲಿ ಲಕ್ಷ್ಮಣನಷ್ಟೇ ಪ್ರಾಮುಖ್ಯತೆ ಪಡೆದ ಪಾತ್ರವೆಂದರೆ ರಾಮಚಂದ್ರ. ಆದರೆ ಲಕ್ಷ್ಮಣನ ಪಾತ್ರಕ್ಕೆ ಸಂಪೂರ್ಣ ವಿರುದ್ಧವಾದ ಪಾತ್ರವಿದು. ಲಕ್ಷ್ಮಣ ಒಂದು ತುದಿಯಾದರೆ ರಾಮಚಂದ್ರ ಇನ್ನೊಂದು ತುದಿ. ಲಕ್ಷ್ಮಣನದ್ದು ಊರ್ಧ್ವಮುಖಿ ಪ್ರವೃತ್ತಿ, ರಾಮಚಂದ್ರನದ್ದು ಅಧೋಮುಖಿ. ಲಕ್ಷ್ಮಣ ಹಾಗೂ ರಾಮಚಂದ್ರನ ಸ್ವಭಾವಗಳಲ್ಲಿ ಅಗಾಧ ಅಂತರವಿದೆ. ಕೃತಿಯಲ್ಲಿ ಇರುವ ಏಕೈಕ ಕೆಟ್ಟ ಪಾತ್ರವೆಂದರೆ ರಾಮಚಂದ್ರ. ಆರಂಭದಿಂದ ಅಂತ್ಯದವರೆಗೂ ಈ ಪಾತ್ರ ಕಿರಿಕಿರಿ – ಮುಜುಗರವನ್ನಷ್ಟೆ ಉಂಟುಮಾಡುವುದು. ರಾಮಚಂದ್ರನ ದರ್ಪ – ಅಹಂಕಾರಗಳು ಅವನ ಪ್ರತಿಯೊಂದು ವರ್ತನೆಯಲ್ಲೂ ಎದ್ದುಕಾಣುತ್ತದೆ.

ಕೃತಿಯು ರಾಮಚಂದ್ರ ಹಾಗೂ ಲಕ್ಷ್ಮಣನ ಪಾತ್ರಗಳನ್ನು ತೌಲನಿಕವಾಗಿ ನೋಡುತ್ತಾ ಸಾಗುತ್ತದೆ. ಹೀಗಾಗಿ ರಾಮಚಂದ್ರ –ಲಕ್ಷ್ಮಣ ಎರಡೂ ಪಾತ್ರಗಳೂ ಕೃತಿಯ ಪ್ರಧಾನ ಪಾತ್ರಗಳೆನಿಸುತ್ತವೆ. ರಾಮಚಂದ್ರ – ಲಕ್ಷ್ಮಣ ಇಬ್ಬರೂ ಬೇರೆ – ಬೇರೆ ತಾಯಿಯ ಮಕ್ಕಳಾದರೂ, ಅಣ್ಣ – ತಮ್ಮಂದಿರಂತೆ ಇರಲೆಂದು ರಾಮಚಂದ್ರ – ಲಕ್ಷ್ಮಣ ಎಂದು ನಾಮಕರಣ ಮಾಡಲಾಗುತ್ತದೆ. ಆದರೆ ಇಬ್ಬರದೂ ವಿರುದ್ಧ ದಿಕ್ಕುಗಳಾಗುವುದು ವಿಚಿತ್ರ.

ಚಿಕ್ಕಂದಿನಿಂದಲೂ ರಾಮಚಂದ್ರನ ಸ್ವಭಾವ ಉಳಿದೆಲ್ಲರಿಗಿಂತ ಭಿನ್ನ. ಅಹಂಕಾರ, ಉದ್ಧಟತನಗಳು ಆ ವಯಸ್ಸಿನಿಂದಲೇ ಅವನಲ್ಲಿ ಬೆಳೆದು ಬಂದಿರುತ್ತದೆ. ವಾಸ್ತವವಾಗಿ ಲಕ್ಷ್ಮಣ, ಹಾಗೂ ರಾಮಚಂದ್ರನಿಗೆ ದೊರೆತ ವಾತಾವರಣ ಒಂದೇ ರೀತಿಯದು. ಉತ್ತಮ ಸಂಸ್ಕಾರಯುತ ಹೃದಯ ತುಂಬುವ ಹಿನ್ನಲೆ. ಆದರೂ ಇಬ್ಬರ ನಡತೆ – ಸ್ವಭಾವಗಳು ವಿರುದ್ಧವಾದ ಹಾದಿ ಹಿಡಿದವು. ಸಂಧ್ಯಾರಾಗ ಕೃತಿಯಲ್ಲಿ ಒಂದು ಕಪ್ಪು ಚುಕ್ಕೆಯಾದ ರಾಮಚಂದ್ರ. ದರ್ಪ, ಅಹಂಕಾರ, ದುರ್ನಡತೆಗಳಿಗೆ ಇನ್ನೊಂದು ಹೆಸರೇ ರಾಮಚಂದ್ರ ಎನ್ನಬಹುದು. ಓದಿನಲ್ಲೇನೋ ರಾಮಚಂದ್ರ ಸದಾ ಮುಂದೆ. ಸಂಗಪ್ರಿಯ; ಸದಾ ಅವನನ್ನು ಹೊಗಳುತ್ತಿರುವ ಜನರು ಅವನ ಸುತ್ತ–ಮುತ್ತ ಇರಬೇಕು. ಇತರರನ್ನು ಆಡಿಕೊಂಡು ಅಪಹಾಸ್ಯ ಮಾಡುವುದರಲ್ಲೇ ಅವನಿಗೆ ಸುಖ. ಯಾರ ಬಗ್ಗೆಯೂ ಅವನಿಗೆ ಪ್ರೇಮವಿಲ್ಲ, ವಿದ್ಯೆಗೆ ತಕ್ಕ ವಿನಯವಿಲ್ಲ. ಹೀಗೆ ಅವನ ದುರ್ನಡತೆಗಳ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಕೃತಿಯ ಒಳಗೇ ಅವನ ಪಾತ್ರದ ಬಗ್ಗೆ ತಾತ್ಸಾರ – ಅಲಕ್ಷ್ಯಗಳು, ವ್ಯಾಖ್ಯೆ ಬೇಡವೆನ್ನುವಷ್ಟು ಸ್ಪಷ್ಟವಾಗಿ ಬಂದಿವೆ. ರಾಮಚಂದ್ರ ಎಷ್ಟೆಷ್ಟು ವಿದ್ಯೆಯನ್ನು ಸಂಪಾದಿಸಿ, ಉನ್ನತ ಹುದ್ದೆಗೆ ಏರುತ್ತಾನೋ, ಅಷ್ಟಷ್ಟು ಅವನ ವ್ಯಕ್ತಿತ್ವ ಕೆಳಗಿಳಿಯುತ್ತಾ ಹೋಗುತ್ತದೆ. ಲಕ್ಷ್ಮಣನ ವ್ಯಕ್ತಿತ್ವ ಆದರ್ಶ ಕಲಾಜೀವನದ ಪೂರ್ಣತೆಯತ್ತ ಸಾಗಿದರೆ, ರಾಮಚಂದ್ರನ ವ್ಯಕ್ತಿತ್ವ ಅಧಃಪತನ ಪರಮಾವಧಿಯತ್ತ ಸಾಗುತ್ತದೆ.

ಹೆತ್ತ ತಂದೆ – ತಾಯಿಯರ ಬಗ್ಗೆಯೇ ವಾತ್ಸಲ್ಯವಿರದ ರಾಮುವಿನ ಹೃದಯದಲ್ಲಿ ಅಂತಃಕರಣಕ್ಕೆ ಅವಕಾಶವಿಲ್ಲ. ಮಾನವೀಯತೆಯೇ ಇಲ್ಲದ ಕಲ್ಲು ಶಿಲೆ ರಾಮಚಂದ್ರ. ಪಾತ್ರದ ಹೆಸರಿಗೂ, ಅವನ ಗುಣ – ನಡತೆಗಳಿಗೂ ಸ್ವಲ್ಪವಾದರೂ ಹೋಲಿಕೆಯಿಲ್ಲ.

ರಾಮಚಂದ್ರ ಎಷ್ಟೇ ವಿದ್ಯಾವಂತನಾದರೂ ಹೆಂಡತಿಯನ್ನು ಹೊಡೆದು – ಬಡಿದು ಮಾಡುವಂತಹ ಕೀಳು ಮನಸ್ಥಿತಿ ಅವನದು. ಹೆಂಡತಿಯ ಸರಳ ಮನಸ್ಸಿನಲ್ಲಿ ಮೇಲು–ಕೀಳೆಂಬ ಇಲ್ಲ ಸಲ್ಲದ ಭಾವನೆಗಳನ್ನು

ಚಿತ್ತಿ ಅವಳನ್ನು ತನ್ನದೇ ಪಡಿಯಚ್ಚಿನಂತೆ ಮಾಡುತ್ತಾನೆ. ಹೆಂಡತಿ ಪದ್ಮಳ ಪಾತ್ರಕ್ಕಾದರೋ ಸ್ವತಂತ್ರ ಅಸ್ತಿತ್ವವೇ ಇಲ್ಲ. ಗಂಡ ಹೇಳಿದಂತೆ ಮಾಡುವುದಷ್ಟೇ ಅವಳ ಕೆಲಸ. ಈ ರಾಮಚಂದ್ರನಂತಹ ವ್ಯಕ್ತಿಯ ದೌರ್ಜನ್ಯಕ್ಕೆ ಸಿಲುಕಿದ ವ್ಯಕ್ತಿಗಳೆಷ್ಟೋ?

ಅವನು ತನ್ನ ಹುದ್ದೆಯಲ್ಲಿ ಮೇಲೇರುವುದೂ ಇತರರ ಕಾಲು ಹಿಡಿದು, ತನ್ನ ಸ್ವಂತ ಪರಿಶ್ರಮದಿಂದಲ್ಲ. ಲಕ್ಷ್ಮಣನ ಸಾಧನೆಯ ಮಾರ್ಗ ಎಷ್ಟು ಸತ್ವಯುತವಾಗಿದೆಯೋ, ರಾಮಚಂದ್ರನ ಮೇಲೇರುವ ಮಾರ್ಗ ಅಷ್ಟೇ ವಕ್ರವಾಗಿದೆ. ರಾಮಚಂದ್ರನ ದಬ್ಬಾಳಿಕೆ ಮೇರೆ ಮೀರುವುದು ಜಯಾಳ ಸಾವಿಗೆ ಕಾರಣವಾಗುತ್ತದೆ, ಲಕ್ಷ್ಮಣನೂ ಹುಚ್ಚನಂತಾಗುತ್ತಾನೆ. ತನ್ನಿಂದ ಒಂದು ಜೀವ ಬಲಿಯಾದರೂ, ಒಂದು ಸಂಸಾರವೇ ಹಾಳಾದರೂ ರಾಮಚಂದ್ರನಲ್ಲಿ ಪಶ್ಚಾತ್ತಾಪದ ಭಾವನೆ ಎಳ್ಳಷ್ಟೂ ಗೋಚರಿಸುವುದಿಲ್ಲ. ಬದಲಾಗಿ 'ಶನಿ ತೊಲಗಿತು' ಎಂದು ಸಮಾಧಾನ ಪಡುತ್ತಾನೆ. ಈ ಸನ್ನಿವೇಶದಲ್ಲಂತೂ ರಾಮಚಂದ್ರನಿಗೆ ಹೃದಯವೇ ಇಲ್ಲವೇನೋ ಎನಿಸಿಬಿಡುತ್ತದೆ. ಮನುಷ್ಯನೇ ಅಲ್ಲದ ಒಂದು ಕಲ್ಲು ಶಿಲೆ ರಾಮಚಂದ್ರ.

ಆಧುನಿಕತೆಯ ವ್ಯಾಮೋಹಕ್ಕೆ ಒಳಗಾಗಿ ಬದಲಾಗುವ ಪಾತ್ರವಾಗಿ ಪದ್ಮಳಿದ್ದಾಳೆ. ಇಂಗ್ಲೀಷ್ ಕಲಿಕೆ, ಕಾಲಿಗೆ ಹಿಮ್ಮಡಿಯೆತ್ತರದ ಮೋಜುಗಳು, ಕಿವಿಗೆ Love -Locks ಸ್ತ್ರೀಯರ ಕ್ಲಬ್ಬು – ಹೀಗೆ ಆಧುನಿಕತೆಯ ಪ್ರವೇಶದ ಪರಿಣಾಮಗಳು, ಪದ್ಮಳ ಪಾತ್ರದ ಮೂಲಕ ಕಾದಂಬರಿಯಲ್ಲಿ ಸೂಕ್ಷ್ಮವಾಗಿ ಪ್ರಸ್ತಾಪವಾಗಿದೆ. ಎಲ್ಲಕ್ಕೂ ಒಂದು ಅಂತ್ಯವಿರುವಂತೆ ರಾಮಚಂದ್ರನ ದರ್ಪ – ಅಹಂಕಾರಗಳಿಗೂ ತೆರೆ ಬೀಳುತ್ತದೆ. ಅವನ ವೃತ್ತಿ ಜೀವನದ ಸೋಲು – ಅವಮಾನ ಅವನನ್ನು ಕಂಗೆಡಿಸುತ್ತವೆ. ಸಾಲದ್ದಕ್ಕೆ ವೆಂಕಟೇಶನ ಪತ್ರಿಕೆಯ ಮೂಲಕವೂ ಅವನ ಮಾನ ಮೂರಾಬಟ್ಟೆಯಾಗುತ್ತದೆ. ಹೇಗೋ ಉಳಿದುಕೊಂಡು ರಾಮಚಂದ್ರ ಪಶ್ಚಾತ್ತಾಪದಿಂದ ಹಗುರಾಗುತ್ತಾನೆ. ಆರಂಭದಿಂದಲೂ ಅವನ ರೂಕ್ಷತೆಯನ್ನು ವೈಭವೀಕರಿಸುತ್ತಾ ಬಂದ ಕಾದಂಬರಿ, ಇಲ್ಲಿ ಧಾರಾಳವಾಗಿ ಅವನಿಗೆ ಕ್ಷಮೆಯನ್ನಿತ್ತಿದೆ. ತನ್ನೆಲ್ಲಾ ದುರ್ನಡತೆಗಳಿಗೂ ರಾಮಚಂದ್ರ ಬಹಳ ಬೇಗ ಕ್ಷಮೆಯನ್ನು ಪಡೆಯುತ್ತಾನೆ. ತುಂಬಾ ಸುಲಭವಾಗಿ ಉಳಿದು ಪಾರಾಗುತ್ತಾನೆ.

ರಾಮಚಂದ್ರನ ಪಾತ್ರವನ್ನು ನೋಡಿದಾಗ, ಅದು ತೀರಾ ಅವಾಸ್ತವಿಕವೆಂಬುದು, ಸ್ಪಷ್ಟವಾಗಿ ತಿಳಿದು ಬರುವ ಅಂಶ. ರಾಮಚಂದ್ರನ ಪಾತ್ರ ಸ್ವತಂತ್ರವಾಗಿ, ಸಹಜವಾಗಿ ಬೆಳೆದು ಬಂದಿಲ್ಲ'; ಉದ್ದೇಶಪೂರ್ವಕವಾಗಿ ಸೃಷ್ಟಿಯಾಗಿದೆ. ಔಚಿತ್ಯದ ಮಿತಿಯನ್ನೇ ಮೀರಿದಂತೆ ಅವನ ಪಾತ್ರವಿದೆ. ಇಂತಹ ವ್ಯಕ್ತಿಯ ಇರುವಿಕೆ ಸಾಧ್ಯವೇ ಎಂದು ಯೋಚಿಸುವಂತಾಗುತ್ತದೆ. ವಾಸ್ತವಿಕತೆಯ ಕೊರತೆ ಈ ಪಾತ್ರದಲ್ಲಿ ಎದ್ದುಕಾಣುತ್ತದೆ. ಅವನ ಪಾತ್ರಚಿತ್ರಣ ಮೂಡಿಸುವ ಜಿಗುಪ್ಸೆ, ಮುಜುಗರದ ಭಾವನೆಗಳಿಂದಾಗಿ, ಅವನು ಪಶ್ಚಾತ್ತಾಪಗೊಂಡಾಗಲೂ, ಅವನ ಬಗ್ಗೆ ಯಾವುದೇ ಅನುಕಂಪ ಉಂಟಾಗುವುದಿಲ್ಲ. ಲಕ್ಷ್ಮಣನ ಪಾತ್ರಕ್ಕೆ ವಿರುದ್ಧವಾಗಿ ಇನ್ನೊಂದು ಪಾತ್ರ ಇರಲೇಬೇಕೆಂಬ ಭಾವನೆ ಈ ಪಾತ್ರಸೃಷ್ಟಿಗೆ ಕಾರಣವಿರಬಹುದೇನೋ? ಇಲ್ಲಿ ರಾಮಚಂದ್ರ ಒಳ್ಳೆಯ ಖಳನಾಯಕನಾಗಲು ಸಾಧ್ಯವಾಗಿಲ್ಲ. ಅವನ ಪಾತ್ರ ಅಸಹಜವೆಂಬುದರಲ್ಲಿ ಸಂಶಯವಿಲ್ಲ.

ಕಲಾವಿದರ ಏಳಿಗೆ – ಅಭಿವೃದ್ಧಿಗಳಿಗೆ ಹೆಣ್ಣು ಒಂದು ಪ್ರೇರಕ ಶಕ್ತಿಯಾಗಬಲ್ಲಳು. ಈ ಪ್ರೇರಣೆಯಿಂದ ಅವನ ಬಾಳು ಪೂರ್ಣವಾಗಬಲ್ಲದು. ಇಂತಹ ಸ್ಫೂರ್ತಿಯನ್ನು ನೀಡಿ, ಲಕ್ಷ್ಮಣನ ಬಾಳನ್ನು ಬೆಳಗಿಸಿದವಳು 'ಜಯ'. ಮಹಿಳಾ ಸಮಾಜಕ್ಕೆ ಒಂದು ಆದರ್ಶ ಪಾತ್ರವಾಗಿದ್ದಾಳೆ ಎನ್ನಬಹುದು. ಅವಿಭಕ್ತ ಕುಟುಂಬವನ್ನು ಯಶಸ್ವಿಯಾಗಿ ಕಾಪಾಡಬಲ್ಲ ಏಕಸೂತ್ರತೆ 'ಜಯಾ'ಳಂತಂಹ ವ್ಯಕ್ತಿಗಳಿಗೆ ಸಾಧ್ಯ. ಆಕೆ ಲಕ್ಷ್ಮಣನ ಬಾಳನ್ನು ಕಟ್ಟುವ ರೀತಿ ಅಪೂರ್ವವಾದುದು. ಜಯ ಇಲ್ಲದಿದ್ದರೆ ಲಕ್ಷ್ಮಣ ಏನಾಗುತ್ತಿದ್ದನೋ. ಅವನು ಸಾಧಿಸುವುದೆಲ್ಲವೂ, ಜಯಾಳ ಪಾದಾರವಿಂದಕ್ಕೆ ಅರ್ಪಣೆಯಾಗಬೇಕು.

'ಜಯ'ಳಿಗೂ ಅಲ್ಪ–ಸ್ವಲ್ಪ ಸಂಗೀತ ಬರುತ್ತಿತ್ತು. ತಾನು ಓದಿದ ಹುಡುಗಿಯಾದರೂ, ಲಕ್ಷ್ಮಣನ ಸಂಗೀತಕ್ಕೆ ಒಲಿದು, ಹಟಹಿಡಿದು ಅವನನ್ನೇ ಮದುವೆಯಾಗುತ್ತಾಳೆ. ಅವಳ ಆಗಮನದಿಂದ ಲಕ್ಷ್ಮಣನ ಬದುಕು ಹಸುರಾಗುತ್ತದೆ. ತನ್ನ ಜೀವಿತದ ಕಾಲದಲ್ಲೂ, ಮರಣದ ನಂತರವೂ 'ಜಯ' ಲಕ್ಷ್ಮಣನ ಬಾಳನ್ನು ಹಸನುಗೊಳಿಸುತ್ತಾಳೆ. ಇನ್ನೊಬ್ಬರ ಜೀವನಕ್ಕಾಗಿ, ಒಳಿತಿಗಾಗಿ ತನ್ನನ್ನೇ ತೇದುಕೊಳ್ಳುತ್ತಾಳೆ. ಆದರೆ ತನ್ನ ಜೀವನದ ಆರಂಭದಿಂದ ಕೊನೆಯವರೆಗೂ ಅವಳು ಕಷ್ಟವನ್ನಲ್ಲದೇ ಬೇರೇನನ್ನೂ ಅನುಭವಿಸುವುದಿಲ್ಲ. ಜಯಾಳ ಪಾತ್ರಕ್ಕೆ ಒಂದು ರೀತಿಯಲ್ಲಿ ಅನ್ಯಾಯವೇ ಆಗಿದೆ ಎನ್ನಬಹುದು. ಮೀನಾಕ್ಷಮ್ಮನವರಿಗೆ ತಕ್ಕ ಸೊಸೆ, ಆದರ್ಶ ಗೃಹಿಣಿ 'ಜಯಾ' ಓದುಗರ ಅನುಕಂಪಕ್ಕೆ ಪಕ್ಕಾಗಿದ್ದಾಳೆ.

ಮನೆಯ ಆಡಳಿತವೆಲ್ಲವೂ ರಾಮಚಂದ್ರನ ಸರ್ವಾಧಿಕಾರಕ್ಕೆ ಒಳಪಟ್ಟಾಗಲಂತೂ, ಜಯಾ ಮನೆಗಾಗಿ ಒಂದೇ ಸಮನೆ ದುಡಿಯುತ್ತಾಳೆ. ಆದರೆ ಜಯಾ ಎಷ್ಟು ಉದಾತ್ತಳೆಂದರೆ, ಗಂಡನ ಮೌನ ವರ್ತನೆಯ ಬಗ್ಗೆ ಆಕ್ಷೇಪವನ್ನೇ ವ್ಯಕ್ತಪಡಿಸುವುದಿಲ್ಲ.

**"ಜಯನಿಗೆ ದುಡಿತದ ಶ್ರಮ ಗೊತ್ತಾಗುತ್ತಿರಲಿಲ್ಲ. ತನ್ನ ಮನೆ, ತಾನು ದುಡಿಯದೆ ಮತ್ತೆ ಯಾರು ದುಡಿಯಬೇಕು ಎನ್ನುವ ಭಾವನೆಯಿಂದ ಎಷ್ಟು ಕೆಲಸ ಮೇಲೆ ಬಿದ್ದರೂ ಸಂತೋಷದಿಂದ ನಿರ್ವಹಿಸುತ್ತಿದ್ದಳು. ಆದರೆ ಭಾವನವರ ಬಿರುನುಡಿಗಳು ಅವಳನ್ನು ಹಣ್ಣು – ಹಣ್ಣು ಮಾಡಿಬಿಡುತ್ತಿದ್ದವು"**[೧].

ಲಕ್ಷ್ಮಣನಿಗೆ ತನ್ನ ಹೆಂಡತಿಯ ಬಗ್ಗೆ ಮರುಕವಿದೆ, ಆದರೆ ಅಣ್ಣನಿಗೆ ಎದುರಾಡುವ ಶಕ್ತಿಯಿಲ್ಲ. ಪರಿಣಾಮ, ಗರ್ಭಿಣಿ ಜಯಾ ಕೆಲಸದ ಹೊರೆಯನ್ನು ತಾಳಲಾರದೆ ಸಾವನ್ನಪ್ಪುತ್ತಾಳೆ. ಅವಳ ಸಾವು ಕೃತಿಯಲ್ಲಿ ಅನಿರೀಕ್ಷಿತ ಸನ್ನಿವೇಶ. ಜಯಾಳ ಪಾತ್ರ ಸಾವಿನಲ್ಲೇ ಅಂತ್ಯಗೊಳ್ಳಬೇಕಿತ್ತೆ ಎಂಬ ಪ್ರಶ್ನೆ ಮೂಡುವುದು ಸಹಜ. ಆ ಪಾತ್ರಪೋಷಣೆ ಕೃತಿಯಲ್ಲಿ ಸರಿಯಾದ ರೀತಿಯಲ್ಲಿ ಆದಂತಿಲ್ಲ. ಜಯಾ ಇನ್ನಷ್ಟು ಕಾಲ ಓದುಗರ ಕಣ್ಣಮುಂದೆ ಇರಬಹುದಿತ್ತು. ರೆಪ್ಪೆ ಬಡಿಯುವಷ್ಟರಲ್ಲಿ ಅವಳು ಮರೆಯಾಗಿ ಬಿಡುತ್ತಾಳೆ. ಆದರೆ ನಮ್ಮ ಮನಸ್ಸಿನಿಂದಲ್ಲ. ಅದೇ ರೀತಿ ಕೃತಿಯಲ್ಲಿಯೂ

---

೧. 'ಸಂಧ್ಯಾರಾಗ' – ಅ.ನ.ಕೃ. ಪು.ಸಂ. ೧೧೩.

ಅವಳು ಪೂರ್ಣವಾಗಿ ಮರೆಯಾಗಿಲ್ಲ. ಲಕ್ಷ್ಮಣನ ಪ್ರೇರಕ ಶಕ್ತಿಯಾಗಿ, ಕಲಾದೇವತೆಯಾಗಿ ಅವಳಿನ್ನೂ ಜೀವಂತವಾಗಿದ್ದಾಳೆ.

ಜಯಾಳ ಮರಣದಿಂದ ಹುಚ್ಚನಾಗಿ ಸಂಗೀತವನ್ನು ಮರೆತಿದ್ದ ಲಕ್ಷ್ಮಣನನ್ನು ಮತ್ತೆ ಜಾಗೃತಗೊಳಿಸುವುದೂ, ಸಂಗೀತದೆಡೆಗೆ ಮರಳುವಂತೆ ಮಾಡುವುದೂ ಸ್ವತಃ ಜಯಾಳೆ. ಆದರೆ ಒಂದು ಸ್ಮೃತಿಯಾಗಿ "ನೀವು ಕರ್ತವ್ಯ ಭ್ರಷ್ಟರಾದಿರಿ, ಗುರಿಯನ್ನು ಮರೆತಿರಿ" – ಎಂದು ಎಚ್ಚರವನ್ನು ಮೂಡಿಸಿ, 'ನಾನು ನಿಮ್ಮೊಳಗೇ ಇದ್ದೀನಿ" ಎಂಬ ಆತ್ಮವಿಶ್ವಾಸವನ್ನು ತುಂಬುತ್ತಾಳೆ. ಅನಂತರದ ಹಂತದಲ್ಲಿ ಜಯ ಕಲಾದೇವತೆಯಾಗಿ ಕಂಡುಬರುತ್ತಾಳೆ. ಲಕ್ಷ್ಮಣನಿಗೂ, ತನ್ನ ಕಲೆಯಲ್ಲಿ ಅವಳ ಪಾತ್ರವೇನೆಂಬುದು ತಿಳಿದಿದೆ.

**"ಜಯಾ, ನಾನು ಕಲಿತು ಬಂದಿರುವ ಅಲ್ಪವಿದ್ಯೆಯೆಲ್ಲಾ ನಿನ್ನದು, ನೀನಂದು ನನ್ನನ್ನು ಎಚ್ಚರಿಸದಿದ್ದರೆ ನಾನು ದಿಕ್ಕೆಟ್ಟು ಬೀದಿಯ ಭಿಕಾರಿಯಂತೆ ಅಲೆಯುತ್ತಿದ್ದೆ – ನೀನು ಇರುವೆ – ಚಿರಂಜೀವಿಯಾಗಿರುವೆ"**[೧].

ಲಕ್ಷ್ಮಣನ ಅಂತಿಮ ಕ್ಷಣಗಳಲ್ಲಿ ಜಯಾ ಒಬ್ಬ ಸಂಗೀತ ಶಾರದೆಯಾಗಿ ಪ್ರತ್ಯಕ್ಷಳಾಗುತ್ತಾಳೆ. ಅವನ ಮನೋಭಿತ್ತಿಯ ಮೇಲೆ ಮೊದಲಬಾರಿಗೆ, ಅಂತೆಯೇ ಅಂತಿಮಬಾರಿಗೆ ದರ್ಶನ ನೀಡುತ್ತಾಳೆ. ಲಕ್ಷ್ಮಣನಿಗೆ ತನ್ನ ಪೂರ್ವಿಯ ಸಾರ್ಥಕ್ಯ – ಸಿದ್ಧಿ ದೊರೆಯಲು ಜಯಾ ಸ್ಫೂರ್ತಿ. ಪೂರ್ವೀರಾಗ ಅವನ ಹೃದಯವನ್ನು ಭೇದಿಸಿಕೊಂಡು ಬರುವುದೂ ಅವಳು ಕಲಾದೇವತೆಯಾಗಿ ಅವನನ್ನು ಆವರಿಸಿದಾಗಲೇ.

ಅದೇ ರೀತಿ ಲಕ್ಷ್ಮಣ ತನ್ನ ಕಡೆಯ ಉಸಿರಿನಲ್ಲೂ ಉಚ್ಚರಿಸುವ ಎರಡೇ ಅಕ್ಷರ 'ಜಯಾ' – ಎಂಬುದು.

ಒಬ್ಬ ಸಂಸ್ಕಾರವಂತ ಗೃಹಿಣಿಯಾದ ಜಯಾಳ ಪಾತ್ರ, ವಿಶೇಷ ಶಕ್ತಿಯಾಗಿ, ಶಕ್ತಿ ಶಾರದೆಯಾಗಿ ಬೆಳೆಯುತ್ತದೆ. ಅವಳ ಅನಿರೀಕ್ಷಿತವಾದ ಸಾವು, ಆ ಪಾತ್ರದ ಜೀವಂತಿಕೆಗೆ ಸ್ವಲ್ಪ ತೊಡಕಾಗುವುದೇನೋ ಎಂಬ ಭಾವನೆ ಮೂಡುವುದು ನಿಜ. ಅದಕ್ಕಿಂತಲೂ ಹೆಚ್ಚಿನ ಮಹತ್ವವೂ ಮುಂದೆ ಅವಳಿಗೆ ದೊರಕಿದೆ. ಆದಾಗ್ಯೂ ಜಯಾಳ ಪಾತ್ರ, ಲೇಖಕರ ಜಾಣತನದಿಂದ ಅಂತ್ಯ ಕಂಡಿದೆ ಎಂದು ಹೇಳಲೇಬೇಕು. ಲಕ್ಷ್ಮಣನ ಕಲಾಪ್ರಪಂಚ ಬಹಳ ನಿರಾತಂಕವಾಗಿದೆ. ಅವನ ಕಲಾಭ್ಯಾಸಕ್ಕೆ ಯಾರಿಂದಲೂ – ಯಾವುದರಿಂದಲೂ ಅಡ್ಡಿ – ಆತಂಕಗಳಿಲ್ಲ. ಅಂದಮೇಲೆ ಲಕ್ಷ್ಮಣ ಹೋರಾಡಿ ಗೆಲ್ಲುವುದು ಎಲ್ಲಿ? ಅವನ ಜೀವನದಲ್ಲಿಯೂ ಸಮಸ್ಯೆಗಳು ಬೇಡವೆ? ಸಂಗೀತದಲ್ಲಂತೂ ಅವನಿಗೆ ಯಾವ ಸೆಣಸಾಟ – ಪರಿಶ್ರಮಗಳಿಲ್ಲ. ಹಾಗಾಗಿ ಜಯಾಳ ಮರಣದ ಮೂಲಕವಾದರು ಅವನ ಜೀವನವನ್ನು ಸಂಕೀರ್ಣವನ್ನಾಗಿಸುವುದು, ಅದರಿಂದ ಹೊರಬಂದ ಅವನು ಮತ್ತು ಅವನ ಕಲೆ ಅಮರವಾಗುವುದು – ಇವೆಲ್ಲವೂ ಇಲ್ಲಿ ನಡೆದಿದೆ. ಜಯಾಳ ಅನಪೇಕ್ಷಿತ ಅಂತ್ಯ, ಲಕ್ಷ್ಮಣನ ಅಪೇಕ್ಷಿತ ಕಲಾಸಿದ್ಧಿಗೆ ಸಾಧನವಾಗಿದೆ. ಅದೇನೇ ಆದರೂ 'ಸಂಧ್ಯಾರಾಗ' ಕೃತಿಯನ್ನು ಓದಿದ ಯಾರೇ ಆಗಲಿ, 'ಜಯಾ'ಳನ್ನು ಮರೆಯುವುದು ಸಾಧ್ಯವೇ ಇಲ್ಲ.

---

೧. 'ಸಂಧ್ಯಾರಾಗ' – ಅ.ನ.ಕೃ. ಪು. ಸಂ. ೧೫೭.

'ಕರ್ಮಣ್ಯೇ ವಾಧಿಕಾರಸ್ತೆ ಮಾಫಲೇಶು ಕದಾಚನ' –ಎಂಬ ಗೀತೆಯ ಮಾತು ಹೆಚ್ಚಾಗಿ ಅನ್ವಯಿಸುವುದು ಮೀನಾಕ್ಷಮ್ಮನವರ ಜೀವನಕ್ಕೆ. ಶ್ರೀನಿವಾಸರಾಯರು – ಮೀನಾಕ್ಷಮ್ಮ ಹಾಗೂ ಸಾವಿತ್ರನಮ್ಮನವರ ಅನುರೂಪ ದಾಂಪತ್ಯ ಮೆಚ್ಚುಗೆಗೆ ಪಾತ್ರವಾಗುವಂತದ್ದು. ಈ ಮೂವರ ಪಾತ್ರ ಸೃಷ್ಟಿಯೇ ಅನುಪಮವಾದದ್ದು.

ಹೃದಯವಂತಿಕೆ, ಸಂಸ್ಕಾರ, ವೈಶಾಲ್ಯತೆ –ಇಂತಹ ಉನ್ನತ ಗುಣಗಳೆಲ್ಲವೂ ಈ ಪಾತ್ರಗಳಲ್ಲಿ ಮಧುರವಾಗಿ ಸಮ್ಮಿಲನ ಹೊಂದಿವೆ. ಶ್ರೀನಿವಾಸರಾಯರ ವ್ಯಕ್ತಿತ್ವದ ಪರಿಚಯದೊಂದಿಗೇ ಕಾದಂಬರಿ ಪ್ರಾರಂಭವಾಗುವುದು. ರಾಯರ ಮನಸ್ಸಂತೂ ಔದಾರ್ಯದ ಗಣಿ. ಅವರು ಕೊಡುಗೈ ದೊರೆ. ಅವರ ಮನಸ್ಸು ಕೇವಲ ಅವರ ಹಳ್ಳಿಗೆ ಮಾತ್ರ ಸೀಮಿತವಲ್ಲ ಅದು ವಿಶ್ವವ್ಯಾಪಿ. ನಿರಾಶ್ರಿತರು ಯಾರೇ ಬರಲಿ ಅವರಿಗೆ ರಾಯರ ಮನದಲ್ಲೂ, ಮನೆಯಲ್ಲೂ ಹಾರ್ದಿಕವಾದ ಸ್ವಾಗತವಿದೆ. ಅಂತಹ ಅಪರೂಪದ ಪಾತ್ರ ರಾಯರದ್ದು.

ಅದೇ ರೀತಿ ಘನತೆ – ತೂಕದ ಪಾತ್ರ ಮೀನಾಕ್ಷಮ್ಮನದು. ತನಗೆ ಮಕ್ಕಳಾಗಲಿಲ್ಲವೆಂಬ ಕಾರಣಕ್ಕೆ ತನ್ನ ದೂರದ ಸಂಬಂಧಿ ಸಾವಿತ್ರಿಯನ್ನು ತನ್ನ ಪತಿಗೇ ಎರಡನೇ ಮದುವೆ ಮಾಡಿಸುತ್ತಾರೆ. ಇಂತಹ ವಿಶಾಲ ಮನಸ್ಸು ಎಷ್ಟು ಜನರಿಗೆ ಇರಲು ಸಾಧ್ಯ? ಅಲ್ಲಿಯವರೆಗೂ ಒಬ್ಬ ಆದರ್ಶ ಗೃಹಿಣಿಯಾಗಿ ಕಂಡುಬರುವ ಮೀನಾಕ್ಷಮ್ಮನ ಪಾತ್ರ, ಮುಂದೆ ಆದರ್ಶ ಮಾತೆ, ಆದರ್ಶ ಸವತಿ, ಆದರ್ಶ ಅತ್ತೆ – ಈ ಎಲ್ಲಾ ಮುಖಗಳಲ್ಲಿಯೂ ಗೋಚರಿಸುತ್ತದೆ. ಗೃಹಜೀವನದ ಕಲೆಯಲ್ಲಿ ನುರಿತ ಮೀನಾಕ್ಷಮ್ಮ ಮುಂದಿನ ಪಾತ್ರಗಳಿಗೆ ಯೋಗ್ಯವಾದ ಹೆದ್ದಾರಿಯನ್ನು ನಿರ್ಮಿಸುತ್ತಾರೆ. ಈ ರಹದಾರಿಯಲ್ಲಿ ಮುಂದುವರಿಯುವ ಸಾವಿತ್ರಮ್ಮ, ಜಯ, ಶಾಂತ – ಮೊದಲಾದವರು ತಮ್ಮ ವ್ಯಕ್ತಿತ್ವ ರೂಪಿಸಿಕೊಳ್ಳಲು ಸಹಾಯಕವಾಗಿದೆ.

ಸಾವಿತ್ರಿಯೂ ಮೀನಾಕ್ಷಮ್ಮನವರಿಗೆ ಸವತಿಯಾಗದೆ ತಂಗಿಯೇ ಆಗುತ್ತಾಳೆ. ಇವರಿಬ್ಬರ ಅನ್ಯೋನ್ಯತೆ ಒಂದು ಸುಂದರವಾದ ಮಾದರಿ. ಆದರೆ ಇವರಿಬ್ಬರ ಚಿಂತನೆಯಲ್ಲೂ ಅಗಾಧ ವ್ಯತ್ಯಾಸವಿದೆ. ಒಮ್ಮೆ ರಾಯರು ಇಬ್ಬರನ್ನೂ ಕೇಳುತ್ತಾರೆ – ನಿಮ್ಮ ಮಗ ಏನಾಗಬೇಕೆಂದು ಬಯಸುತ್ತೀರಿ? ಇಬ್ಬರೂ ಕೊಡುವ ಉತ್ತರ ಅವರ ದೃಷ್ಟಿಯ ಮೇಲೆ ಬೆಳಕು ಚೆಲ್ಲುತ್ತದೆ. ಸಾವಿತ್ರಿ ತನ್ನ ಮಗ ದೊಡ್ಡ ಆಫೀಸರಾಗಬೇಕೆಂದು ಬಯಸಿದರೆ, ಮೀನಾಕ್ಷಮ್ಮ ತನ್ನ ಮಗ ಏನಾಗದಿದ್ದರೂ ಚಿಂತೆಯಿಲ್ಲ, ಬಡವರಾಧಾರಿಯಾಗಬೇಕೆಂದು ಬಯಸುತ್ತಾರೆ. ವಿಶೇಷವೆಂದರೆ ಇವರಿಬ್ಬರ ಬಯಕೆಯಂತೆಯೇ ಇವರ ಮಕ್ಕಳು ರೂಪುಗೊಳ್ಳುತ್ತಾರೆ.

ಮೀನಾಕ್ಷಮ್ಮನಂತೂ ಇಡೀ ಹಳ್ಳಿಗೆ ತಾಯಿ. ಒಕ್ಕಲಿಗ ರೈತರೊಂದಿಗೆ ಆಕೆಗಿರುವ ಅವಿನಾಭಾವ ಸಂಬಂಧ ಮನಮುಟ್ಟುತ್ತದೆ. ಅವರಾಡುವ ಮಾತುಗಳು, ಮೀನಾಕ್ಷಮ್ಮನವರ ವ್ಯಕ್ತಿತ್ವವನ್ನು ನಮ್ಮ ಮುಂದೆ ತೆರೆದಿಡುತ್ತದೆ.

**"ಬಾಯಿ ತುಂಬ ಅರಸು ನಮ್ಮವ್ವಾ! ಬೇಗ ನಮ್ಮೂರಿಗೆ ಬಂದುಬಿಡು ಮೀನವ್ವಾ. ನಿನ್ನ ಬಡ ಮಕ್ಕಳನ್ನು ತಬ್ಲಿ ಮಾಡಿ ಓಗ್ಬಿಟ್ಬೇಡ"**[೧].

---

೧. 'ಸಂಧ್ಯಾರಾಗ' – ಅ.ನ.ಕೃ. ಪು. ೨೯

ಅಷ್ಟೇ ಅಲ್ಲ. ಮೀನಾಕ್ಷಮ್ಮ ಮತ್ತೆ ಹಳ್ಳಿಗೆ ಹಿಂತಿರುಗಿದಾಗ ಅವರಿಗೆ ದೊರೆಯುವ ಭವ್ಯ ಸ್ವಾಗತ, ಹಳ್ಳಿಯವರ ಪ್ರೀತಿ – ಅಭಿಮಾನಗಳೇ ಸಾಕು; ಮೀನಾಕ್ಷಮ್ಮನ ವ್ಯಕ್ತಿತ್ವವನ್ನು ನಮ್ಮ ಕಣ್ಣಿಗೆ ಕಟ್ಟುತ್ತದೆ. ಪೂರ್ಣ ಜೀವನವನ್ನು ಅನುಭವಿಸಿದವರು ಮೀನಾಕ್ಷಮ್ಮ. ಅವರ ಪಾತ್ರದಲ್ಲಿ ಅಂತಹ ಕ್ಲಿಷ್ಟತೆಗೆ ಅವಕಾಶವಿಲ್ಲ. ಅಂತೆಯೇ ಆ ಪಾತ್ರದ ಅಂತ್ಯವೂ ಅತ್ಯಂತ ಸಹಜವಾಗಿದೆ.

ರಾಯರ ಪಾತ್ರದ ಗಾಂಭೀರ್ಯ – ಘನತೆಗಳು ನಂತರದ ಹಂತದಲ್ಲಿ ಸ್ವಲ್ಪ ಮಂಕಾಗುತ್ತವೆ. ಇಲ್ಲಿ ಮುಖ್ಯವಾಗುವುದು ಮೀನಾಕ್ಷಮ್ಮನವರ ಬಗೆಗಿನ ಅವರ ಅಮಿತವಾದ ಪ್ರೇಮ. ಈ ಪ್ರೇಮದ ಕಾರಣವಾಗಿಯೇ ಅವರೂ ಮೀನಾಕ್ಷಮ್ಮನ ದಾರಿಯನ್ನೆ ಹಿಡಿಯುತ್ತಾರೆ. ಆದರೆ ಇಲ್ಲಿ ಬಹಳ ಗಮನಾರ್ಹ ಸಂಗತಿಯೆಂದರೆ, ರಾಯರು ಮರಣಹೊಂದುವುದೂ ಪೂರ್ವಿ ಸಂಧ್ಯಾರಾಗವನ್ನು ಕೇಳುತ್ತಾ. ಲಕ್ಷ್ಮಣನ ಬದುಕಿನೊಂದಿಗೆ ಬೆಸೆದುಕೊಂಡಿದ್ದ ಸಂಧ್ಯಾರಾಗ, ಇಲ್ಲಿ ರಾಯರ ಮರಣಕ್ಕೂ ಸಾಕ್ಷಿಯಾಗಿದೆ.

ಕೃತಿಯ ಉತ್ತರಾರ್ಧದಲ್ಲಿ ನಿರ್ಲಕ್ಷಕ್ಕೆ ಒಳಗಾದ ಪಾತ್ರವೆಂದರೆ ಸಾವಿತ್ರಮ್ಮ. ಪೂರ್ವಾರ್ಧದಲ್ಲಿ ಈ ಪಾತ್ರ ಆಕರ್ಷಕವಾಗಿ ಬೆಳೆಯಬಹುದಾದ ಸೂಚನೆ ದೊರೆತರೂ, ಉತ್ತರಾರ್ಧದಲ್ಲಿ ಗೌಣವಾಗಿದೆ. ಜಯಾಳ ಮರಣದ ನಂತರವಂತೂ ಸಾವಿತ್ರಮ್ಮ ಏನಾದರು ಎಂಬ ಸುಳಿವೇ ದೊರೆಯುವುದಿಲ್ಲ. ಅವರ ಆರೋಗ್ಯ ಸರಿಯಿಲ್ಲವೆಂಬ ಒಂದೇ ಕಾರಣವನ್ನು ಕೊಟ್ಟು ಸುಮ್ಮನಾಗಿಬಿಡುತ್ತದೆ ಕಾದಂಬರಿ. ಬಹುಶಃ ಕಾದಂಬರಿಯ ಕೇಂದ್ರ ರಾಮಚಂದ್ರ ಹಾಗೂ ಲಕ್ಷ್ಮಣರಾಗಿರುವುದರಿಂದಲೂ, ಕತೆಯು ಒಂದು ಪೀಳಿಗೆಯಿಂದ ಮತ್ತೊಂದು ಪೀಳಿಗೆಗೆ ಚಲಿಸುತ್ತಿರುವುದರಿಂದಲೂ, ಲೇಖಕರಿಗೆ ಇದು ಅನಿವಾರ್ಯವಾಗಿದೆಯೇನೋ!

ಒಟ್ಟಿನಲ್ಲಿ ರಾಯರು – ಮೀನಾಕ್ಷಮ್ಮ – ಸಾವಿತ್ರಮ್ಮನವರ ಪಾತ್ರಗಳು ಕೃತಿಯೊಳಗೆ ಮಧುರವಾದ ಕಂಪನ್ನು ತುಂಬುತ್ತವೆ. ಅವರ ಅನ್ಯೋನ್ಯತೆ, ಉದಾತ್ತತೆ, ಪರಸ್ಪರರ ಸಂಬಂಧಗಳು ಮನಸ್ಸಿಗೆ ಹತ್ತಿರವಾಗುವಂತಹವು. ಇಲ್ಲಿ ಈ ಯಾವ ಪಾತ್ರಗಳ ಮಿತಿಯನ್ನು ದೌರ್ಬಲ್ಯವನ್ನೂ ಚಿತ್ರಿಸಲಾಗಿಲ್ಲ. ಉನ್ನತವಾದ ಆದರ್ಶ, ಗುಣಗಳ ಪರಿಕಲ್ಪನೆಗಳಿಗೇ ಈ ಪಾತ್ರಗಳು ಸೀಮಿತವಾಗಿವೆ. ಇನ್ನೊಂದಿಷ್ಟು ವಾಸ್ತವಿಕತೆಯ ಸ್ಪರ್ಶ ಇವುಗಳಿಗೆ ದಕ್ಕಿದ್ದರೆ, ಹೆಚ್ಚು ಮೌಲ್ಯಯುತ ಪಾತ್ರಗಳಾಗುತ್ತಿದ್ದವು ಎನ್ನಬಹುದು.

ಕಾದಂಬರಿಯ ಪ್ರಧಾನ ಪಾತ್ರಗಳಂತೆ, ಅದರಲ್ಲಿ ಬರುವ ಉಪಪಾತ್ರಗಳೂ ಕಾದಂಬರಿಯ ಬೆಳವಣಿಗೆಗೆ, ಅದರ ಜೀವಂತಿಕೆಗೆ ತಮ್ಮದೇ ಆದ ಕೊಡುಗೆಯನ್ನು ನೀಡುತ್ತವೆ. ಮಾತ್ರವಲ್ಲ, ಲೇಖಕನೊಬ್ಬನ ಪ್ರತಿಭಾ ಶಕ್ತಿ ಸ್ಪಷ್ಟವಾಗಿ ತಿಳಿಯುವುದು ಇಂತಹ ಪಾತ್ರಗಳಿಂದಲೇ. ಕೃತಿಯೊಂದನ್ನು ಓದಿದಾಗ ಅದರ ಪ್ರಧಾನ ಪಾತ್ರಗಳು ನೆನಪಿನಲ್ಲಿ ಉಳಿಯುವುದು ಕಷ್ಟವೇನಿಲ್ಲ; ಆದರೆ ಅದೇ ರೀತಿ ಸಣ್ಣ – ಪುಟ್ಟ ಪಾತ್ರಗಳು ಹೆಚ್ಚು ಕಾಲ ನಮ್ಮನ್ನು ಕಾಡುವಂತೆ ಮಾಡುವುದು ಒಬ್ಬ ಲೇಖಕನ ನಿಜವಾದ ಸಾಮರ್ಥ್ಯ. 'ಸಂಧ್ಯಾರಾಗ' ದಲ್ಲಂತೂ ಸಾಕಷ್ಟು ಉಪಪಾತ್ರಗಳಿವೆ. ಇವುಗಳಲ್ಲಿ ಸತ್ವಯುತವಾದ ಪಾತ್ರಗಳನ್ನು ಪರಿಶೀಲಿಸುವ ಅಗತ್ಯವಿದೆ.

ಶಾಮಣ್ಣನವರ ಪಾತ್ರ ನೈಜತೆಯೇ ಮೈವೆತ್ತಂತೆ ಮೂಡಿದೆ. ಅತಿಯಾದ ಭಾವಾವೇಶಕ್ಕೆ ತುತ್ತಾಗಿಲ್ಲ. ಆ ಪಾತ್ರದ ಸರಳತೆ – ಸಹಜತೆಗಳೇ ನಮ್ಮನ್ನು ಅದರೆಡೆಗೆ ಆಕರ್ಷಿಸುವುದು. 'ಶಾಮಣ್ಣ' – ಭಾರತದ ಶಾಮಣ್ಣನೆಂದೇ ಪ್ರಸಿದ್ಧರು. ಶ್ರೀನಿವಾಸರಾಯರಿಗಂತೂ ಅವರು ಪ್ರೀತಿಯ ಶಾಮಿ. ಅವರ ಭಾರತ ವಾಚನವೇ ಕೃತಿಗೆ ಒಂದು ವಿಶಿಷ್ಟವಾದ ಮೆರಗು ನೀಡಿದೆ. ನಿರಾಶ್ರಿತರಾಗಿ ಎಲ್ಲರನ್ನೂ ಕಳೆದುಕೊಂಡಿದ್ದ ಅವರಿಗೆ ರಾಯರ ಮನೆಯೇ ಆಶ್ರಯ. ತಮ್ಮ ಜೀವನದ ನೋವುಗಳನ್ನು ಮರೆಯಲು ಭಾರತ ವಾಚನ ಅಭ್ಯಾಸ ಮಾಡಿಕೊಂಡಿದ್ದರು. ಅವರು ಶಾಸ್ತ್ರೀಯವಾಗಿ ಸಂಗೀತವನ್ನು ಕಲಿತವರಲ್ಲ. ಆದರೆ ಸುಮಧುರ ಕಂಠ ಅವರಿಗೆ ದೈವದತ್ತ ವರ. ಕುಮಾರವ್ಯಾಸ ಅವರ ಕಂಠದಲ್ಲಿ ಸ್ಥಿರವಾಗಿ ಕುಳಿತುಬಿಟ್ಟಿದ್ದ.

ಕೇವಲ ಭಾರತವಾಚನವೊಂದೇ ಅಲ್ಲ; ಪ್ರಬುದ್ಧತೆ, ಜೀವನಾನುಭವ ಮೂಡಿಸಿದ ತಿಳುವಳಿಕೆ, ವಿಷಯವನ್ನು ಸರಿಯಾದ ದಿಕ್ಕಿನಲ್ಲಿ ಆಲೋಚಿಸಬಲ್ಲ ಸಾಮರ್ಥ್ಯಗಳೂ ಅವರಲ್ಲಿ ಹರಳುಗಟ್ಟಿದೆ. ಆದ್ದರಿಂದಲೇ ರಾಯರ ಜೀವನದ ಎಲ್ಲ ಸಮಸ್ಯೆಗಳನ್ನು ಬಿಡಿಸಲು, ಸೂಕ್ತ ಸಲಹೆ ಸಹಕಾರಗಳನ್ನು ನೀಡಲು ಶಾಮಣ್ಣನವರೇ ಬೇಕು. ಅವರ ಭಾರತ ವಾಚನವೇ ಲಕ್ಷ್ಮಣನ, ಸಂಗೀತ ಸಾಧನೆಗೆ ಆರಂಭದ ಹಂತದಲ್ಲಿ ಪ್ರೇರಣೆ. ಅವರ ತಂಬೂರಿಯೇ, ಅವರ ಏಕೈಕ ಆಸ್ತಿ. ಆ ತಂಬೂರಿಯ ತಂತಿಗಳೇ ಲಕ್ಷ್ಮಣನ ನರನಾಡಿಗಳನ್ನು ಮಿಡಿಯುತ್ತಿದ್ದುದು.

ಮುಳಬಾಗಿಲು ಚೆನ್ನಪ್ಪನವರೇ ಶಾಮಣ್ಣನವರ ಭಾರತವಾಚನವನ್ನು ಮೆಚ್ಚಿಸಂತೋಷಗೊಳ್ಳುವುದು ಶಾಮಣ್ಣನವರ ಸಂಗೀತ ಪ್ರತಿಭೆಯ ಪರಿಚಯ ಮಾಡಿಕೊಡುತ್ತದೆ. ಅವರ ಭಾರತ ವಾಚನದಿಂದ, ಕೃತಿಗೆ ಸಾಂಸ್ಕೃತಿಕ ಆವಣರವೊಂದು ಒದಗಿದೆ. ಅವರ ಪಾತ್ರದುದ್ದಕ್ಕೂ, ಆ ಪಾತ್ರದ ನಂತರವೂ ಅವರ ವಾಚನ ಕಿವಿಯಲ್ಲಿ ಝೇಂಕರಿಸುತ್ತದೆ; ಭಾರತದ ಪಾತ್ರಗಳು ಕಣ್ಣಮುಂದೆ ಕುಣಿಯುತ್ತದೆ. ಅವರು ಹೇಳುವ ಪದಗಳು ಸನ್ನಿವೇಶವನ್ನು ಅರ್ಥೈಸುವದಲ್ಲದೇ ಅವರ ಜೀವನಾನುಭವವನ್ನೂ, ವ್ಯಕ್ತಿತ್ವವನ್ನು ವಿದಿತಗೊಳಿಸುತ್ತದೆ.

ಕಾದಂಬರಿಯ ಮಧ್ಯದಲ್ಲಿ 'ಶಾಮಣ್ಣ'ನವರು ನಮ್ಮಿಂದ ಬೀಳ್ಕೊಂಡರೂ, ಅವರ ಇರುವಿಕೆ, ಗಾಢವಾಗಿ ನಮ್ಮನ್ನು ಆವರಿಸುತ್ತದೆ. ಅವರು ಹೇಳುತ್ತಿದ್ದ ಕರ್ಣವೃತ್ತಾಂತ, ಅಕ್ಷಯಪಾತ್ರೆಯ ಪ್ರಸಂಗಗಳು ಅಷ್ಟು ಸುಲಭವಾಗಿ ಅವರನ್ನು ಮರೆಯಲು ಬಿಡುವುದಿಲ್ಲ.

ಕಾದಂಬರಿಯಲ್ಲಿ ಇನ್ನು ಕೆಲವು ಪಾತ್ರಗಳು ಕೆಲವು ಗುಣಗಳ ಪ್ರತೀಕದಂತೆ ಕಂಡು ಬರುವುದು ಪಾತ್ರಸೃಷ್ಟಿಯ ಮಿತಿಗೆ ಕಾರಣವಾಗಿದೆ. ಇಲ್ಲಿ ಶಾಂತ ತನ್ನ ಸಹನ ಶೀಲತೆಗೆ, ವೆಂಕಟೇಶ ಆತ್ಮಾಭಿಮಾನಕ್ಕೆ ದ್ಯೋತಕವಾಗಿದ್ದಾರೆ.

ವೆಂಕಟೇಶ ರಾಯರ ಮನೆಯಲ್ಲಿ ವಾರಾನ್ನದ ಹುಡುಗ. ಒಳ್ಳೆಯ ಮನಸ್ಸಿನವನು. ತಿನ್ನಲು ಬಡತನವಿದ್ದರೂ, ಅಭಿಮಾನದಲ್ಲಿ ಬಡತನವಿಲ್ಲದ ವ್ಯಕ್ತಿತ್ವ – ಅವನದು. ರಾಮಚಂದ್ರನ ಮೂದಲಿಕೆ ಮಾತುಗಳು ಅವನನ್ನು ಸದಾ ನೋಯಿಸುತ್ತಿದ್ದರೂ ರಾಯರ ಸಂಸಾರಕ್ಕಾಗಿ ಅವುಗಳನ್ನು ಸಹಿಸಿಕೊಳ್ಳುತ್ತಾನೆ. ರಾಯರ ಮೇಲಿನ ಗೌರವದಿಂದ

ಶಾಂತಾಳನ್ನು ಕೈ ಹಿಡಿಯುವ ಅವನ ಔದಾರ್ಯ ಮೆಚ್ಚುವಂತದ್ದು. ವಾಸ್ತವವಾಗಿ ಸಂಧ್ಯಾರಾಗದ ನಾಯಕ ಲಕ್ಷ್ಮಣನಾದರೂ, ನಾಯಕನ ಗುಣಗಳೆಲ್ಲವೂ ವೆಂಕಟೇಶನಲ್ಲೇ ಇವೆ. ಅವನಲ್ಲಿ ಒಳ್ಳೆಯ ತನವಿರುವಂತೆ ಆತ್ಮಾಭಿಮಾನ, ಕೆಚ್ಚು – ಛಲ, ಸಾಧಿಸುವ ಹಟ, ಅನ್ಯಾಯವನ್ನು ಪ್ರತಿಭಟಿಸುವ ಸಾಮರ್ಥ್ಯ – ಇಂತಹಾ ಗುಣಗಳೂ ಮೂರ್ತೀಭವಿಸಿವೆ. ರಾಮಚಂದ್ರನನ್ನು ಟೀಕಿಸುವಾಗ ಅವನಾಡುವ ಮಾತುಗಳು –

**"ನಾನು ಒಬ್ಬ ಮನುಷ್ಯ. ನಿನ್ನ ಹಾಗೆ ಒಂದು ಕಾಡುಪಶುವಲ್ಲ. ಹೆಂಡತಿ ಕಂಡರೆ ನಿರ್ವಾಹವಿಲ್ಲದಷ್ಟು ವಿಶ್ವಾಸ. ಅವಳು ಕೆಲಸ ಮಾಡಿದರೆ ಸವೆದುಹೋಗುತ್ತಾಳೆ – ಎನ್ನುವಷ್ಟು ಆದರ"**[೧].

ಇವು ಅಹಂಕಾರದ ಮಾತುಗಳಲ್ಲ, ಪತ್ನಿಯಾದವಳನ್ನು ನೋಡಿಕೊಳ್ಳಬೇಕಾದ ನಿಜವಾದ ದೃಷ್ಟಿಯಿದು. ಈ ಮಾತುಗಳ ಹಿನ್ನಲೆಯಲ್ಲಿ ಲಕ್ಷ್ಮಣನನ್ನೂ, ರಾಮಚಂದ್ರನನ್ನೂ ವೆಂಕಟೇಶನೊಡನೆ ತೂಗಿ ನೋಡುವಂತಾಗುತ್ತದೆ. ಈ ತುಲನೆಯಲ್ಲಿ ವೆಂಕಟೇಶನೇ ಅವರಿಬ್ಬರಿಗಿಂತ ಎತ್ತರದಲ್ಲಿ ನಿಲ್ಲುತ್ತಾನೆ.

ರಾಮಚಂದ್ರನನ್ನು ಎದುರಿಸುವ ಸಾಹಸ ವೆಂಕಟೇಶನಿಗೊಬ್ಬನಿಗೇ ಇರುವುದು. ಅವನ ಎಲ್ಲಾ ದುರ್ನಡತೆಗಳಿಗೆ ವೆಂಕಟೇಶ ಸರಿಯಾದ ಪೆಟ್ಟನ್ನೇ ನೀಡುತ್ತಾನೆ. ಆದರೆ ರಾಯರ ದಿವ್ಯಸ್ಮೃತಿ ವೆಂಕಟೇಶ ರಾಮಚಂದ್ರನನ್ನು ಉಳಿಸುವಂತೆ ಮಾಡುತ್ತದೆ. ಇದಕ್ಕೆ ಸ್ವಲ್ಪ ಮಟ್ಟಿಗೆ ಶಾಂತಳೂ ಕಾರಣ. ರಾಮಚಂದ್ರನಿಂದ ತನಗಾದ ಅನ್ಯಾಯ – ನೋವುಗಳನ್ನೆಲ್ಲಾ ಮರೆತು ಅವನನ್ನು ಕ್ಷಮಿಸುವ ದೊಡ್ಡ ಗುಣ ಅವಳದ್ದು. ಜಯಾಳಂತೆ ಅವಳ ಸಹನಾಶಕ್ತಿಯೂ ಸಹ ಅದ್ಭುತ – ಜಯಾ ಮತ್ತು ಶಾಂತಳ ಸಂಬಂಧವೂ ಎಷ್ಟು ಸ್ನೇಹಮಯ? ಅವರಿಬ್ಬರೂ ಅತ್ತಿಗೆ – ನಾದಿನಿಯರಿಗಿಂತಲೂ ಒಳ್ಳೆಯ ಸ್ನೇಹಿತರಾಗಿ ಕಂಡುಬರುತ್ತಾರೆ.

ವೆಂಕಟೇಶನ ಪಾತ್ರದ ಮೂಲಕ ಲೇಖಕರು ಕೆಲವು ಅಂಶಗಳನ್ನು ಸ್ಪಷ್ಟಪಡಿಸಿದ್ದಾರೆ. ಅವು ಕೆಡುಕಿನ ಸೋಲು ಮತ್ತು ಒಳಿತಿನ ಜಯ; ಸತತ ಪರಿಶ್ರಮ, ಛಲಗಳಿಂದ ಅಂದುಕೊಂಡದ್ದನ್ನು ಸಾಧಿಸಬಹುದೆಂಬ ಸತ್ಯ. ಆದ್ದರಿಂದಲೇ ಇಲ್ಲಿ ರಾಮಚಂದ್ರ ಯಾರನ್ನು ಹಂಗಿಸುತ್ತಿದ್ದನೋ, ಅದೇ ವೆಂಕಟೇಶನ ದಾಕ್ಷಿಣ್ಯಕ್ಕೆ ತುತ್ತಾಗಬೇಕಾಗುತ್ತದೆ. ವೆಂಕಟೇಶ ಮೇಲೇರಿದಾಗ ರಾಮಚಂದ್ರ ಕೆಳಗಿಳಿಯುತ್ತಾನೆ.

ಆರಂಭದಿಂದಲೂ ವೆಂಕಟೇಶ ಬಡವನೆಂಬ ಕಾರಣಕ್ಕೆ ರಾಮಚಂದ್ರ ಅವನನ್ನು ಹಿಯ್ಯಾಳಿಸುವುದು, ಆತ್ಮಾಭಿಮಾನಕ್ಕೆ ಪೆಟ್ಟು ಬಿದ್ದ ವೆಂಕಟೇಶ ಛಲದಿಂದ ಮುಂದೆ ಬರುವುದು, ರಾಮಚಂದ್ರನನ್ನು ಅವಮಾನಿಸುವುದು – ಇವೆಲ್ಲವೂ ವೆಂಕಟೇಶನ ಪಾತ್ರದ ನಾಟಕೀಯ ಬೆಳವಣಿಗೆಯಂತೆ ತೋರಿಬರುತ್ತದೆ. ಅಷ್ಟೇನೂ ನೈಜತೆ ಇಲ್ಲಿ ಕಂಡುಬರುವುದಿಲ್ಲ.

ಉಳಿದವರಿಗಿಂತ ಸ್ವಲ್ಪ ಭಿನ್ನವಾಗಿ ಕಾಣುವವನು ಗೋಪಾಲ. ಬಿಸಿರಕ್ತದ ಹುಮ್ಮಸ್ಸಿನ ಯುವಕ. ಆಧುನಿಕ ವಿಚಾರಧಾರೆಗಳು ಅವನಲ್ಲಿ ಮೇಳೈಸಿವೆ. ಗೋಪಾಲನ ಪಾತ್ರ ಇತರರಂತೆ ಭಾವಪ್ರಚೋದಕವಾಗದೆ, ಬುದ್ಧಿ

---

೧. 'ಸಂಧ್ಯಾರಾಗ' – ಅ.ನ.ಕೃ. – ಪು. ೯೮

ಪ್ರಚೋದಕವಾಗಿದೆ. ಒಂದು ರೀತಿಯಲ್ಲಿ ಇವನ ಪಾತ್ರ ತನ್ಮೂಲಕ ಲೇಖಕರ ವಿಚಾರಧಾರೆಗಳನ್ನು ವ್ಯಕ್ತಪಡಿಸುತ್ತಿದೆಯೆನಿಸುತ್ತದೆ.

ಗೋಪಾಲ ವಿದ್ಯಾವಂತ ಎನ್ನುವುದಕ್ಕಿಂತಲು ಬುದ್ಧಿವಂತ ಎನ್ನಬಹುದು. ಇತರರಂತೆ ಪುಸ್ತಕದ ಹುಳುವಲ್ಲ. ವಿಶಾಲವಾದ ಜ್ಞಾನ ಸಂಪತ್ತನ್ನು ಸಂಪಾದಿಸುವುದರೆಡೆಗೆ ಅವನು ಸದಾ ತುಡಿಯುತ್ತಿದ್ದ. ಅವನ ಜ್ಞಾನ ದಾಹ ಇಂಗುತ್ತಿರಲಿಲ್ಲ. ಹೊಸ ವಿಚಾರ, ತತ್ತ್ವಗಳನ್ನು ತಿಳಿಯಲು ಅವನ ಮನಸ್ಸು ಸದಾ ತಹತಹಿಸುತ್ತಿತ್ತು.

ಕಾದಂಬರಿಯಲ್ಲಿ ಬರುವ ಪ್ರಸಂಗವೊಂದು ಅವನ ದೃಷ್ಟಿ ಧೋರಣೆಗಳನ್ನು ತಿಳಿಸುತ್ತದೆ. ಅಧ್ಯಾಪಕರೊಂದಿಗೆ ಮುಖಾಮುಖಿಯಾಗುವ ಅವನ ದಿಟ್ಟತನ, ಸಾಹಿತ್ಯಾಭಿರುಚಿ, ಅವನ ಚಿಂತನೆಗಳೆಲ್ಲವೂ ಅವನನ್ನು ಇತರ ಪಾತ್ರಗಳಿಗಿಂತ ಭಿನ್ನವಾಗಿಸಿದೆ. ಇದು ಪರೋಕ್ಷವಾಗಿ ಅ.ನ.ಕೃ. ರವರ ದೃಷ್ಟಿಯೂ ಇರಬಹುದು. ಅದರಲ್ಲೂ ಮುಖ್ಯವಾಗಿ "ರೆನಾಲ್ಡ್ಸ್ ಕೀಳು ದರ್ಜೆಯ ಲೇಖಕನೂ, ಕೊಳೆತ ಈರುಳ್ಳಿಯನ್ನು ಮೈಸೂರು ಗಂಧ ಎಂದು ಕೊಳ್ಳುವವನು" – ಎಂಬ ಗೋಪಾಲನ ಅಭಿಪ್ರಾಯ ಲೇಖಕರ ಅಭಿಪ್ರಾಯವೇ ಆಗಿರಬಹುದು.

ಗೋಪಾಲ ಇಲ್ಲಿ ಕತೆಗಾರನೂ ಹೌದು. ಗೋಪಾಲನು ಬರೆಯುವ ಶಿಲ್ಪಿಯ ಕತೆಯ ವಿವರವೂ ಇಲ್ಲಿ ಬಂದಿದೆ. "ಅನುಭವಕ್ಕಿಂತಲೂ ಉತ್ತಮ ಭೋದಕ" ಮತ್ತೊಬ್ಬನಿಲ್ಲ ಎಂಬ ಗೋಪಾಲನ ಜೀವನದೃಷ್ಟಿ ಅವನ ಕತೆಯ ಮೂಲಕ ವ್ಯಕ್ತವಾಗುತ್ತದೆ. ವಯಸ್ಸಿಗೆ ಮೀರಿದ ವಿಚಾರವಂತನಾಗಿ, ಪ್ರಬುದ್ಧನಾಗಿ, ಒಬ್ಬ ಕತೆಗಾರನಾಗಿ ಗೋಪಾಲ ನಮ್ಮ ಕಣ್ಣಮುಂದೆ ನಿಲ್ಲುತ್ತಾನೆ.

"ಮನುಷ್ಯ ತನ್ನಲ್ಲಿ ಜಾಗೃತಿಯನ್ನು ಪಡೆದು ಹೊಸ – ಹೊಸ ವಿಚಾರಗಳನ್ನು ಪ್ರಪಂಚವನ್ನು ಜಯಿಸಬೇಕು, ಲೋಕಕ್ಕೆ ಪ್ರಸ್ತುತ ಅಗತ್ಯವಿರುವುದು ಜಾಗೃತಿ – ಕ್ರಾಂತಿ" – ಎಂಬಂತಹ ದೃಷ್ಟಿಕೋನ ಅವನದು.

ಇತರರ ಪಾತ್ರಚಿತ್ರಣ ಭಾವುಕತೆಯ ಹಿನ್ನಲೆಯಲ್ಲಿ ರೂಪುತಳಿದಿದ್ದರೆ ಗೋಪಾಲನ ಪಾತ್ರ ಅದಕ್ಕೆ ಸ್ವಲ್ಪ ಹೊರತಾಗಿದೆ. ಗೋಪಾಲನ ಚಿಂತನೆಗಳಿಗೆ ಇಲ್ಲಿ ಹೆಚ್ಚಿನ ಒತ್ತು ನೀಡಲಾಗಿದೆ. ಅದೇ ರೀತಿ ಅವನ ಸ್ವಭಾವದ ಪರಿಚಯವು ಕೆಲವೊಂದು ಸನ್ನಿವೇಶಗಳಲ್ಲಿ ಬಂದಿದೆ. ತನ್ನ ಅಣ್ಣ – ಅತ್ತಿಗೆಯ ಹೀನ ನಡವಳಿಕೆಯ ಬಗ್ಗೆ ಅವನಲ್ಲಿ ಜಿಗುಪ್ಸೆಯಿದೆ, ಸ್ವಂತ ಅಣ್ಣನಲ್ಲದಿದ್ದರೂ ಲಕ್ಷ್ಮಣನ ಬಗೆಗೆ ಅಪಾರ ಪ್ರೇಮವಿದೆ. ಲಕ್ಷ್ಮಣನ ಗಾನಸುಧೆ, ವಿಶ್ವವ್ಯಾಪಿಯಾಗಲೂ, ಅವನು ಲೋಕಪ್ರಸಿದ್ಧನಾಗಿ ಕೀರ್ತಿ ಪಡೆಯಲು ಗೋಪಾಲನ ಪ್ರೋತ್ಸಾಹವೇ ಬಹುಮುಖ್ಯ ಕಾರಣ.

ಲಕ್ಷ್ಮಣನ ಸಾಧನೆಗೆ ಹಾದಿಯನ್ನೊದಗಿಸುವ ಗುರುಗಳ ಪಾತ್ರಗಳೂ ಅಚ್ಚುಕಟ್ಟಾದ ಆವರಣವನ್ನು ಪಡೆದಿವೆ. ಭೌತಿಕವಾಗಿ, ಬೌದ್ಧಿಕವಾಗಿ ಅವರ ವ್ಯಕ್ತಿತ್ವ ನಮ್ಮ ಕಣ್ಣಿಗೆ ಕಟ್ಟುವಂತೆ ನಿಲ್ಲುತ್ತವೆ.

ಮೈಸೂರಿನ ಪ್ರಸಿದ್ಧ ವಿದ್ವಾಂಸರು ಅನಂತಾಚಾರ್ಯರು. ವಿದ್ವತ್ ಹಿನ್ನಲೆಯಿಂದ ಸಂಗೀತವನ್ನು ಪಡೆದವರು. ಆದರೆ ಅವರು ಉತ್ತಮ ಸಂಗೀತಗಾರರು ಎನ್ನುವುದಕ್ಕಿಂತ ಹೆಚ್ಚಾಗಿ, ಶಾಸ್ತ್ರ ವಿಚಾರಗಳಲ್ಲಿ ಪರಿಣಿತಿ, ಸಾಧಿಸಿದವರು. ಪ್ರಯತ್ನಪಟ್ಟು ಕಲಿತರೆ ಯಾರ ಬೇಕಾದರೂ ಶಾಸ್ತ್ರವನ್ನು ಕಲಿಯಬಹುದು; ಅದು ಬುದ್ದಿಗೆ ಸಂಬಂಧಿಸಿದುದು ಆದರೆ ಕಲೆಯು ಮಾತ್ರ ಹೃದಯವೇದ್ಯ, ಅದು ಹೃದಯದಿಂದಲೇ ಹುಟ್ಟಿಬರಬೇಕೆಂಬ ತಿಳುವಳಿಕೆ ಅವರದ್ದಾಗಿದೆ. ಈ ತಿಳುವಳಿಕೆಯ ನಿಕಷದಲ್ಲಿ ಲಕ್ಷ್ಮಣನ ಕಲಾಸಾಮರ್ಥ್ಯವನ್ನು ಗುರುತಿಸಿ, ಅವನ ಸಾಧನೆಗೆ ಸ್ಪಷ್ಟ ಹಾದಿಯನ್ನು ತೋರಿಸುವಲ್ಲಿ ಅನಂತಾಚಾರ್ಯರ ಪಾಲು ಹಿರಿದಾದುದು.

ಕಾದಂಬರಿಯ ಉತ್ತರಾರ್ಧದಲ್ಲಿ ಬರುವ ಮಹಾಭಾಗವತರು ಕೃಷ್ಣ ಅಯ್ಯರ್‌ರವರು ತಮ್ಮ ಘನತೆ, ಗಾಂಭೀರ್ಯ ಮತ್ತು ಸತ್‌ಶೀಲಗಳಿಂದ ಮನಸ್ಸನ್ನು ಸೆರೆಹಿಡಿಯುತ್ತಾರೆ. ಭಾಗವತರ ಕುಟುಂಬದ ಆತ್ಮೀಯತೆ, ಲಕ್ಷ್ಮಣನೊಂದಿಗೆ ಅವರು ಬೆರೆಯುವ ರೀತಿ ಒಂದು, ಸುಂದರವಾದ ಅನುಭವವನ್ನು ನೀಡುತ್ತದೆ. ಮಹಾಭಾಗವತರು 'ಪೂರ್ವಿ ಕೃಷ್ಣ ಅಯ್ಯರ್' ಎಂದೂ ಪ್ರಸಿದ್ಧರು. ಆ ರಾಗದೇವತೆ ಅವರಿಗೆ ಹಾಗೆ ಒಲಿದಿದ್ದಳು. ಪೂರ್ವೀರಾಗಕ್ಕಾಗಿ ಅವರು ತಮ್ಮ ಇಡೀ ಜೀವನವನ್ನು ತೇದಿದ್ದರು. ಆದರೆ ಅವರಿಗೆ ಪೂರ್ವಿ ಕರಗತವಾಗಿತ್ತೇ ಹೊರತು ಸಂಧ್ಯಾಪೂರ್ವಿಯಲ್ಲ. ಪೂರ್ವಿರಾಗದಲ್ಲೇ ಹೆಚ್ಚು ಶ್ರೇಷ್ಠವಾದ ಸಂಧ್ಯಾಪೂರ್ವಿಯ ಉತ್ತರಾಧಿಕಾರಿಯೆಂಬಂತೆ ಲಕ್ಷ್ಮಣನನ್ನು ಅವರು ನೇಮಿಸುತ್ತಾರೆ. ಲಕ್ಷ್ಮಣ, ಸಂಧ್ಯಾರಾಗದ ಸಾರ್ಥಕತೆಗಾಗಿ ನಿರೀಕ್ಷಿಸಲು, ಅದರ ಸಿದ್ಧಿಯಲ್ಲಿ ತನ್ನನ್ನು ತಾನೇ ಅರ್ಪಿಸಿಕೊಳ್ಳಲು ಅಯ್ಯರ್‌ರವರು ಜೀವಂತ ಪ್ರೇರಣೆ.

ಅವರು ಪೂರ್ವಿಯನ್ನು ಲಕ್ಷ್ಮಣನಿಗೆ ದತ್ತಿ ನೀಡುತ್ತಾರೆ. ಎಂದಾದರೊಂದು ದಿನ ಲಕ್ಷ್ಮಣ ಅದನ್ನು ಸರಿಯಾದ ರೀತಿಯಲ್ಲಿ ಹಾಡಿ, ತನ್ನನ್ನು ಋಣವಿಮುಕ್ತನನ್ನಾಗಿಸುತ್ತಾನೆಂಬುದು, ಅವರ ಬಯಕೆ. ಅದೇ ಅವರು ಬಯಸಿದ ಗುರುಕಾಣಿಕೆ. ಒಬ್ಬ ಉತ್ಕೃಷ್ಟ ಕಲಾವಿದರಾಗಿ, ನಿಜವಾದ ಕಲಾವಿದನ ಕರ್ತವ್ಯ – ನಿಲುವು ತಿಳಿಸಿಕೊಡುತ್ತಾರೆ ಅಯ್ಯರ್‌ರವರು. ಅವರಿಗೆ ಲಕ್ಷ್ಮಣ ಎಂಥಾ ಕಲಾವಿದನೆಂಬುದು ತಿಳಿದಿದೆ; ಮುಂದೆ ಅವನಿಂದ ಈ ಲೋಕಕ್ಕೆ ಸ್ಮರಣೀಯ ಕೊಡುಗೆ ಸಲ್ಲುವುದೆಂದು ಅವರು ಬಲ್ಲರು.

'ಲಕ್ಷ್ಮಣನ ವಿದ್ಯೆ ಅಲೌಕಿಕವಾದದ್ದು, ಅವನ ವಿದ್ಯೆಯಿಂದ ಹಲವು ಹೃದಯಗಳು ಬೆಳಗುತ್ತದೆ. ಲೋಕವೇ ಅಂಧಕಾರಕಲಾಪದಿಂದ ನಿವೃತ್ತಿಯಾಗುವುದು ಲಕ್ಷ್ಮಣನ ಕಲೆಯಿಂದ" ಎಂಬ ಅವರ ಮಾತುಗಳು ಲಕ್ಷ್ಮಣನ ಬಗೆಗಿನ ಭಗವದ್ ವಾಣಿಯಂತಿದೆ. ಅವನ ಕಲಾತಪಸ್ಸಿಗೆ ಅಯ್ಯರ್‌ವರು ಭಾಷ್ಯ ಬರೆಯುತ್ತಾರೆ. ಅವರ ಪಾತ್ರ ಲಕ್ಷ್ಮಣನ ಕಲಾಸಾಮರ್ಥ್ಯವನ್ನು ಪರಿಚಯಿಸುವ ಪಾತ್ರದಂತಾಗಲೀ, ಅವನ ಸಾಧನೆಗೆ ನೆರವಾಗಲೆಂದೇ ಸೃಷ್ಟಿಯಾದ ಪಾತ್ರದಂತಾಗಲೀ ಕಾಣುವುದಿಲ್ಲ. ಭಾಗವತರ ಬಗ್ಗೆ ಒಂದು ಪೂಜ್ಯ ಭಾವನೆ ನಮ್ಮಲ್ಲಿ ಮೂಡಿ, ಅವರ ಘನತೆ, ವಿದ್ವತ್ತುಗಳು ಅಚ್ಚೊತ್ತುತ್ತವೆ.

ಮುಳುಬಾಗಿಲ ಚೆನ್ನಪ್ಪನವರದ್ದು ಅಪೂರ್ವ ವ್ಯಕ್ತಿತ್ವ. ಕಾದಂಬರಿಯಲ್ಲಿ ಮಿಂಚಿನಂತೆ ಬಂದು ಮಾಯವಾಗುತ್ತಾರೆ. ಆದರೆ ಆ ಮಿಂಚಿನ ಬೆಳಕು ಲಕ್ಷ್ಮಣನ ಇಡೀ ಜೀವನವನ್ನು ಬೆಳಗಿದೆ. ಲಕ್ಷ್ಮಣನ ಸಾಧನೆಯ

ಹಾದಿಗೆ ಮುನ್ನುಡಿಯನ್ನು ಬರೆದವರು ಅವರೇ. ಒಂದು ರೀತಿಯ ವಿಲಕ್ಷಣ ವ್ಯಕ್ತಿತ್ವ ಜೊತೆಗೆ, ಅದ್ಭುತ ಪ್ರತಿಭೆ ಎರಡೂ ಅವರಲ್ಲಿದೆ. ಅನಂತಾಚಾರ್ಯರ ಮಾತುಗಳಿಂದ ಅವರ ಸ್ವಭಾವವ ಪರಿಚಯವಾಗುತ್ತದೆ.

ಅವರ ಪ್ರತಿಭೆ ಸಮುದ್ರದಂತೆ ವಿಶಾಲ, ಅಷ್ಟೇ ಆಳವಾದುದು. ಆದರೆ ಮನಸ್ಸು ಬಂದಾಗ ಮಾತ್ರವೇ ಹಾಡುವುದು. ಹಕ್ಕಿಯಂತಹ ಜೀವನ. ಅವರು ಲಕ್ಷ್ಮಣನ ಕಲೆಗೆ ಪ್ರಥಮ ಮೆಟ್ಟಿಲಾಗಿ ನಿಲ್ಲುತ್ತಾರೆ. ಕೃತಿಯಲ್ಲಿ ಈ ಪಾತ್ರ ಬರುವುದು ಕೇವಲ ಒಂದೇ ಪ್ರಸಂಗದಲ್ಲಿ ಆದರೆ ಆ ಪಾತ್ರದ ಪ್ರಭಾವ ಕೃತಿಯ ಉದ್ದಕ್ಕೂ ಕಂಡು ಬರುತ್ತದೆ.

ಒಮ್ಮೆ ಊರಿನಲ್ಲಿ ಭಜನೆ ನಡೆಯುತ್ತಿರುವ ಸಂದರ್ಭ ಮುಳಬಾಗಿಲ ಚೆನ್ನಪ್ಪನವರ ಆಗಮನವಾಗುತ್ತದೆ. ಅವರ ಬಹಿರಂಗ ಸ್ವರೂಪವನ್ನು ನೋಡಿ ಹುಚ್ಚನೆಂದು ಭಾವಿಸುವ ಜನರಿಗೆ ಅವರ ಅಂತರಂಗ ಸ್ವರೂಪದ ದರ್ಶನವಾಗುತ್ತದೆ. ಅವರ ಮಾತುಗಳಲ್ಲಿ ಜಾನಪದ ಸೊಗಡಿದೆ, ಸೊಗಸಾದ ಸಂಗೀತ ವಿದ್ಯೆ ಅವರಿಗೆ ಒಲಿದಿದೆ. ಅವರು ಹಾಡುವ ಪೂರ್ವೀರಾಗವಂತೂ  ಲಕ್ಷ್ಮಣನ ಮೇಲೆ ಗಾಢವಾದ ಪ್ರಭಾವ ಬೀರುತ್ತದೆ.

**"ಮಗಾ, ಚಂದಾಕಿ ಶಾರದಮ್ನೋರ ಸೇವೆ ಮಾಡು. ನಿನ್ನ ವಾಣೇಲಿ ತಾಯಿ ಬೀಜಾಕ್ಷರ ಬರದವ್ಳೆ. ನಾನು ಸಂಗೀತ ಕಲಿಯೋಕೆ ಒಂದು ಜೀವಾನ ತೇದಿದ್ದೀನಿ. ಅದರ ಓನಾಮ ಕೂಡ ನಂಗೆ ಗೊತ್ತಾಗಿಲ್ಲ. ನೀನು ಕಲಿಯೋಕೆ ಉಟ್ಟಿಲ್ಲ ಅಪ್ಪಯ್ಯಾ – ಕಲ್ನೋಕೆ"**[೧].

ಇಷ್ಟು ಹೇಳಿ ಮಾಯವಾಗಿಬಿಡುತ್ತಾರೆ ಚೆನ್ನಪ್ಪನವರು. ಮತ್ತೆ ಯಾರಿಗೂ ಅವರ ದರ್ಶನ ದೊರೆಯುವುದಿಲ್ಲ. ಕೃತಿಯಲ್ಲಿ ಎಲ್ಲಿಯೂ ಅವರು ಮತ್ತೆ ಕಾಣಿಸುವುದಿಲ್ಲ. ಆದರೆ ಲಕ್ಷ್ಮಣನ ಬದುಕಿನಲ್ಲಿ ಹೆಜ್ಜೆ – ಹೆಜ್ಜೆಗೂ ಅವರು ಸ್ಫೂರ್ತಿ ನೀಡುತ್ತಾರೆ. ಚೆನ್ನಪ್ಪನವರು ಹಾಡಿದ ಪೂರ್ವೀ ಲಕ್ಷ್ಮಣನ ಮನಸ್ಸನ್ನು ಬೆರೆಯುತ್ತದೆ. ಅವರು ಹಾಡಿದ ರೀತಿಯಲ್ಲಿಯೇ ತಾನು ಎಂದಾದರೊಂದು ದಿನ ಹಾಡಬೇಕೆಂಬುದು ಅವನ ದೃಢ ನಿರ್ಧಾರವಾಗುತ್ತದೆ. ಜೀವನದಲ್ಲಿ ಒಮ್ಮೆಯಾದರೂ ಅವರನ್ನು ಕಾಣಬೇಕೆಂದು ತಹತಹಿಸುತ್ತಾನೆ. ಅಲ್ಪಕಾಲದಲ್ಲಿಯೇ ಲಕ್ಷ್ಮಣನ ಮನಸ್ಸನ್ನು ಅಲ್ಲೋಲ ಕಲ್ಲೋಲ ಮಾಡಿದ ವ್ಯಕ್ತಿತ್ವ ಅವರದು.

ಲಕ್ಷ್ಮಣನ ಬದುಕಿನಲ್ಲಿ ಈ ಮೂರೂ ಜನ ಗುರುಗಳ ಪಾತ್ರ ಹಿರಿದಾದುದು. ಮುಖ್ಯವಾಗಿ ಪೂರ್ವೀರಾಗ ಅವನ ಉಸಿರಾಗಲು, ಅದರ ಹಾದಿಯಲ್ಲಿ ಮುನ್ನಡೆಯಲು, ಒಬ್ಬೊಬ್ಬ ಗುರುಗಳೂ ಒಂದೊಂದು ಸಾಧನೆಯ ಸೋಪಾನವಾಗುತ್ತಾರೆ. ಆರಂಭದ ಹಂತದಲ್ಲಿ ಚೆನ್ನಪ್ಪನವರು, ಅನಂತರ ಒಂದು ಸ್ಪಷ್ಟವಾದ ಹಾದಿಯನ್ನು ತೋರುವಲ್ಲಿ ಅನಂತಾಚಾರ್ಯರು, ಮುಂದೆ ಆ ಕಲಾಮಾರ್ಗ ಪೂರ್ಣಗೊಳ್ಳುವಲ್ಲಿ ಪೂರ್ವೀ ಕೃಷ್ಣಯ್ಯನವರು ಸಾಧನವಾಗಿದ್ದಾರೆ. ಲಕ್ಷ್ಮಣನ ಸಂಗೀತ ಸಿದ್ಧಿಯಲ್ಲಿ ಮೂರು ಹಂತಗಳು ಸ್ಪಷ್ಟವಾಗಿದ್ದು, ಒಂದೊಂದು ಹಂತಕ್ಕೂ ಒಬ್ಬೊಬ್ಬ ಗುರುಗಳು ಪ್ರತೀಕದಂತಿದ್ದಾರೆ.

---

೧. 'ಸಂಧ್ಯಾರಾಗ' – ಅ.ನ.ಕೃ. – ಪು. ೨೬

ಕಾದಂಬರಿಯಲ್ಲಿ ಸ್ವಾರಸ್ಯ ಹೆಚ್ಚುವುದು ಶ್ರೀನಿವಾಸರಾಯರ ಗೆಳೆಯರಿಂದ ಇವು ಲವಲವಿಕೆಯಿಂದ ಓದಿಸಿಕೊಳ್ಳುವ ಪಾತ್ರಗಳಾಗಿವೆ. ಭೀಮರಾಯರು, ಸುಂದರರಾಯರು, ಶ್ರೀನಿವಾಸರಾಯರ ಗೆಳೆತನ ಬೇಸರ ನೀಗಿಸುತ್ತದೆ. ಜೀವನ ಸಂಧ್ಯಾಕಾಲದಲ್ಲೂ ಅವರಲ್ಲಿರುವ ಜೀವನೋತ್ಸಾಹ, ಪ್ರತಿಯೊಂದು ವಿಷಯದಲ್ಲೂ ಇರುವ ಶಿಸ್ತು, ಅಚ್ಚುಕಟ್ಟುತನ, ಹಾಲು-ಸಕ್ಕರೆಯಂತೆ ಬೆರೆಯುವ ಸಾಮರಸ್ಯ - ಇವೆಲ್ಲಾ ಬಹಳ ಸಣ್ಣ-ಪುಟ್ಟ ಸಂಗತಿಗಳಾದರೂ ಅಲಕ್ಷಿಸುವಂತದ್ದಲ್ಲ.

ಭೀಮರಾಯರು ವಿಶಾಲ ದೃಷ್ಟಿಯವರು, ಸಾಹಿತ್ಯ-ಸಂಗೀತದಲ್ಲಿ ಅಭಿರುಚಿ ಉಳ್ಳವರು, ಸುಂದರರಾಯರು ನಿವೃತ್ತ ವಕೀಲರು. ಇವರೊಂದಿಗೆ ಶ್ರೀನಿವಾಸರಾಯರದ್ದು ಅನ್ಯೋನ್ಯ ಗೆಳೆತನ. ಈ ಮೂವರ ಚರ್ಚೆ, ವಾಗ್ವಾದಗಳು, ಬಾಯಿಚಪಲ, ವಿಚಾರವಿನಿಯಮದಂತಹ ಸಂಗತಿಗಳು ಓದುಗರಿಗೆ ಕಚಗುಳಿಯಿಡುತ್ತವೆ. ಅವರ ಚರ್ಚೆಯಲ್ಲಿ ಪ್ರಸ್ತಾಪವಾಗದ ವಿಷಯವೇ ಇಲ್ಲ. ಈ ವೃದ್ಧರ ಅಪರೂಪದ ಸ್ನೇಹ, ಅವಿನಾಭಾವ ಸಂಬಂಧ, ಸುಖ-ದುಃಖಗಳ ಸಮಭಾಗಿತ್ವ ಮನಸ್ಸಿಗೆ ಮುದ ನೀಡುತ್ತವೆ. ಆದರೆ ಇಲ್ಲಿ ಗಮನಾರ್ಹ ಸಂಗತಿಯೆಂದರೆ, ಈ ಪಾತ್ರಗಳ ಮೂಲಕ ಲೇಖಕರ ಮುಖ್ಯ ಅಭಿವ್ಯಕ್ತಿಯಿದೆ. ಒಂದು ಕಾಲದ ಕಲಾವಿದರ ಪರಿಸ್ಥಿತಿ, ಸಂಗೀತ ಕಛೇರಿಗಳ ಸ್ಥಿತಿಗತಿ ಈ ಪಾತ್ರಗಳ ಮೂಲಕ ಸೂಕ್ಷ್ಮವಾಗಿ ವಿವರಿಸಲ್ಪಟ್ಟಿವೆ.

ಆಗ ಮೈಸೂರಿನ ತುಂಬಾ ಸಂಗೀತಗಾರರಿದ್ದರು, ಅವರಿಗೆ ಯಾವ ಪ್ರೋತ್ಸಾಹವೂ ಇರಲಿಲ್ಲ. ಕಛೇರಿಗಳಿಗೆ ಯಾವ ಅವಕಾಶವೂ ದೊರೆಯುತ್ತಿರಲಿಲ್ಲ, 'ಹಿತ್ತಲ ಗಿಡ ಮದ್ದಲ್ಲ' ಎಂಬ ಭಾವನೆಯಿಂದ ನಮ್ಮವರೇ ನಮ್ಮ ಸಂಗೀತಕ್ಕೆ ಪ್ರೋತ್ಸಾಹ ನೀಡುತ್ತಿರಲಿಲ್ಲ. ಇದು ಅಂದಿನ ಸಂಗೀತಗಾರರ ಪರಿಸ್ಥಿತಿಯನ್ನು ಲೇಖಕರು ಭೀಮರಾಯರು ಪಾತ್ರದ ಮೂಲಕ ತಿಳಿಸುವ ರೀತಿ. ಇವಕ್ಕೆ ನಿಜವಾದ ಕಾರಣವೇನೆಂಬುದನ್ನು ಲೇಖಕರು ಇಲ್ಲಿ ತಿಳಿಸಿದ್ದಾರೆ.

ನಮ್ಮ ಜನಕ್ಕೆ ಅಭಿಮಾನವಿಲ್ಲ, ಹೊರಗಿನಿಂದ ಬಂದವರಿಗೇ ಮನ್ನಣೆ ನೀಡುವಂತಹ ಮನಸ್ಥಿತಿ. ಇದೇ ನಮ್ಮ ಸಂಗೀತಗಾರರಿಗೆ ಅಗತ್ಯವಾದ ಗೌರವ - ಸ್ಥಾನಮಾನಗಳು ದೊರೆಯದೆ ಇರಲು ಕಾರಣವಾಗಿದೆ. - ಇವು ಭೀಮರಾಯರು ಮತ್ತು ಸುಂದರರಾಯರ ಪಾತ್ರಗಳ ಮೂಲಕ ಲೇಖಕರು ತೆರೆದಿಟ್ಟ ಅಂದಿನ ವಾತಾವರಣ. 'ಸಂಧ್ಯಾರಾಗ' ಒಬ್ಬ ಕಲಾವಿದನ ಬದುಕಿಗೆ ಸಂಬಂಧಿಸಿದ ಕಥಾವಸ್ತುವಾದ್ದರಿಂದ, ಇಂತಹ ಅಭಿವ್ಯಕ್ತಿ, ಸಹಜವಾಗಿ ಕತೆಯೊಳಗೆ ಬಂದಿವೆ. ಇಂತಹ ವಾಸ್ತವ ಸಂಗತಿಯನ್ನು ತೆರೆದಿಡಲು, ಭೀಮರಾಯರು - ಸುಂದರರಾಯರಂತಹ ಘನ ಪಾತ್ರಗಳನ್ನೇ ಆಯ್ದುಕೊಂಡಿರುವುದು ಲೇಖಕರ ಜಾಣ್ಮೆ.

ಇವುಗಳ ನಡುವೆ ಅಂದಿನ ಮಠಾಧಿಪತಿಗಳ ಅತಿರೇಕ, ಭ್ರಷ್ಟಾಚಾರ, ಶ್ರೀಮಂತರ ವರ್ತನೆಗಳು - ಇಂತಹ ಹಲವು ವಿಚಾರಗಳು ಹಾಗೂ ಅವುಗಳ ಬಗ್ಗೆ ಲೇಖಕರ ಧೋರಣೆ ಇವೆಲ್ಲವು ಸುಂದರರಾಯರು ಮತ್ತು ಭೀಮರಾಯರ ಪಾತ್ರಗಳ ಮೂಲಕ ಹಾದುಹೋಗಿವೆ. ಆದರೆ ಇವೆಲ್ಲವನ್ನೂ ಮೀರಿ, ಓದುಗರ ಮನಸ್ಸಿಗೆ ಓತವನ್ನುಂಟುಮಾಡುವುದು, ಈ ಪಾತ್ರಗಳ ಅಸ್ತಿತ್ವ, ಸ್ನೇಹ - ಸಂಬಂಧ ಹಾಗೂ ಜೀವನ ಪ್ರೀತಿ. ಅಲ್ಪ ಸಮಯದಲ್ಲಿಯೇ ಇವು ನಮ್ಮ ಮನಸ್ಸನ್ನಾವರಿಸುವ ಪಾತ್ರಗಳಾಗಿರುವುದರಲ್ಲಿ ಆಶ್ಚರ್ಯವಿಲ್ಲ.

ಲಕ್ಷ್ಮಣನ ಬದುಕನ್ನು ಹೊಸರೀತಿಯಿಂದ ಆರಂಭಮಾಡಿದವರು ಡಾಕ್ಟರ್ ಕುಟುಂಬ – ಅವರ ಔದಾರ್ಯಕ್ಕಂತೂ ಇಲ್ಲಿ ಎಣೆಯಿಲ್ಲ. ಹೊರನಾಡಿನಲ್ಲೇ ಆಗಲಿ ಅಥವಾ ಇನ್ನಾವುದೇ ಸ್ಥಳವಾಗಲೀ, ಕನ್ನಡಿಗರು ಇತರರೊಂದಿಗೆ ಎಷ್ಟು ಸಹೃದಯತೆಯಿಂದ ವರ್ತಿಸಬಲ್ಲರು ಎಂಬುದಕ್ಕೆ ಇಲ್ಲಿ ಒಂದು ಸಣ್ಣ ಪಾತ್ರವನ್ನು ತರಲಾಗಿದೆ. ಈ ಸಣ್ಣ ಪಾತ್ರದಲ್ಲಿಯೇ ಎಲ್ಲಾ ಆದರ–ಅಭಿಮಾನಗಳನ್ನು ಲೇಖಕರು ತುಂಬಿಬಿಟ್ಟಿದ್ದಾರೆ. ಅಂತೆಯೇ ಡಾಕ್ಟರು ಲಕ್ಷ್ಮಣನ ಆತ್ಮ–ದೇಹ ಎರಡನ್ನೂ ಉಳಿಸಿ, ನಿಂತುಹೋಗಿದ್ದ ಅವನ ಬದುಕಿಗೆ ಚಾಲನೆ ನೀಡುತ್ತಾರೆ.

ವೀಣೆ ಶೇಷಣ್ಣನವರು, ಪಾಲಘಾಟಿನ ವಿದ್ವಾಂಸ ವೆಂಕಟರಾಮ ಭಾಗವತರ ಮೊದಲಾದ ದೊಡ್ಡ–ದೊಡ್ಡ ಹೆಸರುಗಳು ಇಲ್ಲಿ ಬರುವುದಾದರೂ, ಅವರುಗಳು ಕೃತಿಯ ಮುಖ್ಯ ಪಾತ್ರಗಳಾಗಿರದೆ ಲಕ್ಷ್ಮಣನ ಸಂಗೀತ ವಿಭೂತಿಗೆ ಸಾಕ್ಷಿಯಾಗಿ ನಿಲ್ಲುತ್ತಾರೆ. ಭಾಗವತರು ಅದ್ಭುತ, ಅಸಾಮಾನ್ಯ ವಿದ್ವಾಂಸರಂತೆ ಕಂಡುಬರುತ್ತಾರಾದರೂ ಅಗತ್ಯಕ್ಕಿಂತ ಹೆಚ್ಚಿನ ಅಹಂಕಾರ – ಪ್ರತಿಷ್ಠೆಗಳನ್ನು ಅವರ ಪಾತ್ರಕ್ಕೆ ಆರೋಪಿಸಲಾಗಿದೆ. ಕಾರಣ ಇಷ್ಟೇ, ಅವರ ಪ್ರತಿಷ್ಠೆ ಅಹಂಕಾರಗಳನ್ನು ಲಕ್ಷ್ಮಣ ತನ್ನ ವಿನಯದಿಂದ ಮುರಿದು, ಅವರನ್ನು ತನ್ನ ವಿದ್ವತ್ತಿನಿಂದ ಸೋಲಿಸುವುದು, ಈ ಪಾತ್ರಚಿತ್ರಣದ ಉದ್ದೇಶ. ಲಕ್ಷ್ಮಣನ ಕಲಾಪರಿಣಿತಿ ಎಷ್ಟು ಉನ್ನತ ಮಟ್ಟದಲ್ಲಿತ್ತು ಎಂಬುದನ್ನು ತೋರಿಸುವುದಕ್ಕಾಗಿ ಸ್ವಲ್ಪಮಟ್ಟಿಗೆ ಕೃತಕವೇ ಎನಿಸುವಂತಹ ಈ ಪಾತ್ರವನ್ನು ಲೇಖಕರು ಸೃಷ್ಟಿಸಿದ್ದಾರೆ. ವೀಣೆ ಶೇಷಣ್ಣ ನಂತರಹವರು, ಲಕ್ಷ್ಮಣನ ಸಾಧನೆಯನ್ನು ನೋಡಿ – ಇದು ನನ್ನ ಜೀವನದ ಪರಮಸುಖದ ದಿನ ಎಂದು ಹೇಳಿ ನಿರ್ಗಮಿಸುತ್ತಾರೆ. ವೀಣೆ ಶೇಷಣ್ಣನವರಾಗಲೀ, ಪಾಲಘಾಟಿನ ಭಾಗವತರಾಗಲೀ, ಲಕ್ಷ್ಮಣನ ಸಂಗೀತವನ್ನು ವೈಭವೀಕರಿಸುವ ಪಾತ್ರಗಳಾಗುತ್ತವೆಯೇ ಹೊರತು, ತಮ್ಮ ನಿಜವಾದ ವ್ಯಕ್ತಿತ್ವ ಸ್ವಭಾವಗಳನ್ನು ಪ್ರಕಟಗೊಳಿಸುವುದಿಲ್ಲ.

ಇರುವುದರಲ್ಲಿ ತನ್ನ ಹಿತ–ಮಿತವಾದ ಚಿತ್ರಣದಿಂದ ಮನಸ್ಸನ್ನು ಗೆದ್ದುಕೊಳ್ಳುವುದು ಹೊಲೆಯ ರೈತರ ಪಾತ್ರಗಳು. ಇಂತಹ ಪಾತ್ರಗಳು ಕೆಲವೇ ಆದರೂ ಸತ್ವಯುತವಾಗಿವೆ. ಮೇಲು–ಕೀಳುಗಳೆಂಬ ಕೊಳಕು ಭಾವನೆಗಳಿಲ್ಲದ ನಿರ್ಮಲವಾದ ಒಡೆಯ – ಹೊಲೆಯರ ಸಂಬಂಧವನ್ನು ಈ ಪಾತ್ರಗಳ ಮೂಲಕ ಅರಿಯಬಹುದು. ಮೀನಾಕ್ಷಮ್ಮನವರನ್ನು ಹಳ್ಳಿಯಿಂದ ಬೀಳ್ಕೊಡುವ ಸಂದರ್ಭದಲ್ಲಾಗಲೀ, ಅವರು ಮತ್ತೆ ಹಳ್ಳಿಗೆ ಬರುವಾಗ ಅವರನ್ನು ಸ್ವಾಗತಿಸುವಾಗ ಆಗಲೀ, ಅವರ ವರ್ತನೆಗಳು ಮನತುಂಬುತ್ತದೆ. ಓದುಗರನ್ನೂ ಸಹ ಭಾವಪರವಶರನ್ನಾಗಿಸಿ ಕಣ್ಣು – ಮನಸ್ಸುಗಳೆರಡನ್ನು ತೊಳೆಯುತ್ತವೆ.

**"ಬಾಯಿ ತುಂಬಾ ಅರಸು ನಮ್ಮವ್ವಾ!"**

**"ಬೇಗ, ನಮ್ಮೂರಿಗೆ ಬಂದುಬಿಡು ಮೀನವ್ವಾ, ನಿನ್ನ ಬಡ ಮಕ್ಕಳ್ನ ತಬ್ಲಿ ಮಾಡಿ ಓಗ್ಬಿಡ್ಬೇಡ".** (ಸಂಧ್ಯಾರಾಗ – ಪು.ಸಂ. ೨೯)

**"ನಮ್ಮಮ್ಮಾವ್ರು ಆಫೀಸರುಗಳ ಆಫೀಸರು; ನಮ್ಮೂರಲಸ್ಮಿ ಅವರಿಗಿಂತ ಎಚ್ಚು ನಮ್ಕೆ ಯಾರವರೆ".** (ಪು.ಸಂ. ೭೭)

ಇಂತಹ ಮಾತುಗಳು ಹಳ್ಳಿಯವರ ಮುಗ್ಧಮನಸ್ಸು, ಅಗಾಧ ಪ್ರೇಮವನ್ನು ಮನವರಿಕೆ ಮಾಡಿಕೊಡುವುದಲ್ಲದೇ, ಮೀನಾಕ್ಷಮ್ಮನವರ ವ್ಯಕ್ತಿತ್ವಕ್ಕೂ ಕನ್ನಡಿ ಹಿಡಿದಿವೆ. ಇಂತಹ ಕೆಲವು ಪಾತ್ರಗಳು ಸೂಕ್ಷ್ಮವಾಗಿ ಆದರೆ ಸಮಗ್ರವಾಗಿ ಚಿತ್ರಿತವಾಗಿದೆ. ಇವು ಒಂದೊಂದೂ ವ್ಯಕ್ತಿಗಳ ಚಿತ್ರಮಾಲೆ, ಲೇಖಕರ ಪಾತ್ರಕೌಶಲಕ್ಕೆ ನಿದರ್ಶನ.

ಹೀಗೆ 'ಸಂಧ್ಯಾರಾಗ' ವನ್ನು ಹಲವಾರು ಪಾತ್ರಗಳು ಮುನ್ನಡೆಸಿವೆ. ಆದರೆ ಇವುಗಳ ಗುಣ-ಸ್ವಭಾವಗಳಲ್ಲಿ ವೈವಿಧ್ಯತೆ ಕಾಣುವುದು ಸಾಧ್ಯವಿಲ್ಲ. ಎಲ್ಲವೂ ಏಕಮುಖವೂ, ಏಕಗ್ರೀವವೂ ಆಗಿ ಗೋಚರಿಸುತ್ತವೆ. ಸ್ತ್ರೀ ಪಾತ್ರಗಳೇ ಆಗಲಿ, ಪುರುಷ ಪಾತ್ರಗಳೇ ಆಗಲಿ, ಅವುಗಳ ವ್ಯಕ್ತಿತ್ವದಲ್ಲಿ ಹೆಚ್ಚು ಅಂತರವಿಲ್ಲ. ರಾಮಚಂದ್ರ ಹಾಗೂ ಪದ್ಮಳ ಪಾತ್ರಗಳನ್ನು ಬಿಟ್ಟರೆ ಉಳಿದ ಎಲ್ಲಾ ಪಾತ್ರಗಳು ಒಂದೇ ನೆಲೆಯಲ್ಲಿ ಗೋಚರಿಸುತ್ತವೆ. ಒಳ್ಳೆಯತನ, ಆದರ್ಶಗಳನ್ನು ಸುಲಭವಾಗಿ ಸಾಧಿಸಿವೆ. ಇಲ್ಲಿ ಯಾರಲ್ಲೂ ಸಂಕೀರ್ಣ ವ್ಯಕ್ತಿತ್ವ ಕಂಡುಬರುವುದಿಲ್ಲ. ಇದಕ್ಕೆ ಕಾದಂಬರಿಯ ನಾಯಕ ಲಕ್ಷ್ಮಣನೇ ಉತ್ತಮ ನಿದರ್ಶನ. ಅವನ ಕಲಾಸಾಧನೆಯ ಹಾದಿ ಕ್ಲಿಷ್ಟಕರವಲ್ಲ. ಅವನ ಸಾಧನೆ, ಅವನ ಕಲಾವಿದ ವ್ಯಕ್ತಿತ್ವ ಎಲ್ಲವೂ ಬಹಳ ಸರಳ. ಹಂತದಿಂದ ಹಂತಕ್ಕೆ ಆತ ಬೆಳೆಯುತ್ತಾ ಹೋಗುವುದಿಲ್ಲ. ಪೂರ್ಣತೆಯಲ್ಲಿಯೇ ಜನಿಸಿ, ಅದರ ಒಂದೊಂದು ಪಂಕ್ತಿಯನ್ನು ತಾಕುತ್ತಾ ಹೋಗುತ್ತಾನೆ. ಕಲಾವಿದನಾಗಿ ಆತ ಯಶಸ್ಸು ಪಡೆದಿದ್ದು ಎಷ್ಟು ಸ್ಪಷ್ಟವೋ, ವ್ಯಕ್ತಿಯಾಗಿ ಸೊತದ್ದೂ ಜಯಾಳ ಮರಣದಿಂದ ಅಷ್ಟೇ ಸ್ಪಷ್ಟವಿದೆ. ಆದರೆ ಅವನ ಈ ವ್ಯಕ್ತಿತ್ವದೆಡೆಗೆ ಕಾದಂಬರಿ ಲಕ್ಷ್ಯ ಹರಿಸಿಲ್ಲ.

ಅದೇ ರೀತಿ ರಾಮಚಂದ್ರನ ಪಾತ್ರವಂತೂ ಔಚಿತ್ಯದ ಗೆರೆ ದಾಟಿದೆ. ಅವನ ಕೆಟ್ಟ ವರ್ತನೆಗಳನ್ನು ಪ್ರತಿಯೊಂದು ಸನ್ನಿವೇಶದಲ್ಲೂ ಇನ್ನಿಲ್ಲದಂತೆ ಚಿತ್ರಿಸಲಾಗಿದೆ. ಎಷ್ಟೇ ಕೆಟ್ಟವರಾದರೂ ಅವರಲ್ಲಿ – ಸ್ವಲ್ಪವಾದರೂ ಮಾರ್ದವತೆ ಇರುವುದಿಲ್ಲವೇ? ಅವನ ಪಾತ್ರವಂತೂ ಮೇರೆ ಮೀರಿದೆ. ಸ್ವಲ್ಪವಾದರೂ ಸಹಜತೆಯನ್ನು ಪಡೆದುಕೊಂಡಿಲ್ಲ. ಜಗತ್ತಿನ ಎಲ್ಲಾ ಕೆಟ್ಟತನಗಳೂ ಅವನಲ್ಲೇ ಏಕೀಭವಿಸಿರುವಂತೆ ತೋರುತ್ತಾನೆ. ಒಂದು ಅತೀ ಒಳ್ಳೆಯತನ ಇಲ್ಲವೇ ಅತೀ ಕೆಟ್ಟತನ ಎಂಬ ಸರಳಗುಣಗಳು ಇಲ್ಲಿನ ಪಾತ್ರಚಿತ್ರಣದಲ್ಲಿ ಹಾಸುಹೊಕ್ಕಾಗಿದೆ.

ಮುಖ್ಯವಾಗಿ ಇಲ್ಲಿ ಯಾವುದೇ ವೈಚಾರಿಕ ಪಾತ್ರಗಳಿಲ್ಲ. ಭಾವುಕತೆ ಪ್ರತಿಯೊಂದು ಪಾತ್ರಗಳಲ್ಲೂ ತುಂಬಿತುಳುಕಿದೆ. ವ್ಯಕ್ತಿಯ ಇತಿ-ಮಿತಿಗಳು, ಸಹಜ ದೌರ್ಬಲ್ಯಗಳಿಗೆ ಇಲ್ಲಿ ಆಸ್ಪದವಿಲ್ಲ. ತಮ್ಮ ವರ್ತನೆ, ಸ್ವಭಾವ, ಗುಣಗಳಲ್ಲಿ ಪಾತ್ರಗಳು ಅತ್ಯುನ್ನತ ಮಟ್ಟದಲ್ಲಿವೆ. ಒಂದು ರೀತಿಯ ಆದರ್ಶಮಯವಾದ ಸ್ಥಿತಿಯನ್ನು ತಲುಪಿವೆ. ಜೀವನಕಲೆಯನ್ನು ಯಶಸ್ವಿಯಾಗಿ ಸಾಧಿಸಿವೆ. ಈ ಅತೀ ಆದರ್ಶದಿಂದಾಗಿ ವಾಸ್ತವಿಕತೆ, ಸಹಜತೆಗಳು ಪೂರ್ಣವಾಗಿ ಅಲ್ಲದಿದ್ದರೂ ಸ್ವಲ್ಪಮಟ್ಟಿಗೆ ಮಸುಕಾಗಿವೆ. ವಿಶೇಷವೆಂದರೆ ಇಲ್ಲಿ ಬರುವ ಭಾಗಶಃ ಸಣ್ಣಪುಟ್ಟ ಪಾತ್ರಗಳೂ ಸಂಗೀತದಲ್ಲಿ ಅಭಿರುಚಿಉಳ್ಳ ಇಲ್ಲವೇ ಸಂಗೀತದಲ್ಲಿ ಪರಿಣಿತಿ ಪಡೆದ ಪಾತ್ರಗಳೇ ಆಗಿವೆ. ಅದೇ ಕಾರಣಕ್ಕಾಗಿ ಲಕ್ಷ್ಮಣನ ಸಂಗೀತ ಸಿದ್ಧಿಯಲ್ಲಿ ಒಂದೊಂದು ಪಾತ್ರವೂ ತನ್ನ ಕೈಲಾದ ಮಟ್ಟಿಗೆ ಕೊಡುಗೆ ನೀಡಿವೆ.

**"ಇಲ್ಲಿಯ ಪಾತ್ರಗಳು ಕೆಲವು ಗುಣಗಳ ಪ್ರತಿನಿಧಿಗಳಾಗಿರುವುದರಿಂದ ಆ ಮಟ್ಟಿಗೆ ತಮ್ಮ ಕೆಲಸ ಮಾಡಿ ಕೈ ತೊಳೆದುಕೊಳ್ಳುತ್ತವೆ. ಅತಿ – ಆದರ್ಶವಾದಿತ್ವ ಸಕ್ಕರೆಯ ಪಾಕದಂತೆ ಮೆತ್ತಿಕೊಂಡಿರುವುದರಿಂದ ಈ ಪಾತ್ರಗಳು ಕನಸಿನಲ್ಲಿಯಂತೆ ವರ್ತಿಸುತ್ತವೆ"**[೧].

ಎಂಬ ಮಾತುಗಳು ಸಂಧ್ಯಾರಾಗದ ಪಾತ್ರಚಿತ್ರಣವನ್ನು ಬಹಳ ಸೂಕ್ತವಾಗಿ ಹಿಡಿದಿಟ್ಟಿವೆ. ಇಲ್ಲಿನ ಪಾತ್ರಚಿತ್ರಣದಲ್ಲಿ ಭಾವನಾತ್ಮಕತೆ ಹೆಚ್ಚಾಗಿರುವುದರಿಂದ ಒಂದು ರೀತಿಯ ಸುಲಭತೆ ಲೇಖಕರಿಗೆ ಒದಗಿದೆ ಎಂದರೆ ತಪ್ಪಿಲ್ಲ. ಸಂಕೀರ್ಣತೆ, ಸಂಘರ್ಷ, ಜಿಜ್ಞಾಸೆಗಳು ಇಲ್ಲಿನ ಪಾತ್ರಗಳ ಬೌದ್ಧಿಕತೆಯಲ್ಲಿ ಬೆರೆತಿದ್ದರೆ, ಅವು ಇನ್ನಷ್ಟು ಹದವಾಗಿ ಮೂಡಿಬರಲು ಅವಕಾಶವಿತ್ತು. ಪಾತ್ರಗಳು ಹೇಗೆ ಸಂಖ್ಯೆಯಲ್ಲಿ ಅಪಾರವಾಗಿವೆಯೋ ಅದೇ ರೀತಿ ಅವುಗಳ ಗುಣಗಳಲ್ಲಿಯೂ ವೈವಿಧ್ಯತೆ – ವಿಭಿನ್ನತೆಗಳಿದಿದ್ದರೆ, ಅವುಗಳ ಸತ್ವ ಹೆಚ್ಚುತ್ತಿತ್ತು. ಇಲ್ಲಿನ ಯಾವ ಪಾತ್ರಗಳೂ ಓದುಗರ ಬೌದ್ಧಿಕತೆಯನ್ನು, ವೈಚಾರಿಕತೆಯನ್ನು ಒರೆಗೆ ಹಚ್ಚುವುದಿಲ್ಲ, ಬದಲಾಗಿ ನಮ್ಮನ್ನು ಭಾವನಾ ಪರವಶತೆಯಲ್ಲಿ ಮುಳುಗೇಳುವಂತೆ ಮಾಡುತ್ತವೆ. ಆದಾಗ್ಯೂ ಇಲ್ಲಿನ ಅತ್ತಿಗೆ – ನಾದಿನಿ, ಓರಗಿತ್ತಿ, ಸವತಿಯ ಸಂಬಂಧಗಳ ಬಗ್ಗೆ ಒಂದು ಆದರ್ಶ ಪರಿಕಲ್ಪನೆಯನ್ನು ಮೂಡಿಸಿರುವ ಪಾತ್ರಗಳು ಸ್ವೀಕೃತವೆನಿಸುತ್ತವೆ.

****

೧. 'ರಸಚೇತನ' – 'ವಾಸ್ತವಮಾರ್ಗ' ಅ.ನ.ಕೃ. – ಕೆ.ಡಿ. ಕುರ್ತಕೋಟಿ – ಪು.ಸಂ. ೫೦೫

ಅಧ್ಯಾಯ – ೬

# 'ಸುಬ್ಬಣ್ಣ'–'ಸಂಧ್ಯಾರಾಗ'–ತೌಲನಿಕ ಅಧ್ಯಯನ

ಈ ಹಿಂದಿನ ಅಧ್ಯಾಯಗಳಲ್ಲಿ 'ಸುಬ್ಬಣ್ಣ' 'ಸಂಧ್ಯಾರಾಗ' – ಕಾದಂಬರಿಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಅಧ್ಯಯನ ಮಾಡಲಾಗಿದೆ. ಪ್ರಸ್ತುತ ಈ ಅಧ್ಯಾಯದಲ್ಲಿ ಎರಡೂ ಕಾದಂಬರಿಗಳಲ್ಲಿ ಕಂಡುಬರುವ ಸಾಮ್ಯತೆ, ಭಿನ್ನತೆಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಯಾವುದೇ ಕೃತಿಯ ಶ್ರೇಷ್ಠತೆ, ಅಂತಃಸತ್ವ, ವಿಶಿಷ್ಟತೆಗಳನ್ನು ಅರಿಯಬೇಕಾದರೆ, ಅದೇ ಹಿನ್ನಲೆ–ವಿನ್ಯಾಸದ ಮತ್ತೊಂದು ಕೃತಿಯೊಡನೆ ಸಮೀಕರಿಸಿ ನೋಡಬೇಕಾಗುತ್ತದೆ. ಆಗಲೇ ಒಂದು ಕೃತಿಯ ನೆಲೆ–ಬೆಲೆಗಳನ್ನು ತಿಳಿಯಲು ಸಾಧ್ಯ. ಈ ಹಿನ್ನಲೆಯಲ್ಲಿ ಈ ಎರಡೂ ಕೃತಿಗಳನ್ನು ವಸ್ತು, ಪಾತ್ರ, ದೃಷ್ಟಿ ಹಾಗೂ ಅಭಿವ್ಯಕ್ತಿಯ ದೃಷ್ಟಿಯಿಂದ ಅಧ್ಯಯನ ಮಾಡಲಾಗಿದೆ. ಇವುಗಳ ವಿವರವಾದ ವಿಶ್ಲೇಷಣೆಯೇ ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

## ಅ. ವಸ್ತುವಿನ ದೃಷ್ಟಿಯಿಂದ :–

ಪ್ರತಿಯೊಂದು ಕೃತಿಯ ಮುಖ್ಯ ತಿರುಳು, ಆ ಕೃತಿಯ ವಸ್ತುವಾಗಿರುತ್ತದೆ. ಲೇಖಕನ ದೃಷ್ಟಿ ಧೋರಣೆಗಳು ವಸ್ತುವಿನಲ್ಲಿ ಅಡಕಗೊಂಡಿದ್ದು, ಪಾತ್ರಗಳು, ಅಭಿವ್ಯಕ್ತಿ, ರಚನಾ ಕ್ರಮಗಳು ಅದನ್ನು ಸ್ಪಷ್ಟಪಡಿಸುತ್ತಾ ಹೋಗುತ್ತವೆ. ಆದ್ದರಿಂದ ಯಾವುದೇ ಕೃತಿಯಲ್ಲಿ ಅದರ ವಸ್ತು, ಅದರ ಮೂಲ ಅಂಶ. ಈ ಹಿನ್ನಲೆಯಲ್ಲಿ 'ಸುಬ್ಬಣ್ಣ' ಮತ್ತು 'ಸಂಧ್ಯಾರಾಗ' ಕೃತಿಗಳ ವಸ್ತು, ಮೇಲು ನೋಟಕ್ಕೆ ಒಂದೇ ಆಗಿ ಕಂಡುಬರುತ್ತದೆ. ಅದು, ಕಲಾವಿದನ ಬದುಕಿಗೆ ಸಂಬಂಧಿಸಿದ ಚಿತ್ರಣ. ಆದರೆ ಈ ಒಂದೇ ರೀತಿಯ ವಸ್ತುವಿನಲ್ಲಿ ಸೂಕ್ಷ್ಮವಾಗಿ ವ್ಯತ್ಯಾಸಗಳೂ ಇರುವುದು ಗಮನಾರ್ಹ.

'ಸುಬ್ಬಣ್ಣ' ಕಾದಂಬರಿಯಲ್ಲಿ ಹೇಳಿಕೊಳ್ಳುವಂತಹ ಕಥಾವಸ್ತುವೇ ಇಲ್ಲ ಎನಿಸಿದರೂ, ಅವರ ನಿಜವಾದ ಸತ್ವ ಅದರ ಅಂತರಂಗದಲ್ಲಿದೆ. 'ಸುಬ್ಬಣ್ಣ' ಒಬ್ಬಕಲಾವಿದ ಆ ಕಲಾವಿದನ ಬದುಕಿನ ಕತೆಯೇ ಇಲ್ಲಿ ವಸ್ತು. ಇಲ್ಲಿ ಮುಖ್ಯವಾಗಿರುವುದು ಸುಬ್ಬಣ್ಣನ ಬದುಕು, ಆತನ ಆತ್ಮೋದ್ಧಾರ. ಆದರೆ ಅದೇ ರೀತಿ ಅವನ ಕಲೆಗೂ ಇಲ್ಲಿ ಮಹತ್ವದ ಸ್ಥಾನ ದೊರೆತಿದೆ. ಸುಬ್ಬಣ್ಣ ತನ್ನ ಆತ್ಮಕೇಂದ್ರಿತ ವ್ಯಕ್ತಿತ್ವದಿಂದ ಬಿಡುಗಡೆ ಹೊಂದಿ, ವಿಶ್ವಕೇಂದ್ರಿತವಾಗುವ ರೀತಿ ಇಲ್ಲಿ ಮುಖ್ಯವಾಗಿದೆ. ಆದರೆ ಈ ಉದ್ಧಾರದ ಹಾದಿಯಲ್ಲಿ, ಅವನ ಸಂಗೀತ ಓತಪ್ರೋತವಾಗಿ ಹರಿದು ಬರುತ್ತದೆ. ಅವನ ಆತ್ಮಸಂಸ್ಕಾರಕ್ಕೆ ಅವನ ಕಲೆ ಪೋಷಕವಾಗಿ ನಿಲ್ಲುತ್ತದೆ. ಜೀವನದ ಹಲವು ಸಂಕಟಗಳು, ಸುಬ್ಬಣ್ಣನ ಮನಸ್ಸು ಒಂದು ಆದರ್ಶ ಸ್ಥಿತಿಯನ್ನು ಮುಟ್ಟಲು ಕಾರಣವಾಗುತ್ತದೆ. ಈ ಕಷ್ಟಪರಂಪರೆ ಒಂದಾದ

ಮೇಲೆ ಒಂದರಂತೆ ಅವನನ್ನು ಆವರಿಸಿ, ಅವನ ಬದುಕಿನ ಬಗೆಗಿನ ಎಲ್ಲಾ ರೀತಿಯ ಭ್ರಮೆಗಳನ್ನು ಕಳಚಿ, ಉನ್ನತ ಸ್ಥಿತಿಯನ್ನು ತಲುಪಲು ಒಂದು ಅನುಕ್ರಮವನ್ನು ನಿರ್ಮಿಸಿವೆ. 'ಸುಬ್ಬಣ್ಣ'ನ ಅಂತಃಸ್ವರೂಪದ ಬೆಳವಣಿಗೆ ಇಲ್ಲಿನ ಮುಖ್ಯ ಕಾಳಜಿ. ಸ್ವಾರ್ಥದಿಂದ ನಿಸ್ವಾರ್ಥದ ಕಡೆಗೆ, ಕಠಿಣತೆಯಿಂದ ಮೃದುತ್ವದ ಕಡೆಗೆ, ಸಂಸಾರದಿಂದ ವಿರಕ್ತಿಯಕಡೆಗೆ ಅಂತೆಯೇ ಜೀವನ ನಿರಾಕರಣೆಯಿಂದ ಅದರ ಸ್ವೀಕರಣೆಯ ಕಡೆಗೆ, ಸುಬ್ಬಣ್ಣನ ಬದುಕಿನ ದಾರಿ ಸಾಗುತ್ತದೆ. ಈ ಹಾದಿಯಲ್ಲಿ 'ಸುಬ್ಬಣ್ಣ'ನ ಸಂಗೀತ ಅವನಿಗೆ ಜ್ಞಾನದ ಮಾರ್ಗವನ್ನು ತೆರೆಯುತ್ತದೆ. ಸುಬ್ಬಣ್ಣನ 'ಜೀವನಯಾತ್ರೆ'ಯೊಂದಿಗೆ ಅವನ 'ಆತ್ಮಯಾತ್ರೆ'ಯೂ ಅವನ ಅರಿವಿಗೇ ಬಾರದಂತೆ ನಡೆಯುತ್ತದೆ. ಜೀವನದ ಅಸಂಗತೆ, ಜಿಜ್ಞಾಸೆಗಳಿಗೆ ವ್ಯಾಖ್ಯಾನ ಕಂಡುಕೊಳ್ಳುವ ಮೂಲಕ ಸುಬ್ಬಣ್ಣನ ಬದುಕು ಹಂತ-ಹಂತವಾಗಿ ಮುಂದುವರಿಯುತ್ತದೆ. ಸುಬ್ಬಣ್ಣನ ಕೊನೆಯ ದಿನಗಳ ಮನೋಧರ್ಮ ಅವನು ಸಾಧಿಸಿದದ್ದು, ಮೊದಲಿನಿಂದಲೂ ಇದ್ದದ್ದಲ್ಲ. ಈ ಮನೋಧರ್ಮವನ್ನು ಅವನು ಸಾಧಿಸಿದ ರೀತಿಯೇ, ಈ ಕೃತಿಯ ಜೀವಾಳ. ಈ ಆದರ್ಶ ಮನೋಧರ್ಮ ಸುಬ್ಬಣ್ಣನಿಗೆ ಬರುವುದಕ್ಕಿಂತ ಮೊದಲು, ಬರುವ ಹಾದಿಯಲ್ಲಿ ಹಾಗೂ ಬಂದನಂತರವೂ ಅವನ ಜೊತೆಯಲ್ಲಿದುದು ಅವನ ಸಂಗೀತ. ಸುಬ್ಬಣ್ಣನ ಆತ್ಮ ಪಕ್ವಗೊಂಡಂತೆಲ್ಲಾ, ಅವನ ಸಂಗೀತವೂ ಪಕ್ವಗೊಳ್ಳುತ್ತಾ ಹೋಗುತ್ತದೆ. ಹೀಗೆ ಪರಿಪಾಕಗೊಂಡ ಅವನ ಕಲೆಯಿಂದ, ಅವನ ಅರಿವೂ ತಿಳಿಯಾಗುತ್ತದೆ. ಇಲ್ಲಿ ಸುಬ್ಬಣ್ಣನಿಂದ ಅವನ ಸಂಗೀತ ಉದ್ಧಾರವಾಯಿತು; ಸಂಗೀತದಿಂದ ಸುಬ್ಬಣ್ಣ ಉದ್ಧಾರವಾಗಲಿಲ್ಲ ಎಂಬುದು ನಿಜವಾದರೂ ಆ ಉದ್ಧಾರದ ಪಯಣ, ಸಂಗೀತದ ಜೊತೆಯಿಲ್ಲದೆ, ಸಾಗಲು ಸಾಧ್ಯವಾಗುತ್ತಲೇ ಇರಲಿಲ್ಲ, ಎಂಬುದೂ ಸತ್ಯ.

ಸುಬ್ಬಣ್ಣನ ಆತ್ಮೋದ್ಧಾರದ ಹೋರಾಟ ಇಲ್ಲಿ ಎರಡು ನೆಲೆಗಳಲ್ಲಿವೆ. ಒಂದು, ಜೀವನದ ಹಲವು ನೋವು-ನಿರಾಸೆಗಳನ್ನು ಅನುಭವಿಸಿ, ವೈರಾಗ್ಯದತ್ತ, ಶೂನ್ಯದತ್ತ ಸಾಗವುದು. ಇನ್ನೊಂದು ಆ ಶೂನ್ಯತೆಯನ್ನು. ವೈರಾಗ್ಯಭಾವನೆಯನ್ನ ಜೀವನ ಸ್ವೀಕರಣೆಯ ಮೂಲಕ ತುಂಬಿಕೊಳ್ಳುವುದು. ಸುಬ್ಬಣ್ಣ ತನ್ನ ಜೀವನದಲ್ಲಿ ಅನುಭವಿಸುವ ಶೋಕ ಪರಂಪರೆ, ಅವನನ್ನು ಜೀವನದ ಬಗೆಗಿನ ಸಂಘರ್ಷಕ್ಕೆ ನೂಕುತ್ತದೆ. ಈ ಸಂಘರ್ಷದ ನಡುವೆ ಬದುಕುವುದು, ಆ ಬದುಕಿನಲ್ಲಿ ಮನಶ್ಯಾಂತಿಯನ್ನು ಕಂಡುಕೊಂಡುಕೊಳ್ಳುವುದು, ಸುಬ್ಬಣ್ಣನಿಗೆ ತನ್ನ ಕಲೆಯಿಂದ ಸಾಧ್ಯವಾಗುತ್ತದೆ. ಆದ್ದರಿಂದ  ಕಾದಂಬರಿಯಲ್ಲಿ ಸುಬ್ಬಣ್ಣನ ಸಂಘರ್ಷ, ಜಿಜ್ಞಾಸೆ, ಅವನ ಬದುಕಿನ ಸಂಕೀರ್ಣತೆಗಳು, ಅದರಿಂದ ಬಿಡುಗಡೆಹೊಂದಿದ ಅವನ ಉದ್ಧಾರ, ಆ ಮೂಲಕ ಅವನ ಕಲೆಯ ಬೆಳಗುವಿಕೆ, ಇವೇ ಮುಖ್ಯ ತಿರುಳಾಗಿವೆ.

'ಸುಬ್ಬಣ್ಣ' ಆರಂಭದಲ್ಲಿ 'ಮಮ'ದ ಹಂತದಲ್ಲಿಯೇ ಇದ್ದ. ತಾನು ಮತ್ತು ತನ್ನ ಸಂಗೀತ ಅಷ್ಟೇ ಅವನ ಕೇಂದ್ರಬಿಂದು. ಅನಂತರ ಸ್ವಲ್ಪ-ಸ್ವಲ್ಪವಾಗಿ ಅವನ ದೃಷ್ಟಿ ವಿಶಾಲವಾಗುತ್ತದೆ. ಈ ವಿಶಾಲವಾಗುವಿಕೆ ಅವನ ಸಂಸಾರಕೇಂದ್ರಿತ ದೃಷ್ಟಿಯಿಂದಲೇ ಆರಂಭವಾಗುತ್ತದೆ. ಈ ಸಂಸಾರ ಕೇಂದ್ರಿತ ದೃಷ್ಟಿ ವಿರಕ್ತಿಯತ್ತ ಸಾಗುವುದು ಒಂದು ಹಂತ. ಈ ವೈರಾಗ್ಯ ಭಾವನೆ ಜೀವನ ನಿರಾಕರಣೆಯತ್ತ ನಡೆಯದೆ, ಜೀವನ ಸ್ವೀಕರಣೆಗೆ ಅನುವಾಗುವುದು, ಅವನ ಆತ್ಮೋದ್ಧಾರದ ಕಟ್ಟಕಡೆಯ ಹಾಗೂ ಪರಿಪೂರ್ಣ ಹಂತ. ಹೀಗೆ 'ಸುಬ್ಬಣ್ಣ'ನ ಆತ್ಮ ಸಂಸ್ಕಾರದ ವಿವಿಧ

ಮೆಟ್ಟಿಲುಗಳ ಚಿತ್ರಣ ಇಲ್ಲಿನ ಕಥಾಹಂದರವಾಗಿದೆ. ಆದ್ದರಿಂದ 'ಸುಬ್ಬಣ್ಣ'ನ ಸಂಗೀತ ಇಲ್ಲಿನ ಕಥಾವಸ್ತು ಎನ್ನುವುದಕ್ಕಿಂತಲೂ ಸಂಗೀತಗಾರ 'ಸುಬ್ಬಣ್ಣ'ನ ಬದುಕು ವಸ್ತುವಾಗಿದೆ ಎನ್ನವುದು ಹೆಚ್ಚು ಸಮಂಜಸ.

**"ಅನ್ಯ ಕೇಂದ್ರಿತ ವಿಶ್ವದಲ್ಲಿ, ಆತ್ಮಕೇಂದ್ರಿತ ವ್ಯಕ್ತಿಯ ಜೀವನ ಶಿಲ್ಪಕ್ಕೆ ಸುಬ್ಬಣ್ಣ ಒಂದು ಮನಕರಗುವ ಸಂಕೇತ"**[೧] ಎಂಬ ಮಾತುಗಳು 'ಸುಬ್ಬಣ್ಣ' ಕೃತಿಯ ಕಥಾವಸ್ತುವನ್ನು ಬಹಳ ಸರಳ ಮಾತುಗಳಲ್ಲಿ ಸ್ಪಷ್ಟಪಡಿಸುತ್ತವೆ.

'ಸಂಧ್ಯಾರಾಗ'ದ ವಸ್ತುವು ಸುಬ್ಬಣ್ಣ ಕೃತಿಯ ವಸ್ತುವನ್ನೆ ಹೊಂದಿದೆ. ಅದು, ಕಲಾವಿದನ ಬದುಕಿಗೆ ಸಂಬಂಧಿಸಿದ್ದು. ಆದರೆ ಇಲ್ಲಿನ ವಸ್ತು ಸುಬ್ಬಣ್ಣ ಕೃತಿಯ ವಸ್ತುವಿಗಿಂತ ಸೂಕ್ಷ್ಮ ವ್ಯತ್ಯಾಸವನ್ನು ಪಡೆದಿದೆ. ಸುಬ್ಬಣ್ಣ ಕೃತಿಯಲ್ಲಿ ಅವನ ಕಲೆಗಿಂತ, ಅವನ ಆತ್ಮೋದ್ಧಾರಕ್ಕೆ ಪ್ರಾಶಸ್ತ್ಯ. ಆದರೆ 'ಸಂಧ್ಯಾರಾಗ'ದಲ್ಲಿ ಲಕ್ಷ್ಮಣನ ಕಲೆಗೇ ಹೆಚ್ಚು ಪ್ರಾಮುಖ್ಯತೆ ನೀಡಲಾಗಿದೆ. ಕೃತಿಯಲ್ಲಿ ಅವನ ಜೀವನ ವಿವರಗಳು ಬರುವುದಾದರೂ, ಅದರ ಕೇಂದ್ರಬಿಂದು ಅವನ ಸಂಗೀತ.

'ಸುಬ್ಬಣ್ಣ' ಕೃತಿಯಲ್ಲಿ ಅವನು ತನ್ನ ಆತ್ಮೋದ್ಧಾರದ ಕಡೆಗೆ ಪಯಣ ಬೆಳೆಸುತ್ತಾನೆ. ಈ ಪಯಣದಲ್ಲಿ ಅವನ ಸಂಗೀತ, ಅವನ ಜೊತೆಗಿರುತ್ತದೆ. ಆದರೆ 'ಸಂಧ್ಯಾರಾಗ'ದಲ್ಲಿ ಲಕ್ಷ್ಮಣನ ಪ್ರಯಾಣ ಇರುವುದೇ ಅವನ ಸಂಗೀತದ ಸಿದ್ಧಿಯೆಡೆಗೆ. ತನ್ನ ಕಲಾಪ್ರಪಂಚದಲ್ಲಿ ಅವನು ಎಂತಹ ಉನ್ನತ ಸ್ಥಿತಿಯನ್ನು ಮುಟ್ಟುತ್ತಾನೋ ಎಂಬುದರೆಡೆಗೆ ಕಾದಂಬರಿ ಗಮನ ನೀಡಿದೆ. ಅದೇ ರೀತಿ ಲಕ್ಷ್ಮಣ ತನ್ನ ಸಂಗೀತದಲ್ಲಿ ಚಿರಂತನವಾದ ನೆಲೆಗೆ ಏರುತ್ತಾನೆ. ಈ ನೆಲೆಯಲ್ಲಿ ಅವನು ಹಾಗೂ ಅವನ ಕಲೆಯ ಒಂದಾಗಿವೆ. ಇದರಿಂದಾಗಿ ಅವನ ಕಲೆಗೆ ಅಮರತ್ವವು ಲಭಿಸಿದೆ. ಕಲಾವಿದ ಚಿರಸ್ಮರಣೀಯನಾಗಿದ್ದಾನೆ.

ನಿಜವಾದ ಕಲಾಜೀವಿಯ ಗುರಿಯೆಂದರೆ, ತನ್ನ ಕಲೆಯನ್ನು ಒಂದು ತಪಸ್ಸನ್ನಾಗಿ ಸ್ವೀಕರಿಸಿ, ಅದನ್ನು ಅಪೂರ್ವಗೊಳಿಸುವುದು. 'ಸಂಧ್ಯಾರಾಗ'ದಲ್ಲಿಯೂ ಇಂತಹ ಕಲಾತಪಸ್ಸಿನ ಅನನ್ಯತೆಯನ್ನು ತೆರೆದಿಡಲಾಗಿದೆ. ಇಲ್ಲಿನ ಕಲಾವಿದ ಲಕ್ಷ್ಮಣ, ತನ್ನ ಕಲೆಯಲ್ಲಿ ಪೂರ್ಣತೆಯ ಒಂದೊಂದು ಹಂತವನ್ನು ಏರಿ, ಪರಮಾವಧಿಯೆಡೆಗೆ ಸರಿಯುತ್ತಾನೆ. ಕೃತಿಯ ಮುನ್ನುಡಿಯಲ್ಲಿ ಲೇಖಕರು ಹೇಳಿರುವಂತೆ, ಇದು ಪೂರ್ಣ ಜೀವನದ ಆದರ್ಶದೆಡೆಗೆ ಸಾಗಿದ ಕಲಾವಿದನ ಚಿತ್ರಣ. ಲಕ್ಷ್ಮಣ ಈ ಪೂರ್ಣತೆಯನ್ನು, ಪರಮಸಿದ್ಧಿಯನ್ನು ಪಡೆಯುವುದರೆಡೆಗೆ ಕಾದಂಬರಿಯ ಲಕ್ಷ್ಯವು ಕೇಂದ್ರೀಕೃತವಾಗಿದೆ.

ಇಲ್ಲಿ ಪರಮಾವಧಿ ಅಥವಾ ಪೂರ್ಣತೆಯೆಂದರೆ ಸಂಪೂರ್ಣ ಸಮರ್ಪಣೆ. ಕಲೆಗಾಗಿ ತನ್ನನ್ನು ತೆತ್ತುಕೊಳ್ಳುವುದು; ಆತ್ಮಾರ್ಪಣೆ. ಈ ಆತ್ಮಾರ್ಪಣೆಯಲ್ಲಿಯೇ ಲಕ್ಷ್ಮಣನಿಗೆ ತನ್ನ ಕಲಾ ದೇವತೆಯ ಸಾಕ್ಷಾತ್ಕಾರವಾಗುತ್ತದೆ. ಜೀವನದುದ್ದಕ್ಕೂ ಕಲೆ–ಕಲಾವಿದ ಒಟ್ಟಿಗೇ ನಡೆದು ಬಂದು, ಒಂದು ಉತ್ಕರ್ಷದ ಹಂತದಲ್ಲಿ ಎರಡೂ ಏಕೀಭವಿಸುತ್ತವೆ. ಇಡೀ ಜೀವನವನ್ನು ಕಲೆಯ ಉದ್ಧಾರಕ್ಕಾಗಿ ಮೀಸಲಿಡುವುದಷ್ಟೇ ಅಲ್ಲ, ಆತ್ಮವನ್ನೇ ಕಲೆಯಲ್ಲಿ ಲೀನಗೊಳಿಸುವಂತಹ

---

೧. ಶ್ರೀನಿವಾಸ – 'ಸುಬ್ಬಣ್ಣ'ನ ಬಗೆಗೆ ಪುನರ್ವಿಚಾರ–ಗೌರೀಶ ಕಾಯ್ಕಿಣಿ – ಪು. ೧೨೩

ಅದ್ಭುತ ಪ್ರಕ್ರಿಯೆ ಇಲ್ಲಿ ಪ್ರಧಾನ ಪಾತ್ರ ವಹಿಸಿದೆ. ಪೂರ್ಣ ಕಲಾವಿದನಾಗಿ ಜನಿಸುವ ಲಕ್ಷ್ಮಣನ ಕಲೆ, ಪ್ರತಿಯೊಂದು ಘಟ್ಟದಲ್ಲೂ ವಿಶಿಷ್ಟ ರೀತಿಯಿಂದ ಪ್ರಕಾಶಿಸುತ್ತದೆ. ಅಂತಿಮವಾಗಿ ಅದು ಕಲಾವಿದನನ್ನು ತನ್ನೊಳಗೆ ಐಕ್ಯಗೊಳಿಸಿಕೊಳ್ಳುತ್ತದೆ. ಇಲ್ಲಿಗೇ ಕಲಾವಿದನ ನಿಜವಾದ ಗುರಿ ಸಾಧಿತವಾಗುತ್ತವೆ. ಮತ್ತು ಆ ಮೂಲಕ ಅವನ ಕಲಾಸಿದ್ಧಿ ಒಂದು ಆದರ್ಶ ಸ್ಥಿತಿಯನ್ನು ಪರಿಪೂರ್ಣತೆಯನ್ನು ಪಡೆದುಕೊಳ್ಳುತ್ತದೆ. ಇಂತಹ ಅದ್ಭುತ ಉಪಾಸನೆಯ ಚಿತ್ರಣವೇ ಕಾದಂಬರಿಯ ವಸ್ತು ಹಾಗೂ ಉದ್ದೇಶವಾಗಿದೆ.

'ಸುಬ್ಬಣ್ಣ' ಹಾಗೂ 'ಸಂಧ್ಯಾರಾಗ' ಎರಡೂ ಕೃತಿಗಳನ್ನೂ ಗಮನಿಸಿದಾಗ ವಸ್ತುವಿನಲ್ಲಿ ಕಂಡುಬರುವ ಸೂಕ್ಷ್ಮ ವ್ಯತ್ಯಾಸವೆಂದರೆ, ಸಂಗೀತದಿಂದ ಸುಬ್ಬಣ್ಣ ಉದ್ಧಾರವಾದರೆ, ಲಕ್ಷ್ಮಣನಿಂದ ಅವನ ಸಂಗೀತ ಉದ್ಧಾರವಾಗಿದೆ; ಈ ಹಿನ್ನಲೆಯಲ್ಲಿ ಅವನೂ ಅಮರನಾಗುತ್ತಾನೆ. ಮುಖ್ಯವಾಗಿ ಎರಡೂ ಕೃತಿಗಳಲ್ಲೂ ಸಂಗೀತ, ಕಲಾವಿದನ ಬದುಕಿನಲ್ಲಿ ವಹಿಸುವ ಪಾತ್ರ ಬೇರೆ-ಬೇರೆ. ಎರಡು ಕೃತಿಗಳ ಶೀರ್ಷಿಕೆಯೇ, ತನ್ನ ವಸ್ತು ಏನೆಂಬುದನ್ನು ಸೂಚ್ಯವಾಗಿ ತಿಳಿಸುತ್ತದೆ. 'ಸುಬ್ಬಣ್ಣ' ಕೃತಿಯು, ಅವನನ್ನೇ ತನ್ನ ಮೂಲ ಬಿಂದುವನ್ನಾಗಿಸಿಕೊಂಡಿದೆ. ಇದು ಮುಖ್ಯವಾಗಿ ಅವನ ಬಾಳಿನ ಕಥೆ. ಬಾಳಿನಲ್ಲಿ ಬಂದೊದಗಿದ ಸಂಕಷ್ಟಗಳಿಗೆ ಸಿಲುಕಿ, ಸೋಲದೆ ಉದ್ಧಾರದ ಹಾದಿ ಹಿಡಿದ ಜೀವದ ಕಥೆ. ಸುಬ್ಬಣ್ಣನೂ ಆರಂಭದಲ್ಲಿ ಒಬ್ಬ ಸಾಮಾನ್ಯ ವ್ಯಕ್ತಿಯಂತೆಯೇ ಗೋಚರಿಸುತ್ತಾನೆ. ಅವನಲ್ಲಿ ಸ್ವಾರ್ಥ, ಅಹಂಕಾರ, ದೌರ್ಬಲ್ಯಗಳೆಲ್ಲವೂ ಕಂಡುಬರುತ್ತದೆ. ಆದರೆ ಇವುಗಳಿಂದ ಕಳಚಿಕೊಳ್ಳುವುದರೆಡೆಗೆ ಅವನ ಆತ್ಮಯಾತ್ರೆಯಿದೆ. ಅವನ ಈ ಆತ್ಮಯಾತ್ರೆಯ ಮಾರ್ಗ ಸುಲಭವಾದುದೇನಲ್ಲ. ಮಾನವ ಸಹಜ ದೌರ್ಬಲ್ಯಗಳಾದ ಹೆಮ್ಮೆ ಅಹಂಕಾರಗಳು ಅವನಲ್ಲೂ ಮರುಕಳಿಸುತ್ತವೆ. ಅವುಗಳನ್ನು ಜಯಿಸಿ, ಒಬ್ಬ ಪರಿಪೂರ್ಣ ವ್ಯಕ್ತಿಯಾಗುವ ಹಂತಕ್ಕೆ ಅವನು ಮುಂದುವರೆಯುತ್ತಾನೆ. ಆದರೆ ಸುಬ್ಬಣ್ಣ, ಸಂಪೂರ್ಣ ವಿರಕ್ತಿಯನ್ನು ಅನುಭವಿಸುವುದಿಲ್ಲ. ಅವನ ಅನಾಥಪ್ರಜ್ಞೆ, ಏಕಾಂಗಿತನಗಳು ಅವನಲ್ಲಿ ಕಡೆಯವರೆಗೂ ಉಳಿಯುವುದಿಲ್ಲ; ಜೀವನ ಪ್ರೀತಿಯಿಂದ ಸುಬ್ಬಣ್ಣ ಅವುಗಳನ್ನು ತೊಡೆದುಕೊಳ್ಳುತ್ತಾನೆ. ಸಹಮಾನವ ಪ್ರೇಮದಲ್ಲಿ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳುತ್ತಾನೆ. ಅಷ್ಟರಮಟ್ಟಿಗೆ ಒಬ್ಬ ವ್ಯಕ್ತಿಯಾಗಿ ಸುಬ್ಬಣ್ಣ ಪರಿಪಕ್ವನಾಗುತ್ತಾನೆ. ಇಲ್ಲಿ ಮುಖ್ಯವಾಗಿರುವುದು ಕಲೆ ಮತ್ತು ಕಲಾವಿದನಲ್ಲ, ಕಲಾವಿದ ಮತ್ತು ಅವನ ಬದುಕು. ಆದ್ದರಿಂದಲೇ ಈ ಕೃತಿಯಲ್ಲಿ ಸಂಗೀತಕಲೆ ಸುಬ್ಬಣ್ಣನೊಡನೆ ಅನ್ಯೋನ್ಯವಾಗಿ ಬೆಸೆದುಕೊಂಡುಬರುತ್ತದೆ ಆದರೆ ಸುಬ್ಬಣ್ಣ ಒಬ್ಬ ಮಹಾನ್ ಸಂಗೀತಗಾರನಾಗಿ ಬೆಳೆಯಲಿಲ್ಲ.

'ಸಂಧ್ಯಾರಾಗ' ಶೀರ್ಷಿಕೆಯು ತನ್ನ ಕೇಂದ್ರ ಸ್ಥಾನ ಸಂಗೀತವೆಂಬುದನ್ನು ತಿಳಿಸುತ್ತದೆ. ಲಕ್ಷ್ಮಣನ ಸಂಗೀತ ಸಿದ್ಧಿಯೇ ಇಲ್ಲಿ ಪ್ರಧಾನವಾಗಿದೆ. ಅವನು ಒಬ್ಬ ಕಲಾವಿದನಾಗಿ ಕಂಡು ಬರುವಷ್ಟು ಸ್ಫುಟವಾಗಿ ಒಬ್ಬ ವ್ಯಕ್ತಿಯಾಗಿ ಕಂಡುಬರುವುದಿಲ್ಲ. ಕಲಾವಿದನಾಗಿ ಸಿದ್ಧಿಯ ಶಿಖರಗಳನ್ನು ಅವನು ಏರುತ್ತಾ ಹೋಗುತ್ತಾನೆ. ಆದರೆ ವ್ಯಕ್ತಿಯಾಗಿ ಅವನ ದೃಷ್ಟಿ, ಧೋರಣೆ ಸ್ಪಷ್ಟವಿಲ್ಲ. ಲಕ್ಷ್ಮಣ ಒಬ್ಬ ಒಳ್ಳೆಯ ವ್ಯಕ್ತಿಯಾಗಿ, ಮೃದು ಹೃದಯಿಯಾಗಿ ಕಾಣಿಸಿದರೂ, ಅವನ ಅತೀ ಒಳ್ಳೆಯತನ ದೌರ್ಬಲ್ಯವಾಗಿ ಗೋಚರಿಸುತ್ತದೆ. ಅವನ ಮಾನವ ಸಹಜ ಇತಿ-ಮಿತಿಗಳು ಇಲ್ಲಿ

ಪ್ರಕಟಗೊಂಡಿಲ್ಲ. ಕಲಾವಿದನಾಗಿ ಅವನ ಸಾಧನೆ ಅದ್ವಿತೀಯ ಹಾಗೂ ಅನನ್ಯ. 'ಸಂಧ್ಯಾರಾಗ' ಅವನ ಜೀವನ-ಉಸಿರು. ಇದನ್ನು 'ಪೂರ್ವಿ ಕಲ್ಯಾಣಿ'ರಾಗವೆಂದು ಕರೆಯುತ್ತಾರೆ. ಸಂಗೀತ ಕ್ಷೇತ್ರದಲ್ಲಿ ಇದಕ್ಕೊಂದು ವಿಶಿಷ್ಟ ಸ್ಥಾನವಿದೆ. ಇದೊಂದು ಭಾವನಾಯುಕ್ತವಾದ ರಾಗ. ಗಮನಪ್ರಧಾನ ಸಂಚಾರಗಳು, ಅಸಹಾಯಕತೆಯ ಭಾವಗಳನ್ನು ಚಿತ್ರಿಸುವಂತಹ ಶಕ್ತಿಯನ್ನು ಈ ರಾಗ ಹೊಂದಿದೆ. ಸಂಗೀತದಲ್ಲಿ ವಿದ್ವಾಂಸರಾದವರಾಗಲೀ, ಸಾಮಾನ್ಯರಾಗಲೀ, ಇದನ್ನು ಕೇಳಿದ ಕೂಡಲೇ ಮನಸ್ಸು ಅದರಲ್ಲಿ ಬಹುಬೇಗನೆ ಕೇಂದ್ರಿತವಾಗುತ್ತದೆ. ಈ ರಾಗ, ಕೇಳುವವರ ತನ್ಮಯತೆಯನ್ನು ಬಹಳ ಸುಲಭವಾಗಿ ತನ್ನೆಡೆಗೆ ಗಳಿಸಿಕೊಳ್ಳುತ್ತದೆ. ಇಂತಹ ಪೂರ್ವಿರಾಗಕ್ಕಾಗಿ ಲಕ್ಷ್ಮಣ ತನ್ನಿಡೀ ಬದುಕನ್ನು ಮೀಸಲಿಟ್ಟ. ಅದರ ಸಾರ್ಥಕತೆಗಾಗಿ ನಿರೀಕ್ಷಿಸಿದ. ಅವನ ಹೃದಯದ ದೈನ್ಯತೆಯೇ ಮೂರ್ತಿವೆತ್ತಿ ಬರುವವರೆಗೂ ಅವನ ಪ್ರತೀಕ್ಷೆಯಿತ್ತು. ಈ ರಾಗದ ಮೂಲಕವೇ ಅವನು ತನ್ನ ಪ್ರಾಣವನ್ನು ಸಂಗೀತಕ್ಕಾಗಿ ಅರ್ಪಿಸುತ್ತಾನೆ. ಆ ಮೂಲಕ, ಕಲಾವಿದನಾಗಿ ಒಂದು ಅನುಪಮ ಸಿದ್ಧಿಯನ್ನು ಸಾಧಿಸುತ್ತಾನೆ. ಅವನ ಸಂಗೀತ ಜೀವನದ ಆರಂಭ-ಅಂತ್ಯಗಳೆರಡೂ ಪೂರ್ವಿರಾಗದಲ್ಲೇ. 'ಸಂಧ್ಯಾರಾಗ'ದಲ್ಲಿ ಮುಖ್ಯವಾಗಿರುವುದು ಕಲೆ ಮತ್ತು ಕಲಾವಿದ.

'ಸುಬ್ಬಣ್ಣ' ಕೃತಿಯಲ್ಲಿ ಕಲಾವಿದನೊಬ್ಬನ ಬದುಕು ಪರಿಪಕ್ವವಾಗುವುದರೆಡೆಗೆ ಜೀವನ ಪ್ರಯಾಣವಿದ್ದರೆ, 'ಸಂಧ್ಯಾರಾಗ' ಕೃತಿಯಲ್ಲಿ ಕಲಾವಿದನ ಕಲೆಯು ಪರಿಪಕ್ವವಾಗುವ ಕಡೆಗೆ ಜೀವನ ಸಾಗುತ್ತದೆ. ಇಂತಹ ಹಲವು ಸೂಕ್ಷ್ಮ ವ್ಯತ್ಯಾಸಗಳು ಎರಡೂ ಕೃತಿಗಳಲ್ಲಿ ಅಂತರ್ಗತವಾಗಿವೆ.

ಎರಡೂ ಕೃತಿಗಳಲ್ಲಿ ಭಾರತೀಯ ಪರಂಪರೆಯ ಪ್ರಮುಖ ವಿಚಾರವಾದ, ಅವಿಭಕ್ತಕುಟುಂಬದ ಚಿತ್ರಣ ಬರುತ್ತವೆ. ಹೆಚ್ಚು ನೈಜತೆ ಇರುವುದು 'ಸುಬ್ಬಣ್ಣ' ಕೃತಿಯಲ್ಲಿ. ಕಲಾವಿದನೊಬ್ಬನಿಗೆ ದೊರೆಯಬೇಕಾದ ಪ್ರೋತ್ಸಾಹ, ಸ್ಫೂರ್ತಿದಾಯಕ ವಾತಾವರಣ 'ಸುಬ್ಬಣ್ಣ'ನಿಗೆ ದೊರೆಯುವುದಿಲ್ಲ. ಆದ್ದರಿಂದಲೇ ಅವನ ಬದುಕು ಮತ್ತೊಂದು ಹಾದಿ ಹಿಡಿಯುತ್ತದೆ. ಆದರೆ ಲಕ್ಷ್ಮಣನಿಗೆ ಹಾಗಲ್ಲ; ಆರಂಭದಲ್ಲಿ ಸ್ವಲ್ಪ ತೊಡಕಾದರೂ, ಮನೆಯವರ ಸಂಪೂರ್ಣ ಪ್ರೋತ್ಸಾಹ ಅವನಿಗೆ ದೊರೆಯುತ್ತದೆ; ಅದಕ್ಕೆ. ಪೆಟ್ಟುಬೀಳುವುದು ರಾಮಚಂದ್ರನಿಂದ ಮಾತ್ರ.

ಕೌಟುಂಬಿಕ ವಿವರಗಳು ಎರಡೂ ಕೃತಿಗಳಲ್ಲಿ ಬರುವುದಾದರೂ, ರೀತಿ ವಿಭಿನ್ನವಾಗಿವೆ. ಒಂದು ಕುಟುಂಬದಲ್ಲಿ ಸಹಜವಾಗಿ ಬರುವ ಸಣ್ಣ-ಪುಟ್ಟ ಮನಸ್ತಾಪಗಳು, ವೈಮನಸ್ಸುಗಳು 'ಸುಬ್ಬಣ್ಣ' ಕೃತಿಯಲ್ಲಿ ಸಹಜವಾಗಿ ವಿವರಿಸಲ್ಪಟ್ಟಿವೆ. ಆದರೆ 'ಸಂಧ್ಯಾರಾಗ' ಕೃತಿಯಲ್ಲಿ ಈ ಬಗ್ಗೆ ಒಂದು ಮಾದರಿ ಪರಿಕಲ್ಪನೆಯನ್ನು ಇಟ್ಟುಕೊಂಡಿರುವಂತೆ ತೋರುತ್ತದೆ. ಕೌಟುಂಬಿಕ ಏಕತೆ, ಇಲ್ಲಿ ಸ್ಪಷ್ಟವಾಗಿದೆ. ಈ ಏಕತೆ, ಛಿದ್ರವಾಗುವುದು 'ರಾಮಚಂದ್ರ'ನ ಅಸಹಜ ವರ್ತನೆಗಳಿಂದ. ಉತ್ಕೃಷ್ಟವಾದ ನೆಲೆಯಲ್ಲಿ ಕೌಟುಂಬಿಕ ಚಿತ್ರಣ ಈ ಕೃತಿಯಲ್ಲಿ ಕಂಡುಬರುತ್ತದೆ. ಅವಿಭಕ್ತ ಕುಟುಂಗಳ ಇಂತೆಯೇ ಇರಬೇಕೆಂಬ ಆದರ್ಶ ಪರಿಕಲ್ಪನೆಯ ಚೌಕಟ್ಟಿಗೆ ಮಾತ್ರವೇ ಇದು ಹೊಂದುವಂತದ್ದು. ಈ ಹಿನ್ನಲೆಯಲ್ಲಿ ನೋಡಿದಾಗ, ಇದಕ್ಕೆ ನಿಸ್ಸಂಶಯವಾಗಿ ಅಭಿನಂದನೆ ಸಲ್ಲಬೇಕು. ಆದರೆ ಇವು ಸಹಜತೆಯಿಂದ ದೂರಾಗಿರುವುದಂತೂ ಸತ್ಯ.

'ಸುಬ್ಬಣ್ಣ', 'ಸಂಧ್ಯಾರಾಗ' – ಎರಡೂ ಕೃತಿಗಳಲ್ಲೂ ಕಲಾವಿದನ ಪಾತ್ರ ಪ್ರಮುಖವಾಗಿರುವುದರಿಂದ ಆ ಕಲಾಮಾರ್ಗ ಸಾಗುವ ರೀತಿ, ಎರಡೂ ಕೃತಿಗಳಲ್ಲಿ ವಿಭಿನ್ನ ಮಜಲುಗಳಾಗಿವೆ. 'ಸುಬ್ಬಣ್ಣ'ನ ಸಂಗೀತಾಭ್ಯಾಸದ ವಿವರಗಳು ಸ್ವಲ್ಪ ಅನುಮಾನಸ್ಪದ. ಸಂಗೀತ ಕಛೇರಿಗಳಿಗೆ ಭೇಟಿ ನೀಡಿ, ಏಕಾಂತದಲ್ಲಿ ಸಂಗತಿ, ವರೇಕುಗಳನ್ನು ಹಾಕುತ್ತಾ ದೊಡ್ಡ ಸಂಗೀತಗಾರನಾಗಿ ಬಿಡುತ್ತಾನೆ. ಬಹುಶಃ 'ಸುಬ್ಬಣ್ಣ'ನ ಬದುಕು ಮುಖ್ಯವಾಗಿರುವಂತೆ, ಅವನ ಸಂಗೀತಾಭ್ಯಾಸ ಮುಖ್ಯವಾಗಿಲ್ಲದಿರುವುದರಿಂದ ಇಂತಹ ಸಂಗತಿಗಳಿಗೆ ಕೃತಿಯಲ್ಲಿ ಒತ್ತುಕೊಟ್ಟಿಲ್ಲ.

'ಸಂಧ್ಯಾರಾಗ'ದಲ್ಲಿ ಮಾತ್ರ ಲಕ್ಷ್ಮಣನ ಸಂಗೀತಾಭ್ಯಾಸ ಮೂವರು ಗುರುಗಳ ಮುಖೇನ ಸಾಗುತ್ತವೆ. ಆದರೆ ನೆನಪಿಡಬೇಕಾದ ಸಂಗತಿಯೆಂದರೆ, ಯಾರ ಬಳಿಯಲ್ಲೂ ಅವನು ಸಂಗೀತವನ್ನು ಕಲಿಯುವುದಿಲ್ಲ. ಒಂದೊಂದು ಘಟ್ಟದಲ್ಲೂ ಅವನ ಸಂಗೀತ ಉಜ್ವಲಗೊಳ್ಳುತ್ತಾ ಹೋಗುತ್ತದೆ. ಲಕ್ಷ್ಮಣನನ್ನು ಒಬ್ಬ ಮಹಾನ್ ಸಂಗೀತಗಾರನಾಗಿ ಸಾಧಿಸುವಲ್ಲಿ, ಅವನ ಕಲೆಯ ವೈಭವೀಕರಣ ಸ್ಪಷ್ಟವಾಗಿ ಗೋಚರಿಸುತ್ತದೆ.

ಕಲೆ–ಕಲಾವಿದರ ಸಂಬಂಧ ಎರಡೂ ಕೃತಿಗಳ ವಸ್ತುವಿನಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಚಾರ. 'ಸುಬ್ಬಣ್ಣ' ಕೃತಿಯಲ್ಲಿ ಅವನಿಗೂ ಅವನ ಕಲೆಗೂ ಬಿಡಿಸಲಾರದ ಬಂಧವಿದೆ. ಸುಬ್ಬಣ್ಣ ತನ್ನ ಜೀವನದಲ್ಲಿ ಏನೆಲ್ಲವನ್ನೂ ಕಳೆದುಕೊಂಡರೂ, ತನ್ನ ಸಂಗೀತವನ್ನು ಕಳೆದುಕೊಳ್ಳುವುದು ಅವನಿಂದ ಸಾಧ್ಯವಾಗುವುದಿಲ್ಲ. ಅವನ ಸಂಗೀತ ಪ್ರತಿಯೊಂದು ಹಂತದಲ್ಲೂ ಅವನ ಜೊತೆಗೆ ಉಳಿಯುತ್ತದೆ. 'ಸಂಧ್ಯಾರಾಗ'ದ ಲಕ್ಷ್ಮಣನಿಗೆ ಅವನ ಸಂಗೀತವೇ ಅವನ ಪ್ರಪಂಚ. ಆ ಸಂಗೀತಕ್ಕಾಗಿ ತನ್ನ ಆತ್ಮವನ್ನೇ ಅರ್ಪಿಸುತ್ತಾನೆ. ಅವನು ಬದುಕುವುದೂ ಸಂಗೀತಕ್ಕಾಗಿ.

ಹೀಗೆ ಎರಡೂ ಕೃತಿಗಳ ವಸ್ತುವಿನ ಮೂಲ ಆಶಯದಲ್ಲಿ ಸಾಮ್ಯತೆ– ಭಿನ್ನತೆಗಳೆರಡೂ ಗೋಚರಿಸುತ್ತವೆ.

ಕಲಾವಿದನ ಬದುಕಿನಲ್ಲಿ ಹೆಣ್ಣುವಹಿಸುವ ಮುಖ್ಯ ಪಾತ್ರವನ್ನು ಎರಡೂ ಕಾದಂಬರಿಗಳು ಗುರುತಿಸಿವೆ. ಇದು ಕೃತಿಯ ವಸ್ತುವಿಗೆ ಮತ್ತಷ್ಟು ಪುಷ್ಠಿನೀಡಿವೆ.

'ಸುಬ್ಬಣ್ಣ'ನ ಬದುಕಿನಲ್ಲಿ ಲಲಿತ, ಅವನನ್ನು ತಿದ್ದಲು ಬಂದ ದೇವಿಯ ಅವತಾರವೇ ಆಗುತ್ತಾಳೆ. ಸುಬ್ಬಣ್ಣನಿಗೆ ಬದುಕುವ ರೀತಿಯನ್ನು ಕಲಿಸುತ್ತಾಳೆ; ಅವನನ್ನು ದೈವಿಕತೆಯ ಮಾರ್ಗಕ್ಕೆ ಹಚ್ಚುತ್ತಾಳೆ.

'ಸಂಧ್ಯಾರಾಗ' ಕೃತಿಯಲ್ಲೂ ಈ ಅಂಶ ಹೆಚ್ಚು, ಮನದಟ್ಟಾಗುತ್ತದೆ. 'ಜಯಾ' ತಾನು ಬದುಕಿರುವಾಗ ನೀಡುವ ಪ್ರೇರಣೆಗಿಂತಲೂ ಹೆಚ್ಚಿನದಾದ ಸ್ಫೂರ್ತಿಯನ್ನು ತನ್ನ ಮರಣದ ನಂತರ ನೀಡುತ್ತಾಳೆ. ಒಂದು ಅದ್ಭುತ ಶಕ್ತಿಯಾಗಿ ಲಕ್ಷ್ಮಣನ ಸಂಗೀತ ಸಿದ್ಧಿಗೆ ಪೂರ್ಣತೆಯನ್ನು ಒದಗಿಸುತ್ತಾಳೆ.

ಈ ಎರಡೂ ಕೃತಿಗಳಲ್ಲೂ 'ಸ್ತ್ರೀ' ವಹಿಸುವ ಪಾತ್ರದಿಂದ, 'ಸುಬ್ಬಣ್ಣ'ನ ಬದುಕು ದೈವಿಕಗೊಂಡರೆ, ಲಕ್ಷ್ಮಣ 'ಕಲೆ' ದೈವಿಕಗೊಳ್ಳುತ್ತದೆ. ಈ ಅಂಶಗಳು ಕೃತಿಯ ಮುಖ್ಯ ತತ್ತ್ವಕ್ಕೆ ಒಂದು ವಿನ್ಯಾಸವನ್ನು ಅಳವಡಿಸಿವೆ.

ಯಾವುದೇ ಒಬ್ಬ ವ್ಯಕ್ತಿ ಅವನು ಕಲಾವಿದನಾಗಿರಲಿ ಅಥವಾ ಸಾಮಾನ್ಯ ವ್ಯಕ್ತಿಯಾಗಿರಲಿ, ಅವನ ಸಾಧನೆ-ಯಶಸ್ಸುಗಳು ಸಾರ್ಥಕತೆಯನ್ನು ಪಡೆಯುವುದು, ಆ ವ್ಯಕ್ತಿ ಅನುಭವಿಸುವ ದುಃಖಗಳಿಂದ ಅವನನ್ನು ಒರೆಗೆ ಹಚ್ಚುವುದು ಈ ಸಂಕಟಗಳೇ• ಎರಡೂ ಕೃತಿಗಳಲ್ಲೂ ದುರಂತ ಮುಖ್ಯ ಅಭಿವ್ಯಕ್ತಿಯಾಗಿದೆ. ಆದರೆ ಅವುಗಳ ಕಲ್ಪನೆ-ಸ್ವರೂಪ ಬೇರೆ-ಬೇರೆ. 'ಸಂಧ್ಯಾರಾಗ' ಕೃತಿಯಲ್ಲಿ ದುರಂತಮಯ ಬದುಕು ಕಂಡು ಬಂದರೆ, 'ಸುಬ್ಬಣ್ಣ' ಕೃತಿಯಲ್ಲಿ ಬದುಕಿನ ದುರಂತಗಳು ಕಣ್ಣಿಗೆ ಕಟ್ಟುತ್ತವೆ. ಇಂತಹ ನೋವು-ಸಂಕಟಗಳಿಗೆ ಎರಡೂ ಕಾದಂಬರಿಗಳಲ್ಲಿ, ಪ್ರತಿಕ್ರಿಯೆ ಬೇರೆ-ಬೇರೆ ರೀತಿಯಲ್ಲಿವೆ. 'ಸುಬ್ಬಣ್ಣ' ಇವುಗಳನ್ನು ಯಶಸ್ವಿಯಾಗಿ ಎದುರಿಸುತ್ತಾನೆ; ಆದರೆ ಲಕ್ಷ್ಮಣ ಇವುಗಳಿಂದ ಹಿಂದೆ ಸರಿಯುತ್ತಾನೆ.

ಸಾಂಪ್ರದಾಯಿಕ ಮೌಲ್ಯಗಳು, ಒಂದು ಸಮಾಜ ಒಪ್ಪಿಕೊಂಡ ನಿಯಮಗಳು, ಇವುಗಳಿಗೆ ಬದ್ಧರಾಗಿರುವುದು ಅಥವಾ ಹಿಂದೆ ಸರಿಯುವುದು-ಇವೆಲ್ಲವೂ ಎರಡೂ ಕೃತಿಗಳಲ್ಲಿ ಕಂಡು ಬರುತ್ತವೆ. ಆದರೆ ಸಂಧ್ಯಾರಾಗದಲ್ಲಿ ಆಧುನಿಕತೆಯ ಪ್ರವೇಶ, ಕಿಷ್ಟನ ಸಭೆಗಳು, ಕೋರ್ಟು-ಕಛೇರಿ, ಚುನಾವಣೆಗಳು ಮೊದಲಾದ ಸಂಗತಿಗಳು ಪ್ರಸ್ತಾಪವಾಗಿವೆ. ಆದರೆ ಇದು ಕೃತಿಯ ವಸ್ತುವಿಗೆ ಪೋಷಕವಾಗಿ ಬಂದಿಲ್ಲ.

ಒಟ್ಟಿನಲ್ಲಿ 'ಸುಬ್ಬಣ್ಣ'ನ ಬದುಕು ದೈನ್ಯತೆಯ ತಪಸ್ಸೆಂತೋ, ಲಕ್ಷ್ಮಣ ಕಲೆಯೂ ಒಂದು ದೈನ್ಯತೆಯ ತಪಸ್ಸು ಎಂಬುದನ್ನು ಒಪ್ಪಲೇಬೇಕು.

## ಆ. ಪಾತ್ರಸಂಬಂಧ :-

'ಸುಬ್ಬಣ್ಣ', 'ಸಂಧ್ಯಾರಾಗ' - ಎರಡೂ ಕೃತಿಗಳಲ್ಲೂ ವೈವಿಧ್ಯಮಯ ಪಾತ್ರಗಳು ಕಂಡುಬರುತ್ತವೆ. ಬಹುಶಃ ವಸ್ತುವಿಗೆ ಅನುಗುಣವಾಗಿ ಭಾವನಾತ್ಮಕ ಪಾತ್ರಗಳು ಎರಡೂ ಕೃತಿಗಳಲ್ಲೂ ಹೆಚ್ಚಾಗಿ ಕಂಡುಬರುತ್ತವೆ. ಸಂಗೀತ ಕಲೆ-ಒಂದು ಮಧುರವಾದ ಸಂಗತಿ ಆದ್ದರಿಂದಲೇ ಇಲ್ಲಿ ಹೆಚ್ಚು ವೈಚಾರಿಕತೆಗೆ ಆಸ್ಪದವಿಲ್ಲ. 'ಸುಬ್ಬಣ್ಣ' ಕೃತಿಯಲ್ಲಿ ಸುಬ್ಬಣ್ಣನಲ್ಲಿ ಸ್ವಲ್ಪಮಟ್ಟಿಗೆ ವಿಚಾರವಾದದ ಅಂಶಗಳು ಕಂಡುಬರುತ್ತವೆ. 'ಸಂಧ್ಯಾರಾಗ'ದಲ್ಲಿ ಗೋಪಾಲನಲ್ಲಿ ಆಧುನಿಕ ವಿಚಾರಧಾರೆಗಳು ಗೋಚರಿಸುತ್ತವೆ. ಉಳಿದಂತೆ ಎರಡೂ ಕೃತಿಗಳಲ್ಲೂ, ತಮ್ಮ ಉತ್ತಮ ನಡತೆ ಗುಣಗಳಿಂದ ನಮ್ಮನ್ನು ಆಕರ್ಷಿಸುವಂತಹ ಪಾತ್ರಗಳಿವೆ.

'ಸುಬ್ಬಣ್ಣ' ಕೃತಿಯು ಪ್ರಧಾನವಾಗಿ ಅವನ ಬದುಕು ಪರಿಪಕ್ವವಾಗುವುದರೆಡೆಗೆ, ತನ್ನ ಲಕ್ಷ್ಯವನ್ನು ಹರಿಸಿರುವುದರಿಂದ ಆರಂಭದಲ್ಲೇ ಸುಬ್ಬಣ್ಣ ಒಬ್ಬ ಶ್ರೇಷ್ಠ ವ್ಯಕ್ತಿಯಾಗಿ ಕಾಣಬರುವುದಿಲ್ಲ. ಕಠಿಣ ಶಿಲೆಯು ಅಪರಂಜಿಯಾದ ನ್ಯಾಸವೇ ಕಥಾವಸ್ತುವಾಗಿರುವುದರಿಂದ, ಆ ಕಠಿಣ ಶಿಲೆಯೂ ನಮ್ಮ ಕಣ್ಣಿಗೆ ಗೋಚರಿಸಿದೆ. ಒಬ್ಬ ಸಾಧಾರಣ ವ್ಯಕ್ತಿಯಲ್ಲಿರುವ ಸ್ವಾರ್ಥ, ಅಹಂಕಾರ, ದುಡುಕು ಸ್ವಭಾವಗಳು ಆರಂಭದಲ್ಲಿ ಅವನಲ್ಲಿರುತ್ತದೆ. ತಾನು ಮತ್ತು ತನ್ನ ಸಂಗೀತಾಭ್ಯಾಸವನ್ನು ಬಿಟ್ಟರೆ, ಬೇರೆ ಸಂಗತಿಗಳಾವುವೂ ಅವನ ಮನಸ್ಸನ್ನು ಆವರಿಸಿರಲಿಲ್ಲ.

ಇದು ಅವನ ವ್ಯಕ್ತಿತ್ವದ ಮೊದಲ ಹಂತ. ಅನಂತರ ಅವನು ತನ್ನ ಸಂಸಾರದೊಂದಿಗೆ ಬೆಸೆದುಕೊಳ್ಳುತ್ತಾನೆ. ಅವನ ದೃಷ್ಟಿ ತನ್ನ ಕುಟುಂಬದೆಡೆಗೆ ಹೊರಳುತ್ತದೆ. ತನ್ನ ಕೌಟುಂಬಿಕ ಬದುಕಿನ ಆಗು-ಹೋಗುಗಳು, ತನ್ನ ಹೆಂಡತಿಗೆ ಮನೆಯಲ್ಲಿ ಆಗುತ್ತಿದ್ದ ಅನ್ಯಾಯಗಳನ್ನು ಅವನು ಗುರುತಿಸುತ್ತಾನೆ. ಅದುವರೆಗೂ ಅರಮನೆಯಲ್ಲಿ ದೊಡ್ಡ ಸಂಗೀತಗಾರನಾಗಬೇಕೆಂಬ ಆಮಿಷ ಅವನನ್ನು ಹಿಂಬಾಲಿಸುತ್ತಿತ್ತು. ಆದರೆ ತನ್ನ ಆತ್ಮಾಭಿಮಾನದ ಪ್ರಶ್ನೆ ಬಂದಾಗ, ಅವನು ಆ ಬಯಕೆಯನ್ನು ತೊರೆಯುತ್ತಾನೆ. ತನ್ನ ಹೆಂಡತಿಗೋಸ್ಕರವಾಗಿ ಅವನು ಮನೆಯನ್ನು ಬಿಟ್ಟದ್ದು, ಅವನಲ್ಲಿ ಉಂಟಾಗುವ ಬದಲಾವಣೆಗೆ ಸ್ಪಷ್ಟ ನಿದರ್ಶನ ಒಬ್ಬ ವ್ಯಕ್ತಿಯಾಗಿ ಯಶಸ್ವಿಯಾಗಿ 'ಸುಬ್ಬಣ್ಣ' ಇಲ್ಲಿ ಗೆದ್ದಿದ್ದಾನೆ ಎಂದೇ ಹೇಳಬೇಕು.

ಬದುಕಿನಲ್ಲಿ ಎದುರಾಗುವ ಶೋಕ ಪರಂಪರೆಯನ್ನು 'ಸುಬ್ಬಣ್ಣ' ಧೈರ್ಯವಾಗಿಯೇ ಎದುರಿಸುತ್ತಾನೆ. ಎಲ್ಲಕ್ಕಿಂತಲೂ ಹೆಚ್ಚಾಗಿ ಆ ಕಷ್ಟ-ನಷ್ಟಗಳು ಅವನನ್ನು ಪರಿಪಕ್ವಗೊಳಿಸುತ್ತವೆ. ಬದುಕಿನ ಸಂಕಷ್ಟಗಳು ಅವನನ್ನು ವಿರಕ್ತಿಯೆಡೆಗೆ ನೂಕಿತಾದರೂ, ಅವನ್ನು ಅವನು ಗೆದ್ದುಕೊಳ್ಳುತ್ತಾನೆ. ಸುಬ್ಬಣ್ಣ ಯೋಗಿಗಳಲ್ಲೇ ಅಗ್ರಗಣ್ಯನೆಂದು ನಿರೂಪಕರು ಹೇಳುತ್ತಾರೆ. ಆದರೆ ಸುಬ್ಬಣ್ಣ ಯೋಗಿಯಾದುದು, ಜೀವನವನ್ನು ಪ್ರೀತಿಸಿಯೇ. ಒಂದು ವೇಳೆ ಅವನು ಸಂಪೂರ್ಣ ವಿರಾಗಿಯಾಗಿದ್ದರೆ, ಅವನ ವ್ಯಕ್ತಿತ್ವ ಪರಿಪಕ್ವವಾಗುತ್ತಿರಲಿಲ್ಲ. ಅವನ ಹಠ, ಹೆಮ್ಮೆಗಳು ಜೀವನದ ಒಂದೊಂದು ಹಂತದಲ್ಲೂ ಕರಗುತ್ತದೆ. ಅವನ ಜೀವನದಲ್ಲಿ ಉಂಟಾದ ಶೂನ್ಯತೆಯನ್ನು ಸಹಮಾನವ ಪ್ರೀತಿ ತುಂಬುತ್ತದೆ. ಅವನು ಪರಿಪಕ್ವವಾದಂತೆ, ಅವನ ಕಲೆಯೂ ಬಲಿಯುತ್ತದೆ. ಗಾನದ ಮೂಲಕ ಸರ್ವತತ್ವಗಳನ್ನು ಸುಬ್ಬಣ್ಣ ತಿಳಿದುದು ಹೀಗೆ. ಒಬ್ಬ ವ್ಯಕ್ತಿಯಾಗಿ 'ಸುಬ್ಬಣ್ಣ' ಬೆಳೆಯುತ್ತಾ ಹೋಗುತ್ತಾನೆ, ಆದರೆ ಒಬ್ಬ ಕಲಾವಿದನಾಗಿ ಅಲ್ಲ.

'ಸಂಧ್ಯಾರಾಗ'ದ ಲಕ್ಷ್ಮಣ ಸಂಪೂರ್ಣ ಕಲಾವಿದ. ಒಬ್ಬ ಕಲಾವಿದನಾಗಿ ಕಂಡುಬರುವಷ್ಟು ನಿಚ್ಚಳವಾಗಿ, ಒಬ್ಬ ವ್ಯಕ್ತಿಯಾಗಿ ಲಕ್ಷ್ಮಣ ಕಂಡುಬರುವುದಿಲ್ಲ. ಅವನೊಳಗಿನ ಕಲಾವಿದ ಬೆಳೆಯುತ್ತಲೇ ಹೋಗುತ್ತಾನೆ. ಸಂಗೀತಕ್ಕಾಗಿ ತನ್ನಿಡೀ ಜೀವನವನ್ನು ಮೀಸಲಿಡುವ ಲಕ್ಷ್ಮಣ, ಅದೇ ಸಂಗೀತದಲ್ಲಿ ತನ್ನ ಆತ್ಮಪ್ರಣತಿಯನ್ನು ತೇಲಿಬಿಡುತ್ತಾನೆ. ನಿಜವಾದ ಕಲಾವಿದನು ಸಾಧಿಸಬೇಕಾದುದನ್ನು ಲಕ್ಷ್ಮಣ ಸಾಧಿಸುತ್ತಾನೆ. ಜೀವನವನ್ನೂ ಮೀರಿ ನಿಲ್ಲುವ ಬ್ರಹ್ಮಾನಂದದ ಸ್ಥಿತಿಯನ್ನು, ಚಿರಶಾಂತಿಯನ್ನು ಆತ ಸಂಗೀತದಲ್ಲಿ ಪಡೆದುಕೊಳ್ಳುತ್ತಾನೆ. ಅವನ ಕಲೆ ಜೀವನದಿಂದಾಚೆಗಿನ ಸ್ಥಿತಿಯನ್ನು ಮುಟ್ಟಿದೆ. ತನ್ನ ಪ್ರಾಣವನ್ನೇ ಸಂಗೀತದಲ್ಲಿ ಲೀನಗೊಳಿಸಿಕೊಳ್ಳುವುದು ಎಲ್ಲಾ ಕಲಾವಿದರಿಗೂ ಸುಲಭವಾದದ್ದಲ್ಲ. ಅದೊಂದು ಅದ್ಭುತ ಅನುಭೂತಿ. ಅಂತಹ ಅನುಭೂತಿಯನ್ನು ಲಕ್ಷ್ಮಣ ಪಡೆಯುತ್ತಾನೆ. ಕಲಾದೇವತೆಯನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ಅವನದ್ದು ನಿಜವಾದ ಕಲೋಪಾಸನೆ; ತಪಸ್ಸು. ಲಕ್ಷ್ಮಣನ ಕಲೆ ಒಂದು ಅಲೌಕಿಕ ನೆಲೆಯನ್ನು ಮುಟ್ಟುತ್ತದೆ. ಮರಣದಾಚೆಗೆ ತನ್ನ ಸಂಗೀತದಲ್ಲಿ ಲಕ್ಷ್ಮಣ ಚಿರಂಜೀವಿಯಾಗುತ್ತಾನೆ. ಆದ್ದರಿಂದಲೇ ಎಲ್ಲರಿಗೂ ಅವನ 'ಸಂಧ್ಯಾರಾಗ' ಮಾತ್ರವೇ ಕೇಳಿಸಿದರೆ, ಅವನಿಗೆ ಮಾತ್ರ ಅನಂತರದ 'ಉದಯರಾಗ'ವೂ ಮುಟ್ಟುತ್ತದೆ.

ಕಲಾವಿದನಾಗಿ ಲಕ್ಷ್ಮಣ ಪಡೆದುಕೊಂಡ ಯಶಸ್ಸು; ಅವನ ಸಿದ್ಧಿ-ಸಾಧನೆಗಳ ಬಗ್ಗೆ ಎರಡು ಮಾತಿಲ್ಲ. ಆದರೆ ವ್ಯಕ್ತಿಯಾಗಿ ಲಕ್ಷ್ಮಣನ ಪಾತ್ರವೇನು? ಎಂಬುದು ಹೆಚ್ಚು ಪರಿಶೀಲನಾರ್ಹ. ಮುಖ್ಯವಾಗಿ ಅವನ ಸ್ವಭಾವ ಹೆಚ್ಚು ಸ್ಫುಟವಾಗಿ ಮೂಡಿ ಬಂದಿಲ್ಲ. ಅವನ ಇತಿ-ಮಿತಿಗಳು ಅಭಿವ್ಯಕ್ತಗೊಂಡಿಲ್ಲ. ಲೇಖಕರು ಯಾವ ಹಂತದಲ್ಲಿ ಲಕ್ಷ್ಮಣನ ಬಗೆಗೆ ಸಹಾನುಭೂತಿಯನ್ನು ಮೂಡಿಸಲು ಯತ್ನಿಸುತ್ತಾರೋ, ಅದೇ ಹಂತದಲ್ಲಿ ಅವನ ವ್ಯಕ್ತಿತ್ವದ ದೊಡ್ಡ ಕೊರತೆಯು ಸ್ಪಷ್ಟಗೋಚರವಾಗುತ್ತದೆ. ತನ್ನ ಹೆಂಡತಿಯನ್ನು ಕಳೆದುಕೊಂಡು ಹುಚ್ಚನಾಗುವ ಲಕ್ಷ್ಮಣನ ಬಗೆಗೆ ಕನಿಕರಕ್ಕಿಂತಲೂ ಹೆಚ್ಚಾಗಿ ಬೇಸರವೇ ಮೂಡುತ್ತದೆ.

ವ್ಯಕ್ತಿಯಾಗಿ 'ಸುಬ್ಬಣ್ಣ' ಎಲ್ಲಿ ಯಶಸ್ವಿಯಾಗುತ್ತಾನೋ, ಅಲ್ಲಿ ಲಕ್ಷ್ಮಣ ಸೋಲುತ್ತಾನೆ. ಹೆಂಡತಿಗೆ ಮೊಸರು ಹಾಕುತ್ತಿಲ್ಲವೆಂದು ಮನೆ ಬಿಟ್ಟುಬರುವ 'ಸುಬ್ಬಣ್ಣ'ನಿಗೂ, ಗರ್ಭಿಣಿ ಹೆಂಡತಿ ಜೀವವನ್ನೇ ತೇಯುತ್ತಿದ್ದರೂ ಮೌನವಾಗಿರುವ 'ಲಕ್ಷ್ಮಣನಿಗೂ' ಸಾಕಷ್ಟು ಅಂತರವಿದೆ.

ಕಲಾವಿದನಾಗಿ ಲಕ್ಷ್ಮಣ ಗೆದ್ದಿದ್ದಾನೆ; ವ್ಯಕ್ತಿಯಾಗಿ ಸುಬ್ಬಣ್ಣಗೆಲ್ಲುತ್ತಾನೆ.

ಲಕ್ಷ್ಮಣ ವ್ಯಕ್ತಿತ್ವ ಸರಳವಾಗಿದೆ; ಅವನಲ್ಲಿ ಹೋರಾಟ, ಸಂಘರ್ಷಗಳಿಲ್ಲ. ಅವನ ಕಲೆಯೇ 'ಸಂಧ್ಯಾರಾಗ'ದಲ್ಲಿ ಮುಖ್ಯವಾಗಿರುವುದರಿಂದ, ಅವನ ಕಲೆಗೆ ಹೋರಾಟವಿರಬೇಕಿತ್ತು. ಆದರೆ ಅವನ ಕಲೆ ನಿರಾತಂಕವಾಗಿದೆ. ಕಲಾವಿದನಾಗಿ ಲಕ್ಷ್ಮಣನಿಗೆ ಯಾವುದೇ ಪರಿಶ್ರಮವಿಲ್ಲ. ಜೀವನದ ಸಮಸ್ಯೆಗಳು ಅವನ ಕಲೆಯನ್ನು ಮಂಕುಗೊಳಿಸುತ್ತವೆ. ಆದರೆ 'ಸುಬ್ಬಣ್ಣ'ನ ವ್ಯಕ್ತಿತ್ವ ಸೆಣಸಾಟ-ಹೋರಾಟಗಳಿಂದ ಪರಿಪಕ್ವವಾಗುತ್ತವೆ; ಆತನ ಕಲೆಯೂ ಪ್ರಬುದ್ಧವಾಗುತ್ತದೆ.

'ಸುಬ್ಬಣ್ಣ' ಒಬ್ಬ ಕಲಾವಿದನಾಗಿರುವಂತೆ, ಅವನಲ್ಲಿ ವಿಚಾರವಾದದ ಹಲವು ಅಂಶಗಳು ಗೋಚರಿಸುತ್ತವೆ. ನಾವು ಹುಟ್ಟುವುದು ಏಕೆ? ನಮ್ಮ ಬಾಳ ಪಯಣ ಎಲ್ಲಿಗೆ ಸಾಗುತ್ತಿವೆ? ನಮ್ಮ ಜೀವನದ ಭ್ರಮೆಗಳೇನು? ಇಂತಹ ಹಲವು ಅಂಶಗಳು ಅವನನ್ನು ಕಾಡುತ್ತವೆ. ಆದರೆ ಲಕ್ಷ್ಮಣನಲ್ಲಿ ಇಂತಹ ದ್ವಂದ್ವಗಳಿಲ್ಲ. ಬಹುಶಃ ಇದು, 'ಸುಬ್ಬಣ್ಣ'ನಿಗೆ ಅವನ ಜೀವನಾನುಭವ ನೀಡಿದ ಅರಿವಿರಬಹುದು. 'ಲಕ್ಷ್ಮಣ' ಹಾಗೂ 'ಸುಬ್ಬಣ್ಣ' ಇಬ್ಬರೂ ಕಲಾವಿದರು; ಸಂಗೀತಗಾರರು. ಆದರೂ ಅವರಿಬ್ಬರಲ್ಲಿ ಸಾಕಷ್ಟು ಅಂತರವಿದೆ.

ನಿಜವಾದ ಕಲೋಪಾಸಕನ ಗುರಿ ಸುಬ್ಬಣ್ಣನಿಗಿಲ್ಲ. ಅವನು ಸಂಗೀತಕ್ಕಾಗಿ ಸರ್ವಸ್ವವನ್ನು ಅರ್ಪಣೆ ಮಾಡುವುದಿಲ್ಲ; ಮಹಾಸಂಗೀತಗಾರನಾಗಿ ಬೆಳೆಯಬೇಕೆಂಬ ಧ್ಯಾನವು ಅವನಿಗಿದ್ದಂತಿಲ್ಲ. ಆದರೆ ಸಂಗೀತ ಕೊನೆಯವರೆಗೂ ಅವನ ಜೊತೆಯಲ್ಲಿಯೇ ಉಳಿಯುತ್ತದೆ. ಅದರಿಂದ ಬೇರ್ಪಡುವುದು ಸುಬ್ಬಣ್ಣನಿಗೆ ಸಾಧ್ಯವಾಗುವುದೇ ಇಲ್ಲ.

'ಲಕ್ಷ್ಮಣ' ಹುಟ್ಟುಕಲಾವಿದ. ಅದನ್ನು ಅನುಪಮ ಸಿದ್ಧಿಯೆಡೆಗೆ ಅವನು ಬೆಳೆಸುತ್ತಾನೆ. ಅಪೂರ್ವವಾದ ಪರಮಸಿದ್ಧಿಯನ್ನು, ಪರಿಪೂರ್ಣತೆಯನ್ನು ತನ್ನ ಸಂಗೀತದಲ್ಲಿ ಸಾಧಿಸುತ್ತಾನೆ. ಆದರೆ ವ್ಯಕ್ತಿಯಾಗಿ ಅವನ ಅಸಮರ್ಥತೆ ಕಣ್ಣಿಗೆ ರಾಚುತ್ತದೆ.

**"ಬ್ರಹ್ಮಾಂಡದ ದೈನ್ಯರಸಕಟಾಹದ ಪಕ್ಕದಲ್ಲಿ ನಿಂತು ಸಣ್ಣ ಒಂದ ರಂಧ್ರವನ್ನು ಕೊರೆದ ಹುಡುಗನಂತೆ"**[೧] – ಸುಬ್ಬಣ್ಣ.

**"ಗಾಯಕನು ಸಂಧ್ಯಾರಾಗದಲ್ಲಿ ತನ್ನ ಆತ್ಮಪ್ರಣತಿಯನ್ನು ತೇಲಿಬಿಟ್ಟಿದ್ದನು...... ತನ್ನ ಜೀವನದ ಸಂಧ್ಯಾರಾಗವನ್ನು ಹೇಳಿ ಮುಗಿಸಿದನು"**[೨]

ಕಲಾವಿದನ ಕಲೆಗೆ, ಜೀವನಕ್ಕೆ, ಅನನ್ಯ ಪ್ರೇರಣೆಯನ್ನೊದಗಿಸುವ ಶಕ್ತಿಯುತವಾದಂತಹ ಪಾತ್ರಗಳು ಎರಡೂ ಕೃತಿಗಳಲ್ಲೂ ಮೂಡಿ ನಿಂತಿದೆ. ಮುಖ್ಯವಾಗಿ ಅವು ಸ್ತ್ರೀ ಪಾತ್ರಗಳಾಗಿರುವುದು ವಿಶಿಷ್ಟವಾಗಿವೆ. 'ಸುಬ್ಬಣ್ಣ' ಕೃತಿಯ ಲಲಿತ, 'ಸಂಧ್ಯಾರಾಗ'ದ 'ಜಯಾ' ಎರಡೂ ಪಾತ್ರಗಳೂ ಚಿರಸ್ಮರಣೀಯವಾದವು. ಮುಖ್ಯ ಪಾತ್ರಗಳನ್ನೂ ಮೀರಿ ಬೆಳೆಯುವಂತಹ ಸತ್ವವನ್ನು ಪಡೆದಿವೆ.

'ಸುಬ್ಬಣ್ಣ' ಕೃತಿಯಲ್ಲಿ 'ಲಲಿತ'ಳ ಪಾತ್ರವಂತೂ ಬಹಳ ರಮಣೀಯವಾಗಿದೆ. ಲಲಿತ ಇಲ್ಲದ್ದಿದ್ದರೆ, ಸುಬ್ಬಣ್ಣ ಏನಾಗುತ್ತಿದ್ದನೋ, ಆದರೆ ಲಲಿತ ಅವನ ವ್ಯಕ್ತಿತ್ವವನ್ನು ರೂಪಿಸುತ್ತಾಳೆ. ಸುಬ್ಬಣ್ಣನ ಆತ್ಮಸಂಸ್ಕಾರಕ್ಕೆ ಲಲಿತಳೂ ಕಾರಣ. ಅವಳ ನಿಷ್ಠೆ, ಭಕ್ತಿ, ಪತಿಯ ಬಗೆಗಿನ ಪ್ರೇಮ ಶ್ರದ್ಧೆಯ ಭಾವಗಳು ಮನ ತುಂಬುತ್ತವೆ, ಚಿರಕಾಲ ಉಳಿಯುತ್ತವೆ. ಲಲಿತಳಲ್ಲಿ ಸಹನೆಯಿದೆ, ಸುಬ್ಬಣ್ಣನಿಗಿಂತಲೂ ಹೆಚ್ಚಿನದಾದ ವಿವೇಕವಿದೆ. ಸುಬ್ಬಣ್ಣನನ್ನು ದೈವಿಕ ಮಾರ್ಗಕ್ಕೆ ತರುವುದು, ಬದುಕಲು ಕಲಿಸುವುದು ಅವಳ ಶ್ರೇಷ್ಠತೆ. ಲಲಿತಳಿಗೆ ಸುಬ್ಬಣ್ಣನೇ ಪ್ರಪಂಚ, ಸರ್ವಸ್ವ, ಸುಬ್ಬಣ್ಣನ ಬದುಕನ್ನು ಹೊಸ ರೀತಿಯಿಂದ ಆರಂಭಿಸಿ, ಅವನ ರಕ್ಷಣೆಗೆ ನಿಂತಳು. ಸುಬ್ಬಣ್ಣನಿಗೆ ಅಗತ್ಯವಿದ್ದ ಮಮತೆಯನ್ನು ಅವಳು ನೀಡುತ್ತಾಳೆ. ತನ್ನ ಸುಖ–ಸಂತೋಷ, ಆಕಾಂಕ್ಷೆಗಳನ್ನೂ ಮರೆತು ಬದುಕುವ ವಿಶಾಲ ಮನಸ್ಸಿನ ಪಾತ್ರ ಲಲಿತ. ಲಲಿತಳ ಪಾತ್ರದಲ್ಲಿ ಎಷ್ಟು ಸಂಯಮ–ಸಹನೆಗಳು ಇವೆಯೋ ಅಷ್ಟೇ ಧೃಡತೆಯೂ ಇದೆ. ಆದ್ದರಿಂದಲೇ ಲಲಿತ ಸುಲಭವಾಗಿ ಓದುಗರನ್ನು ತನ್ನೆಡೆಗೆ ಸೆಳೆದುಕೊಳ್ಳುತ್ತಾಳೆ. ಜೀವನದಲ್ಲಿ ಒಂದು ಉನ್ನತ ಸ್ತರವನ್ನು ಸೇರಿ, ಸಮಸ್ತ ಸಂಸ್ಕಾರಗಳನ್ನು ಲಲಿತ ಸಾಧಿಸಿದ್ದಳೆಂಬ ನಿರೂಪಕರ ಮಾತು ಅತಿಶಯೋಕ್ತಿಯೆನಿಸುವುದಿಲ್ಲ. ಲಲಿತಳ ಜೀವನ; ವ್ಯಕ್ತಿತ್ವಗಳ ಪ್ರಭಾವ ಸುಬ್ಬಣ್ಣನ್ನಷ್ಟೇ ಅಲ್ಲ, ಓದುಗರನ್ನೂ ಗಾಢವಾಗಿ ಆವರಿಸಿವೆ.

'ಸುಬ್ಬಣ್ಣ'ನ ಆತ್ಮಯಾತ್ರೆಗಿಂತ, ಲಲಿತಳ ಆತ್ಮಯಾತ್ರೆ ಸಾಕಷ್ಟು ಮುಂದುವರೆದಿದೆ.

'ಸಂಧ್ಯಾರಾಗ'ದಲ್ಲಿ ಜಯಾಳ ಪಾತ್ರವೂ ಗಮನ ಸೆಳೆಯುತ್ತದೆ. ಜಯಾಳ ಪಾತ್ರ ಮುಖ್ಯ ಪಾತ್ರವಾದ ಲಕ್ಷ್ಮಣನನ್ನೂ ಮೀರಿ ಬೆಳೆಯಲು ಸಾಧ್ಯವಿತ್ತು. ಆದರೆ ಹಾಗೆ ಮೀರಲು ಲೇಖಕರು ಅವಕಾಶ ನೀಡಿಲ್ಲ. ಈ ಓನ್ನಲೆಯಲ್ಲಿ ಜಯಾಳ ಪಾತ್ರಪೋಷಣೆ ಸರಿಯಾದರೀತಿಯಲ್ಲಿ ಆಗಿಲ್ಲವೆನಿಸುತ್ತದೆ. ಜಯಾ, ಲಲಿತಳಂತೆ ಪೂರ್ಣ

---

೧ 'ಸುಬ್ಬಣ್ಣ'–ಶ್ರೀನಿವಾಸ. ಪು.ಸಂ. ೫೦

೨ 'ಸಂಧ್ಯಾರಾಗ' – ಅ.ನ.ಕೃ.ಪು.ಸಂ–೧೭೪

ಜೀವನವನ್ನು ಕಂಡು ಅನುಭವಿಸಿ ಅಂತ್ಯ ಕಂಡವಳಲ್ಲ. ಆಕೆಯ ಮರಣ ಬಹಳ ಅನಿರೀಕ್ಷಿತ, ಇದ್ದಕ್ಕಿದ್ದಂತೆ ಒಂದೇ ಕ್ಷಣದಲ್ಲಿ ಅವಳ ಸಾವು ನಮ್ಮ ಕಣ್ಣ ಮುಂದೆ ನಿಲ್ಲುತ್ತದೆ. ಜಯಾಳ ವ್ಯಕ್ತಿತ್ವವನ್ನು ಸಮರ್ಪಕವಾಗಿ ಬೆಳೆಸಲಾಗದೆ, ಅವಳನ್ನು ಮುಗಿಸಿಬಿಟ್ಟರುವಂತೆ ತೋರುತ್ತದೆ. ಆದರೆ ಅದೇ ಜಯ ಮುಂದೆ ಒಂದು ಅಪೂರ್ವ ಶಕ್ತಿಯಾಗಿ ಬೆಳೆಯುತ್ತಾಳೆ. ಜಯಾಳ ಪಾತ್ರವನ್ನು ಒಬ್ಬ ವ್ಯಕ್ತಿಯಾಗಿ ಮುನ್ನಡೆಸುವುದಕ್ಕಿಂತ ಹೆಚ್ಚಿನ ಅನುಕೂಲ ಶಕ್ತಿಯಾಗಿ ಮುನ್ನಡೆಸುವಲ್ಲಿ ಲೇಖಕರಿಗೆ ಒದಗಿದೆ.

ಲಲಿತ ಸುಬ್ಬಣ್ಣನ ಬದುಕನ್ನು ಮತ್ತೆ ಹೊಸ ರೀತಿಯಿಂದ ಆರಂಭಿಸುವಂತೆ, ಜಯಾ ಲಕ್ಷ್ಮಣನ ಸಂಗೀತವನ್ನು ಹೊಸ ರೀತಿಯಿಂದ ಮುನ್ನಡೆಸುತ್ತಾಳೆ. ಲಲಿತ ಸುಬ್ಬಣ್ಣನ ಬದುಕನ್ನು ತಿದ್ದುತ್ತಾಳೆ, ಜಯಾ ಲಕ್ಷ್ಮಣನ ಸಂಗೀತಕ್ಕೆ ಹೃದ್ಯತೆಯನ್ನು ಒದಗಿಸುತ್ತಾಳೆ. ಲಲಿತ, ಜಯಾ ಇಬ್ಬರೂ ಕಲಾವಿದರ ಬದುಕಿನಲ್ಲಿ ಅತ್ಯದ್ಭುತ ಶಕ್ತಿಯಾಗಿ, ಸ್ಫೂರ್ತಿಯ ಸೆಲೆಯಾಗಿ, ಚೈತನ್ಯ ತುಂಬುತ್ತಾರೆ. ಮುಖ್ಯ ಪಾತ್ರಗಳಷ್ಟೇ ಪರಿಣಾಮಕಾರಿಯಾಗಿ ಅರಳಿ ನಿಂತಿರುವ ಈ ಪಾತ್ರಗಳು ಓದುಗರ ಮನಸ್ಸಿನಲ್ಲಿ ಅಚ್ಚಳಿಯದಂತೆ ಉಳಿಯುತ್ತವೆ.

'ಸುಬ್ಬಣ್ಣ' ಕೃತಿಯಲ್ಲಿ ವ್ಯಕ್ತಿಯ ಕೆಡುಕು, ಅತಿರೇಕ, ಅಸಹಜತೆಗಳನ್ನು ಬಿಂಬಿಸುವಂತಹ ಪಾತ್ರಗಳಿಲ್ಲ. ಆದರೆ ಹಾಗೆಂದು, ಇಲ್ಲಿನ ಪಾತ್ರಗಳೆಲ್ಲಾ ಔನ್ನತ್ಯದ ಶಿಖರವನ್ನೇರಿ ಜೀವನದಿಂದ ದೂರ ನಿಲ್ಲುವ ಪಾತ್ರಗಳಾಗಿಲ್ಲ. ಮಾನವ ಸಹಜವಾದ ಮಿತಿ-ದೌರ್ಬಲ್ಯಗಳು, ವ್ಯಕ್ತಿತ್ವದ ಕೊರತೆಗಳು-ಇಂತಹ ಸಣ್ಣ-ಪುಟ್ಟ ವಿಚಾರಗಳನ್ನು ಒಳಗೊಂಡಂತಹ ಪಾತ್ರಗಳಾಗಿ ಹಿತ-ಮಿತವಾಗಿ ಮೂಡಿ ಬಂದಿವೆ. ಅವು ಎಲ್ಲಿಯೂ ಕೃತಕವೆನಿಸುವುದಿಲ್ಲ.

ಮುಖ್ಯವಾಗಿ ಇದು 'ಸುಬ್ಬಣ್ಣ'ನ ಆತ್ಮಯಾತ್ರೆಯನ್ನೇ ಪ್ರಧಾನ ಆಶಯವನ್ನಾಗಿ ಹೊಂದಿರುವುದರಿಂದ, ಇಲ್ಲಿ ಬರುವ ಪಾತ್ರಗಳು ಈ ಆಶಯಕ್ಕಾಗಿ ಕ್ರಿಯೆ-ಪ್ರತಿಕ್ರಿಯೆಗಳನ್ನು ತೋರುತ್ತಿರುವಂತೆ ಮೇಲುನೋಟಕ್ಕೆ ಭಾಸವಾಗುತ್ತದೆ. ಹಾಗಿದ್ದರೂ ಒಂದೊಂದು ಪಾತ್ರಕ್ಕೂ ತನ್ನದೇ ಆದ ಅಸ್ತಿತ್ವವಿದೆ. ಕೃತಿಯಲ್ಲಿ ಅವು ವಿಭಿನ್ನವಾದ ಛಾಪನ್ನು ಮೂಡಿಸಿವೆ.

ಕಲಾವಿದರ ಬದುಕಿನಲ್ಲಿ 'ಹೆಣ್ಣು'ಗಳ ಸಂಖ್ಯೆ ಹೆಚ್ಚೆಂಬ ಭಾವನೆಯು ಬೆಳೆದು ಬಂದಿದೆ. ಆದರೆ 'ಸುಬ್ಬಣ್ಣ' ಕೃತಿಯಲ್ಲಾಗಲೀ, 'ಸಂಧ್ಯಾರಾಗ' ಕೃತಿಯಲ್ಲಾಗಲೀ ಇಂತಹ ಭಾವನೆಯು ಮೂಡಲು ಅವಕಾಶವಿರಲಿಲ್ಲ. ಅದರಲ್ಲೂ 'ಸುಬ್ಬಣ್ಣ' ಕೃತಿಯಲ್ಲಿ ವೇಶ್ಯೆ ನೀಲಸಾನಿಯ ಪಾತ್ರ ಬಂದಿರುವ ರೀತಿ ಬಹಳ ಸೊಗಸಾದುದು.

ನೀಲಸಾನಿಯ ಬಗೆಗೆ ಯಾವ ಒಂದು ಕ್ಷಣವೂ ಕೆಟ್ಟ ಭಾವನೆ ಮೂಡುವುದಿಲ್ಲ; ಬದಲಿಗೆ ಈ ಪಾತ್ರ ಸಾಕಷ್ಟು ಗೌರವವನ್ನು, ಪೂಜ್ಯ ಭಾವನೆಯನ್ನು ಪಡೆದುಕೊಳ್ಳುತ್ತದೆ. ನೀಲಸಾನಿಯ ಪಾತ್ರಕ್ಕೆ ಯಾವುದೇ ಅಶ್ಲೀಲತೆಯ ಅಥವಾ ಇನ್ನಾವುದೇ ಕೊಳಕು ಭಾವನೆಯ ಸೋಂಕು ತಗುಲಿಲ್ಲ. ಉಳಿದ ಪಾತ್ರಗಳೂ ಎಷ್ಟೇ ಸಣ್ಣದಿರಲಿ, ದೊಡ್ಡದಿರಲಿ, ಅದರದ್ದೇ ಆದ ಪ್ರಾಧಾನ್ಯತೆಯನ್ನು ಗಳಿಸಿಕೊಂಡಿವೆ.

ಪಿಟೀಲನ್ನು ಸುಬ್ಬಣ್ಣನಿಗೆ ಮರಳಿಸುವ ವೆಂಕಟರಮಣನ ಉತ್ಸಾಹ, ಲವಲವಿಕೆ, ಸುಬ್ಬಣ್ಣನ ಬದುಕಿಗೆ ಹೊಸ ಅರ್ಥ ನೀಡುವ ಸುಬೇದಾರರು ಮತ್ತು ಅವರ ಕುಟುಂಬದವರ ಆತ್ಮೀಯತೆ; ಯಜಮಾನಿಯ ಪಕ್ಷಪಾತ, ಹಟದ ಸ್ವಭಾವ, ಶಾಸ್ತ್ರಿಗಳ ಗಾಂಭೀರ್ಯ-ಘನತೆ-ಇವೆಲ್ಲವೂ ಜೀವಂತಿಕೆಯಿಂದ ಮೂರ್ತಿ ಭವಿಸಿವೆ.

ಇಷ್ಟೇ ಅಲ್ಲದೆ, ಸುಬ್ಬಣ್ಣನ ಗಾಯನವನ್ನು ಮನಸಾರೆ ಅಭಿನಂದಿಸುವ ಸಾಹುಕಾರರು, ಹಣ್ಣು ಕೊಡುವ ಮಗು, ಮಿಠಾಯಿ ಮಾರುವ ಮುದುಕಿ-ಈ ಯಾವ ಪಾತ್ರಗಳನ್ನೂ ನಾವು ಮರೆಯುವಂತಿಲ್ಲ.

'ಸಂಧ್ಯಾರಾಗ' ಕೃತಿಯಲ್ಲೂ ಭಾವನಾಪ್ರಧಾನವಾದ ಪಾತ್ರಗಳೇ ಹೆಚ್ಚಾಗಿ ಗೋಚರಿಸುತ್ತವೆ. ಹಾಗೂ ಇಲ್ಲಿ ಇವುಗಳ ಸಂಖ್ಯೆಯೂ ಅಪಾರವಾಗಿವೆ. ಆದರೆ ಇವು ತಮ್ಮ ಗುಣ-ಸ್ವಭಾವಗಳಲ್ಲಿ ವ್ಯತ್ಯಾಸಗಳನ್ನು ಪಡೆದಿಲ್ಲ. ಈ ಪಾತ್ರಗಳ ವರ್ತನೆ-ಸ್ವಭಾವಗಳು ಒಂದೇ ಹಾದಿಯಲ್ಲಿವೆ. ಅದರಲ್ಲೂ ಒಂದೊಂದು ಪಾತ್ರಗಳೂ, ಒಂದೊಂದು ಗುಣಗಳ ಪ್ರತೀಕವಾಗಿ ವರ್ತಿಸುವಂತೆ ತೋರಿ ಬರುತ್ತವೆ. ಒಳ್ಳೆಯ ಪಾತ್ರವಾಗಲೀ, ಕೆಟ್ಟ ಪಾತ್ರವಾಗಲೀ, ಔಚಿತ್ಯದ ಹಂತವನ್ನು ಮೀರಿ ಬೆಳೆದಂತೆಯೇ ಕಾಣಿಸುತ್ತದೆ.

'ರಾಮಚಂದ್ರ'ನ ಪಾತ್ರವಂತೂ ಇದಕ್ಕೆ ಉತ್ತಮ ಉದಾಹರಣೆ. ಅವನ ಪಾತ್ರದಲ್ಲಿ ಸ್ವಲ್ಪವಾದರೂ ಸಹಜತೆಯ ಸ್ಪರ್ಶವಿಲ್ಲ. ಅವನ ದುರ್ನಡತೆಗಳನ್ನು ಎಷ್ಟು-ಸಾಧ್ಯವೋ ಅಷ್ಟು ಕೃತಕವಾಗಿ ಚಿತ್ರಿಸಲಾಗಿದೆ. ಅವನ ವ್ಯಕ್ತಿತ್ವ ಅಧೋಮುಖಿಯಾಗಿ ಗೋಚರಿಸುತ್ತಲೇ ಹೋಗುತ್ತದೆ. ಈ ಪಾತ್ರದ ನಡವಳಿಕೆಯಲ್ಲಿ ಕಂಡು ಬರುವ ಅತಿರೇಕವೇ, ಪಾತ್ರಚಿತ್ರಣದ ಅತಿರೇಕವನ್ನೂ ಮನದಟ್ಟು ಮಾಡಿಕೊಡುತ್ತದೆ.

'ಸುಬ್ಬಣ್ಣ' ಕೃತಿಯಲ್ಲಿ ಇಂತಹ ಪಾತ್ರವೊಂದು ಕಂಡು ಬರುವುದೇ ಇಲ್ಲ. ಇನ್ನು 'ಸಂಧ್ಯಾರಾಗ'ದಲ್ಲಿ ಕಂಡು ಬರುವ ಇತರ ಪಾತ್ರಗಳತ್ತ ಗಮನ ಹರಿಸುವುದಾದರೆ. ಅವೂ ಸಹ ಒಂದು ಉನ್ನತ ಆದರ್ಶಮಯ ಹಂತದಲ್ಲೇ ನಡೆದಾಡುತ್ತವೆ. ಅತ್ತಿಗೆ-ನಾದಿನಿ, ಓರಗಿತ್ತಿ, ಸವತಿಯರ ಸಂಬಂಧಗಳನ್ನು ಬಿಂಬಿಸುವ ಪಾತ್ರಗಳು ಒಂದು ಕಲ್ಪನೆಗೆ ಸೀಮಿತವಾಗಿರುವಂತೆ ಕಾಣಬರುತ್ತವೆ.

'ಸುಬ್ಬಣ್ಣ' ಕೃತಿಯಲ್ಲಿ ಬರುವ ಸಣ್ಣ-ಪುಟ್ಟ ಮನಸ್ತಾಪಗಳು, ವೈಮನಸ್ಸುಗಳು ಇಲ್ಲಿನ ಅತ್ತೆ-ಸೊಸೆಯರ ಸಂಬಂಧದಲ್ಲಿ ಕಾಣಸಿಗುವುದಿಲ್ಲ ಬದಲಿಗೆ ಇಲ್ಲಿ ಮೀನಾಕ್ಷಮ್ಮ ತನ್ನ ಸೊಸೆಯರಾದ ಜಯಾ ಮತ್ತು ಪದ್ಮಳಿಗೆ ಆದರ್ಶವಾದ ಗೃಹಿಣಿ ಜೀವನದ ಹೆದ್ದಾರಿಯನ್ನೇ ನಿರ್ಮಿಸಿದ್ದಾರೆ. ಸಾವಿತ್ರಮ್ಮ-ಮೀನಾಕ್ಷಮ್ಮರ ಸವತಿ ಸಂಬಂಧ, ಶಾಂತ-ಜಯಾರ ಅತ್ತಿಗೆ ನಾದಿನಿಯರ ಸಂಬಂಧ ಒಡಹುಟ್ಟಿನ ಅನ್ಯೋನ್ಯತೆಯನ್ನು ಪಡೆದಿವೆ. ಅಂತೆಯೇ ಭಾರತದ ಶಾಮಣ್ಣ, ಶ್ರೀನಿವಾಸರಾಯರು, ಗೋಪಾಲ, ಶಾಂತ, ವೆಂಕಟೇಶ, ಈ ಮುಂತಾದ ಪಾತ್ರಗಳೂ ಒಳ್ಳೆಯತನವನ್ನೇ ತಮ್ಮ ಮುಖ್ಯ ಗುಣವನ್ನಾಗಿಸಿಕೊಂಡಿವೆ. ಹಾಗಾಗಿ ಇಲ್ಲಿನ ಪಾತ್ರಗಳು ಒಂದೇ ಮಾರ್ಗವನ್ನು ಹಿಡಿದಂತೆ ತೋರುತ್ತದೆ. ಇಂತಹ ಪಾತ್ರಚಿತ್ರಣ ತಪ್ಪು ಎನ್ನುವುದಕ್ಕಿಂತಲೂ, ಇನ್ನಷ್ಟು ಸಹಜವಾಗಿ ಮೂಡಬಹುದಾದ ಅಪೇಕ್ಷೆಯನ್ನು ನಮ್ಮಲ್ಲಿ ಹುಟ್ಟು ಹಾಕುತ್ತವೆ. ಹೀಗೆ ಎರಡೂ ಕೃತಿಗಳನ್ನು ವಿವಿಧ ಪಾತ್ರಗಳು ಮುನ್ನಡೆಸಿವೆ.

## ಇ. ದೃಷ್ಟಿ ಸಂಬಂಧ :–

ಪ್ರತಿಯೊಬ್ಬ ಲೇಖಕರ ದೃಷ್ಟಿಕೋನವೂ ಭಿನ್ನವಾಗಿರುತ್ತವೆ. ಒಂದು ನಿರ್ದಿಷ್ಟ ವಸ್ತುವಿಗೆ ಸಂಬಂಧಿಸಿದಂತೆ ಏಕ ಮತ್ತು ಭಿನ್ನ ಅಭಿಪ್ರಾಯಗಳು ಲೇಖಕರಲ್ಲಿ ಹುಟ್ಟುವುದು ಸಹಜವಾಗಿದೆ. ಹುಟ್ಟಿ–ಬೆಳೆದು ಬಂದ ಪರಿಸರ, ಪ್ರಭಾವಗಳು, ಜೀವನಾನುಭವ, ಇಂತಹ ಹಲವು ಅಂಶಗಳು ಮನೋಧರ್ಮ, ದೃಷ್ಟಿ, ಧೋರಣೆಗಳಲ್ಲಿ ಮೇಳವಿಸಿರುತ್ತದೆ. ಅಂತೆಯೇ ಆಧುನಿಕ ವಿಚಾರಧಾರೆಗಳೂ ಲೇಖಕನ ವ್ಯಕ್ತಿತ್ವದಮೇಲೆ ಪ್ರಭಾವ ಬೀರಬಲ್ಲದು. ಈ ಹಿನ್ನಲೆಯಲ್ಲಿ 'ಸುಬ್ಬಣ್ಣ' ಹಾಗೂ 'ಸಂಧ್ಯಾರಾಗ' ಕೃತಿಗೆ ಸಂಬಂಧಿಸಿದಂತೆ ಈ ಇಬ್ಬರೂ ಲೇಖಕರ ದೃಷ್ಟಿ–ಧೋರಣೆಗಳನ್ನು ಅರಿಯುವ ಅಗತ್ಯವಿದೆ. ಇಲ್ಲಿ ಮುಖ್ಯವಾಗಿ ಪಾತ್ರವಹಿಸುವುದು ಜೀವನ ಮತ್ತು ಕಲೆ. ಇವುಗಳ ನಡುವಿನ ಆಯ್ಕೆಯಲ್ಲಿ ಎರಡೂ ಕೃತಿಗಳು ಒಂದೊಂದನ್ನು ಆರಿಸಿಕೊಂಡಿವೆ. 'ಸುಬ್ಬಣ್ಣ' ಕೃತಿಯಲ್ಲಿ ಬದುಕಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡಲಾಗಿದ್ದರೆ, 'ಸಂಧ್ಯಾರಾಗ'ಕೃತಿಯಲ್ಲಿ ಜೀವನವನ್ನೂ ಮೀರಿ 'ಕಲೆಗೆ' ಹಿರಿದಾದ ಮಹತ್ವ ಕೊಡಲಾಗಿದೆ. ಇದಕ್ಕೆ ಮುಖ್ಯವಾಗಿ ಲೇಖಕರ ವಿಭಿನ್ನ ದೃಷ್ಟಿಕೋನವೇ ಕಾರಣ.

ಮಾಸ್ತಿ ವೆಂಕಟೇಶ ಅಯ್ಯಂಗಾರರು ನವೋದಯ ಪಂಥಕ್ಕೆ ಸೇರಿದವರಾದರೆ, ಅ.ನ.ಕೃ ಪ್ರಗತಿಶೀಲ ಪಂಥದ ಸೇನಾನಿ. ಎರಡೂ ಪಂಥಗಳಿಗೂ ಕೆಲವೊಂದು ಮೌಲ್ಯಗಳು ಒಪ್ಪಿತವಾಗಿದ್ದವು ಆ ಮೌಲ್ಯಗಳು ತೀರಾ ಭಿನ್ನತೆಯನ್ನೇನು ಪಡೆದಿರಲಿಲ್ಲ. ತ್ಯಾಗ, ಪ್ರಾಮಾಣಿಕತೆ, ಅನುಕಂಪ, ಪ್ರೇಮ, ಸ್ನೇಹ, ದೇಶಪ್ರೇಮ ಇಂತಹ ಹಲವು ಮೌಲ್ಯಗಳನ್ನು ಎರಡೂ ಪಂಥಗಳು ಒಪ್ಪಿದ್ದವು. ಬಾಳು ಅರ್ಥಪೂರ್ಣ ಸ್ವೀಕಾರಾರ್ಹ, ಎಂದು ಎರಡೂ ಪಂಥಗಳಿಗೂ ನಂಬಿಕೆಯಿತ್ತು. ಆದರೆ ಬದುಕನ್ನು ಇನ್ನೂ ಹೆಚ್ಚು ನಿರ್ಮಲಗೊಳಿಸಬೇಕು, ಹಸನುಗೊಳಿಸಬೇಕೆಂಬ ತೀವ್ರ ಕಾಳಜಿ ಪ್ರಗತಿಶೀಲರದ್ದು. ಭಾರತದ ಹಿಂದಿನ ಸಾಂಸ್ಕೃತಿಕ ಪರಂಪರೆಯಲ್ಲಿ ಎರಡೂ ಪಂಥದ ಬರಹಗಾರರಿಗೆ ಹೆಮ್ಮೆಯಿದೆ. ಮುಖ್ಯವಾಗಿ ಮನುಷ್ಯನ ಸ್ವಭಾವ ಉದಾತ್ತವಾದುದು ಎಂಬ ನಂಬಿಕೆಯ ಅಂಶ, ಇವರ ಪಾತ್ರಸೃಷ್ಟಿಯ ಮೂಲ ಆಶಯವಾಗಿ ಕಂಡುಬರುತ್ತದೆ.

ಈ ಮೇಲಿನ ಹಲಕೆಲವು ಸಂಗತಿಗಳು 'ಸುಬ್ಬಣ್ಣ' ಮತ್ತು 'ಸಂಧ್ಯಾರಾಗ' ಎರಡೂ ಕೃತಿಗಳಲ್ಲಿಯೂ ಗೋಚರಿಸುತ್ತವೆ. 'ಸುಬ್ಬಣ್ಣ' ಕೃತಿಯಲ್ಲಿ ಕಂಡು ಬರುವ ಪ್ರಮುಖ ದೃಷ್ಟಿ ಬಾಳು ಸ್ವೀಕಾರಾರ್ಹ ಎಂಬುದು. 'ಸುಬ್ಬಣ್ಣ'ನ ಪಾತ್ರದ ಮೂಲಕವೇ ಇದು ಸಾಧಿತವಾಗುತ್ತದೆ. ಬಾಳಿನಲ್ಲಿ ಸುಬ್ಬಣ್ಣನಿಗೆ ಒದಗುವಂತಹ ಶೋಕ ಪರಂಪರೆ ಅವನ ಆತ್ಮಸಂಸ್ಕಾರಕ್ಕೆ ಕಾರಣವಾಗುವಂತೆ, ಅವನಲ್ಲಿ ಶೂನ್ಯತೆ, ವಿರಕ್ತಿಯನ್ನೂ ತುಂಬುತ್ತವೆ. ತನ್ನ ಅಹಂಕಾರ, ಸ್ವಾರ್ಥಗಳನ್ನು ಕಳಚಿಕೊಂಡು, ಆತ ಯೋಗಿಯಾಗುವುದರೆಡೆಗೆ ಹೆಜ್ಜೆ ಇಡುತ್ತಾನೆ. ಹಾಗೆಂದು ಸುಬ್ಬಣ್ಣ ಸಂಪೂರ್ಣವಾಗಿ ಯೋಗಿಯಾದನೇ? ಇಲ್ಲ. ಅವನ ಜೀವನದಲ್ಲಿ ಎದುರಾಗುವ ಪ್ರತಿಯೊಂದು ಸನ್ನಿವೇಶ, ವ್ಯಕ್ತಿಗಳು ಅವನನ್ನು ಜೀವನದೆಡೆಗೇ ಸೆಳೆಯುತ್ತವೆ.

'ಸುಬ್ಬಣ್ಣ' ಪಿಟೀಲನ್ನು ನದಿಗೆ ಎಸೆಯುವುದು, ಜೀವನ ಸಂಸಾರದ ರಾಟೆಗೆ ಸಿಲುಕದಂತೆ ನಡೆದುಕೊಳ್ಳುವುದು, ಯಾರದೋ ಮನೆಯ ಜಗುಲಿ, ಯಾವುದೋ ಮರದ ಕೆಳಗೆ ತನ್ನ ದಿನಗಳನ್ನು ನೂಕುವುದು–ಇವೆಲ್ಲಾ ಸನ್ನಿವೇಶಗಳು, ಸುಬ್ಬಣ್ಣ ಜೀವನದಿಂದ ಹೊರಗುಳಿದಿರುವಂತೆಯೂ, ಒಬ್ಬ ವಿರಾಗಿಯಂತೆಯೂ ತೋರಿಸುತ್ತದೆ. ಆದರೆ ಕೃತಿಯಲ್ಲಿ ಇವನ್ನು ಮೀರಿ, ಮುಖ್ಯ ತಿಳಿವೊಂದು ಹೊರಬರಲು ತವಕಿಸುತ್ತಿರುವುದು ಸ್ಪಷ್ಟವಿದೆ.

ಅವನು ವೆಂಕಟರಮಣನಿಗೆ ಪ್ರೀತಿಯಿಂದ ಪಾಠ ಹೇಳಿಕೊಡುವುದು, ಸುಬೇದಾರರ ಕುಟುಂಬದೊಡನೆ ಆತ್ಮೀಯವಾಗಿ ಬೆರೆಯುವುದು, ಪಿಟೀಲನ್ನು ಕಳೆದುಕೊಂಡು ಒದ್ದಾಡುವುದು, ಇವೆಲ್ಲವೂ, ಸುಬ್ಬಣ್ಣನಲ್ಲಿ ಮಿಡಿಯುವ ಜೀವನ ಪ್ರೀತಿಯನ್ನು ಹೊರಗೆಳೆಯುತ್ತವೆ.

ಜೀವನದ ಕೊನೆಯ ಹಂತದವರೆಗೂ, ಅವನಲ್ಲಿ ಈ ಅಂಶವೇ ಸ್ಪಷ್ಟವಾಗಿ ಕಂಡುಬರುತ್ತವೆ. ಅವನು ಏಕಾಂತಕ್ಕೆ ಮರಳಬೇಕೆಂದುಕೊಳ್ಳುವಷ್ಟೂ ವಿವಿಧ ಮಾನವ ಸಂಬಂಧಗಳು ಅವನನ್ನು ಕಟ್ಟಿಹಾಕುತ್ತವೆ. 'ಸುಬ್ಬಣ್ಣ' ಮುಕ್ತಿ ಪಡೆಯವ ಹಾದಿಯೇ ಲೇಖಕರ ಜೀವನದೃಷ್ಟಿಯನ್ನು ನಿಚ್ಚಳವಾಗಿ ತೆರೆದಿಡುತ್ತವೆ. ಅವನ ಮುಕ್ತಿಯ ಮಾರ್ಗ ಜೀವನವನ್ನು ಸ್ವೀಕರಿಸುವುದರಲ್ಲೇ ಇದೆ. ಜೀವನದ ಸಂಕಷ್ಟಗಳು ಅವನಿಗೆ ವಿರಕ್ತಿಯನ್ನು ಭೋಧಿಸಿದ್ದೇನೋ ನಿಜ. ಆದರೆ ಆ ವಿರಕ್ತಿ ಅವನ ಜೀವನದಲ್ಲಿ ಶೂನ್ಯವನ್ನೂ ತುಂಬಿದ್ದವು. ಈ ಶೂನ್ಯವನ್ನು ಹಾಗೆಯೇ ಉಳಿಸಿ, ಸುಬ್ಬಣ್ಣನನ್ನು ಒಬ್ಬ ಮಹಾಯೋಗಿಯಂತೆ ತೋರಿಸಿಬಿಡುವ ಸಾಧ್ಯತೆ ಇತ್ತು. ಆದರೆ ಮಾಸ್ತಿಯವರ ದೃಷ್ಟಿ ಇದಲ್ಲ. ಜೀವನವಿಮುಖಿ ದೃಷ್ಟಿಕೋನ ಅವರಲ್ಲಿ ಕಂಡುಬರುವುದೇ ಇಲ್ಲ. ಸುಬ್ಬಣ್ಣನ ಬದುಕಿನ ಶೂನ್ಯವನ್ನು ಸಹಮಾನವ ಪ್ರೇಮದ ಅಮೃತ ತುಂಬುತ್ತದೆ. ಯಾರೋ ಅಪರಿಚಿತರನ್ನೂ ತನ್ನವರನ್ನಾಗಿ ಮಾಡಿಕೊಂಡ ಸುಬ್ಬಣ್ಣನ ಅಂತರಂಗದ ಪ್ರೇಮವೇ, ಅವನ ಜೀವನ ಸಂಸ್ಕಾರಕ್ಕೆ ಕಾರಣವಾಗಿದೆ.

ಮುಕ್ತಿಯೆನ್ನವುದನ್ನು ಜೀವನದಿಂದಾಚೆಗೆ ಅರಸಿ ಪಡೆಯ ಬೇಕಾಗಿಲ್ಲ; ಪಡೆಯುವಂತದ್ದೂ ಅಲ್ಲ; ಅದು ಜೀವನದಲ್ಲೇ ಕಂಡುಕೊಳ್ಳಬೇಕಾದ ಸತ್ಯ. ಮರಣದಲ್ಲಿ ಅದನ್ನು ಸಾಧಿಸುವಂತದಲ್ಲ, ಮರ್ತ್ಯಮಾನವ ಹೃದಯದಲ್ಲೇ ಅದು ವ್ಯಾಪಿಸಿಕೊಂಡಿದೆ. ಬದುಕುವ ರೀತಿಯ ಮೂಲಕ ಆ ನೆಲೆಯನ್ನು ಮುಟ್ಟಬಹುದೆಂದು ಮಾಸ್ತಿಯವರು ಸುಬ್ಬಣ್ಣ ಪಾತ್ರದ ಮೂಲಕ ಸಾರಿದ್ದಾರೆ.

"ಜೀವನವೆನ್ನವುದು ಸಭಿಕರಿಗೆ ವೇಷ ಹಾಕಿಕುಣಿಸುವ ಬಯಲು ನಾಟಕ" (ಸುಬ್ಬಣ್ಣ ಪು.ಸಂ. ೪೨)

ಎಂಬುದು, ಜೀವನ ಸತ್ಯದ ಒಂದು ಮುಖವಾದರೆ,

"ಸ್ವಾಮಿ ಬಿಟ್ಟು ಪಡುವ ಸುಖ ಸುಖವಲ್ಲ. ಕಟ್ಟಿಕೊಂಡು ಆಮೇಲೆ ಬಿಡಬಹುದು.......

ಸಂಸಾರ ಮಾಡದೆಯೇ ಇದ್ದಿದ್ದರೆ ಇಷ್ಟು ಸಂಸ್ಕಾರ ಹೇಗಾಗುತ್ತಿತ್ತು? (ಸುಬ್ಬಣ್ಣ – ಪು.ಸಂ ೭೧)

ಇದು ಅದರ ಇನ್ನೊಂದು ಮುಖ. ಇದೇ ಮಾಸ್ತಿಯವರು ಇಲ್ಲಿ ಸ್ಥಾಪಿಸಿರುವ ಸತ್ಯಾಂಶ. 'ಸಂಧ್ಯಾರಾಗ'ದಲ್ಲಿ

ಇದಕ್ಕಿಂತಲೂ ಭಿನ್ನವಾದ ನೆಲೆಗಳನ್ನು ಗುರುತಿಸಬಹುದು. ಇಲ್ಲಿಯೂ ಜೀವನ ಅರ್ಥಪೂರ್ಣವೆಂಬ ವಿಚಾರ ಸಾಧಿತವಾಗಿದೆ. ಅಂತೆಯೇ ಇಲ್ಲಿ ಕಂಡು ಬರುವ ಹಲವು ಪಾತ್ರಗಳು ಈ ಜೀವನ ಕಲೆಯನ್ನು ಯಶಸ್ವಿಯಾಗಿ ನಿರ್ವಹಿಸಿವೆ. ಉತ್ಕೃಷ್ಟ ನೆಲೆಯನ್ನು ಮುಟ್ಟಿವೆ. ಈ ಅರ್ಥಪೂರ್ಣವಾದ ಬದುಕನ್ನು ಕಲೆಯ ಮೂಲಕ ಸಾರ್ಥಕ್ಯದ ಸಿದ್ಧಿಗೆ ಒಯ್ಯುವ ಮನೋಧರ್ಮ ಇಲ್ಲಿ ಮುಖ್ಯವಾಗಿ ಮೂಡಿ ಬಂದಿದೆ. ಕಡೆಯ ಹಂತದಲ್ಲಂತೂ ಕಲೆಯ ಕೈ ಮೇಲಾಗುತ್ತದೆ. ಜೀವನವನ್ನೂ ಮೀರಿ ನಿಲ್ಲುವ ಮಹಾನ್ ಶಕ್ತಿಯಾಗಿ ಇದು ಗೋಚರಿಸುತ್ತದೆ.

ಬದುಕಿಗೆ ವಿಶಿಷ್ಟ ಅರ್ಥವನ್ನು ತಂದುಕೊಡುವುದು, ಮರಣವನ್ನು ಚಿರಸ್ಮರಣೀಯಗೊಳಿಸುವುದು ಈ ಎರಡನ್ನೂ ಇಲ್ಲಿ ಏಕಕಾಲದಲ್ಲಿ ಕಲೆಯ ಮೂಲಕ ಸಾಧಿಸಲಾಗಿದೆ. ಇಲ್ಲಿ ಕಲೆಯೇ ಸಾರಸರ್ವಸ್ವ, ಬದುಕಿನ ಕೇಂದ್ರಬಿಂದು. ಕಲೆಗಾಗಿಯೇ ಇಡೀ ಜೀವನವನ್ನು ಮೀಸಲಿಡುವುದು, ಬದುಕನ್ನೇ ಕಲೆಯಲ್ಲಿ ಲೀನಗೊಳಿಸುವುದೂ ಅದ್ಭುತ ಸಾಧನೆ–ಇದು ವರ್ಣನೆಗೆ ನಿಲುಕುವಂತದ್ದಲ್ಲ. ಇಂತಹ ದಿವ್ಯವಾದ ಪರಿಕಲ್ಪನೆ, ಇಲ್ಲಿ ನಮ್ಮನ್ನು ಬೆರಗುಗೊಳಿಸುವಂತೆ ಮೈತಳೆದಿದೆ. ಅಂತೆಯೇ ಇಲ್ಲಿ ಲಕ್ಷ್ಮಣ ಪೂರ್ವಿಕಲ್ಯಾಣಿಯ ಸಿದ್ಧಿ– ಸಾಕ್ಷಾತ್ಕಾರಗಳಿಗಾಗಿ ತನ್ನ ಜೀವನವನ್ನೇ ಮೀಸಲಿಡುವುದಲ್ಲದೇ, ಆತ್ಮವನ್ನೇ ಅದರಲ್ಲಿ ಲೀನಗೊಳಿಸುತ್ತಾನೆ. 'ಸುಬ್ಬಣ್ಣ' ಕೃತಿಯಲ್ಲಿ ಜೀವನಕ್ಕೆ ಮೊದಲ ಆದ್ಯತೆ ನೀಡಿದ್ದರೆ, 'ಸಂಧ್ಯಾರಾಗ'ದಲ್ಲಿ ಕಲೆಯೇ ಪ್ರಧಾನ ಪಾತ್ರವಹಿಸಿವೆ. ಈ ಹಿನ್ನಲೆಯಲ್ಲಿಯೇ ಲಕ್ಷ್ಮಣ ಒಬ್ಬ ಮಹಾನ್ ಸಂಗೀತಗಾರನಾಗಿ ಬೆಳೆದರೆ, ಸುಬ್ಬಣ್ಣ ಉತ್ತಮ ವ್ಯಕ್ತಿಯಾಗಿ ಅರಳುತ್ತಾನೆ.

ಸಾಂಪ್ರದಾಯಿಕ ಮೌಲ್ಯಗಳು ಎರಡೂ ಕೃತಿಗಳಲ್ಲೂ ಸ್ಥಾನ ಪಡೆದಿದೆ. ಸಂಧ್ಯಾರಾಗದಲ್ಲಿ ಶ್ರೀನಿವಾಸರಾಯರು, ಮೀನಾಕ್ಷಮ್ಮನವರ ಜೀವನ ಈ ಮೌಲ್ಯಗಳಿಂದ ಹಾಸುಹೊಕ್ಕಾಗಿದೆ. ರಾಯರು ಇರುವಂತಹ ಸಮಾಜದಲ್ಲಿ ಕಿಸಾನ ಸಭೆಗಳು ತಲೆ ಎತ್ತುವ ಸಾಧ್ಯತೆಯೇ ಇರಲಿಲ್ಲ. ಪುರಾಣ, ಪೂಜೆ, ವ್ರತಗಳಲ್ಲಿ ನಂಬಿಕೆ ಉಳ್ಳಂತಹ ಜೀವನ ರಾಯರದ್ದು. ಮೀನಾಕ್ಷಮ್ಮನವರಿಗೆ ಮಕ್ಕಳಾಗದಿದ್ದ ಸಂದರ್ಭದಲ್ಲಿ ಮಾಡುವ ವ್ರತ, ಸೇವೆ, ಹರಕೆಗಳು ಈ ಮೇಲಿನ ಅಂಶವನ್ನು ಸ್ಪಷ್ಟಪಡಿಸುತ್ತವೆ.

ರಾಮಚಂದ್ರ ಹಾಗೂ ಪದ್ಮಳ ಪಾತ್ರದ ಮೂಲಕ, ಆಧುನಿಕತೆಯ ಪ್ರವೇಶದ ಪರಿಣಾಮವನ್ನು ಸೂಕ್ಷ್ಮವಾಗಿ ತಿಳಿಸಿದ್ದಾರೆ. ಈ ಬಗ್ಗೆ ಒಂದು ರೀತಿಯ ಅವಜ್ಞೆ ಲೇಖಕರಲ್ಲಿ ಕಂಡು ಬರುತ್ತದೆ. ಆದರೆ ಇಲ್ಲಿ ಆಧುನಿಕತೆಯ ಪ್ರವೇಶ ವ್ಯಕ್ತಿಯ ಭೌತಿಕತೆಯ ಮೇಲೆ ಬೀರುವ ಪರಿಣಾಮವನ್ನು ವಿವರಿಸಲಾಗಿದೆಯೇ ಹೊರತು, ವಿಚಾರಧಾರೆಗಳಲ್ಲಿ ಅಲ್ಲ.

ಆದರೆ ರಾಮಚಂದ್ರನ ಔಚಿತ್ಯಮೀರಿದ ವರ್ತನೆಯಲ್ಲಿ ಲೇಖಕರ ಮನೋಧರ್ಮವೇನೋ ಸ್ಪಷ್ಟವಾಗುವುದಿಲ್ಲ. ಬಹುಶಃ ಈ ಮೂಲಕ ಲೇಖಕರು ಒಂದು ವಿಚಾರವನ್ನು ಸಾಧಿಸಲು ಪ್ರಯತ್ನಿಸಿರುವಂತೆ ತೋರುತ್ತದೆ. ಅದು, ಒಳಿತಿನ ಜಯ ಹಾಗೂ ಕೆಡುಕಿನ ಸೋಲು. ಕೆಡುಕಿನ ಕೈ ಎಷ್ಟೇ ಮೇಲಾದರು ಒಂದು ಹಂತದಲ್ಲಿ ಸೋಲಬೇಕು. ಆ ಮೂಲಕ ಸತ್ಯಕ್ಕೆ ಗೆಲುವು ದೊರೆಯಬೇಕೆಂಬುದು ಕಾದಂಬರಿಯಲ್ಲಿ ಅಂತರ್ಗತವಾಗಿರುವ ಮುಖ್ಯ ಅಂಶ. ಆದ್ದರಿಂದ ರಾಮಚಂದ್ರ ಅಂತಿಮವಾಗಿ, ಸೋತು ಪಶ್ಚಾತ್ತಾಪದ ಮಾರ್ಗವನ್ನು ಹಿಡಿಯಬೇಕಾಗುತ್ತದೆ.

ಸಾಮಾನ್ಯವಾಗಿ ಪ್ರಗತಿಶೀಲರಲ್ಲಿ ಕಂಡುಬರುವ ಸಾಮಾಜಿಕ ಕ್ರಾಂತಿಯ ವಿಚಾರಗಳನ್ನು ಪ್ರಸ್ತುತ ಕಾದಂಬರಿಯಲ್ಲಿ ಕಾಣುವುದು ಸಾಧ್ಯವಿಲ್ಲ. ಏಕೆಂದರೆ ಇಲ್ಲಿ ವಸ್ತು ಅದಕ್ಕೆ ಸಂಬಂಧಿಸಿದ್ದಲ್ಲ. ಆದಾಗ್ಯೂ ಗೋಪಾಲನ ಪಾತ್ರದ ಮೂಲಕ ಈ ಅಂಶ ಸಣ್ಣದಾಗಿ ಮಿಂಚಿದೆ. ಆಧುನಿಕ ವಿಚಾರಧಾರೆಯ ಅಂಶಗಳನ್ನು ನಾವು ಗೋಪಾಲನ ಪಾತ್ರದಲ್ಲೇ ಕಾಣಲು ಸಾಧ್ಯ.

"ರೆನಾಲ್ಡ್ಸ್ ನನ್ನ ಮನಸ್ಸಿಗೆ ಬರಲಿಲ್ಲ. ಬಹಳ ಕೀಳು ದರ್ಜೆಯ ಲೇಖಕ. ಕೊಳೆತ ಈರುಳ್ಳಿಯನ್ನು ಮೈಸೂರು ಗಂಧ ಎಂದುಕೊಳ್ಳುವ ಸ್ವಭಾವ ಅವನದು" (ಸಂಧ್ಯಾರಾಗ – ಪು ೭೨)

"ಮನುಷ್ಯ ತನ್ನ ನಿದ್ದೆಯಿಂದ ಎಚ್ಚೆತ್ತು ಹೊಸ ಲೋಕಗಳನ್ನು ಜಯಿಸಬೇಕೆಂದು ಬಯಸುವುದಕ್ಕಿಂತಲೂ ಹೆಚ್ಚು ಯಾವುದು? ಜೀವನಕ್ಕಿಂದು ಬೇಕಾದದ್ದು ಜಾಗೃತಿ--- ಕ್ರಾಂತಿ" (ಸಂಧ್ಯಾರಾಗ ಪು. ೧೬೩)

ಒಂದು ಕಡೆ ಗೋಪಾಲ ಬಯಸುವುದು ಜಾಗೃತಿ–ಕ್ರಾಂತಿಯಾದರೆ, ಇನ್ನೊಂದೆಡೆ ಲಕ್ಷ್ಮಣ ಅಪೇಕ್ಷಿಸುವುದು ಶಾಂತಿಯನ್ನು. ವಯೋಧರ್ಮದ ಅಂತರ ಮನೋಧರ್ಮದಲ್ಲಿ ಮೂಡಿಸುವ ಅಗಾಧ ವ್ಯತ್ಯಾಸವನ್ನು ಲೇಖಕರು ಈ ಎರಡೂ ಪಾತ್ರಗಳ ಮೂಲಕ ಸ್ಪಷ್ಟಪಡಿಸಿದ್ದಾರೆ.

ಸಾಂಪ್ರದಾಯಿಕ ಮೌಲ್ಯಗಳ ಪರಿಪಾಲನೆ 'ಸುಬ್ಬಣ್ಣ' ಕೃತಿಯಲ್ಲಿ ಬಹಳ ಸಹಜವಾಗಿ ತೋರಿಬರುತ್ತವೆ. ಇಂತಹ ಮೌಲ್ಯಗಳ ಚೌಕಟ್ಟಿಗೆ ಒಳಪಟ್ಟೇ, ಸುಬ್ಬಣ್ಣನ ಸಂಗೀತಕ್ಕೆ ಮನೆಯಲ್ಲಿ ಸರಿಯಾದಂತಹ ಪ್ರೋತ್ಸಾಹ ದೊರೆಯುವುದಿಲ್ಲ. ಸಂಗೀತವೆಂದರೆ ಒಂದು ಕೀಳು ಅಭಿರುಚಿ ಎಂಬ ಭಾವನೆ ಅಂದಿನ ಸಮಾಜದಲ್ಲಿ ಮೂಡಿರುವುದು ಚಿತ್ರವಾಗಿದೆ. ಆದರೆ ಸುಬ್ಬಣ್ಣ ತನ್ನ ಸಂಗೀತಾಭ್ಯಾಸದ ಮೂಲಕ ಈ ಸಾಮಾಜಿಕ ವ್ಯವಸ್ಥೆಯನ್ನು ಮೀರಿದ್ದಾನೆ. ಅದೇ ರೀತಿ 'ಸುಬ್ಬಣ್ಣ'ನ ಮನೆಯಲ್ಲಂತೂ ಈ ಸಾಂಪ್ರದಾಯಿಕ ವಾತಾವರಣ ಕಣ್ಣಿಗೆ ಕಟ್ಟುತ್ತದೆ.

ಲಲಿತಳು ಈ ಸಾಂಪ್ರದಾಯಿಕ ಮೌಲ್ಯಗಳಲ್ಲೇ ಹುಟ್ಟಿ ಬೆಳೆದವಳು. ಅವಳ ಆಲೋಚನೆ ನಂಬಿಕೆ, ಆಚರಣೆಗಳೆಲ್ಲವೂ ಈ ನೆಲೆಯಲ್ಲಿಯೇ ಮೂಡಿ ಬಂದಿರುವಂತದ್ದು. ಅವಳಿಗೆ ಸುಬ್ಬಣ್ಣನೇ ಪ್ರಪಂಚ. ತನ್ನ ಅಂತಿಮ ದಿನಗಳಲ್ಲಂತೂ ಲಲಿತೆಗೆ ಸುಬ್ಬಣ್ಣ–ತಾನು ನಂಬಿದ ದೇವರು ಇವರಡೇ ಸತ್ಯ. ಆಕೆ ತನ್ನ ಮನಸ್ಸಿಗೆ ಸುಖ–ಶಾಂತಿಗಳನ್ನು ತಂದುಕೊಳ್ಳುವುದು ಗೌರೀವ್ರತದಲ್ಲೇ. ನೋಡುವುದಾದರೆ ಒಂದು ರೀತಿಯಲ್ಲಿ ಸುಬ್ಬಣ್ಣ ತನ್ನ ಜೀವನದಲ್ಲಿ ಸಾರ್ಥಕತೆ ಪಡೆಯುವುದು ಈ ಸಾಂಪ್ರದಾಯಿಕ ಮೌಲ್ಯಗಳ ಆಶ್ರಯದಲ್ಲಿಯೇ. ಭಕ್ತಿಯ ಮಹತ್ವ, ದೇವರ ಬಗೆಗಿನ ನಂಬಿಕೆ, ವೈರಾಗ್ಯದ ಭಾವಗಳು ಸುಬ್ಬಣ್ಣನಿಗೆ ಸ್ವಲ್ಪಮಟ್ಟಿಗಿನ ಶಾಂತಿಯನ್ನು ನೀಡುತ್ತವೆ.

ಆದರೆ ಹೆಣ್ಣು–ಗಂಡಿನ ಸಂಬಂಧದ ಬಗ್ಗೆ ಮಾಸ್ತಿಯವರ ದೃಷ್ಟಿ ಸಾಂಪ್ರದಾಯಿಕವೆಂಬುದನ್ನು ಇಲ್ಲಿ ಒಪ್ಪಲು ಸಾಧ್ಯವಿಲ್ಲ. ನೀಲಸಾನಿ ಹಾಗೂ ಸುಬ್ಬಣ್ಣನ ಪವಿತ್ರ ಸಂಬಂಧ, ಸುಬ್ಬಣ್ಣ–ಲಲಿತೆಯರ ಮಧುರವಾದ ದಾಂಪತ್ಯ ಇದನ್ನು ಅಭಿವ್ಯಕ್ತಿಸುತ್ತದೆ.

ನೀಲಸಾನಿಯಂತಹ ವೇಶ್ಯೆಯ ಪಾತ್ರವನ್ನು ಮಾಸ್ತಿಯವರು ನೋಡಿರುವ ರೀತಿಯಂತೂ ಅನನ್ಯ. ಗೌರವ, ಪೂಜ್ಯತೆ, ಧನ್ಯತೆಗಳನ್ನು ಆ ಪಾತ್ರದಲ್ಲಿ ಎರಕ ಹೊಯ್ದಿದ್ದಾರೆ. ವಾರಸ್ತ್ರೀಯ ಪಾತ್ರವನ್ನು ಅತ್ಯಂತ ಗೌರವಯುತವಾಗಿ ನಡೆಸಿಕೊಂಡಿದ್ದಾರೆ.

"ಅವನು ವೇಶ್ಯೆಯರ ಸಂಬಂಧದಿಂದ ಕೆಟ್ಟನೋ ಬಿಟ್ಟನೋ.... ಇಷ್ಟಕ್ಕೆ ಕೆಡುವುದೆಂದರೇನೋ ನಾನು ಕಾಣೆ" (ಸುಬ್ಬಣ್ಣ – ಪು. ೮)

"ನಮಗೆ ತೋರುವುದು ಆ ಅವರ್ಣನೀಯವಾದ ಸ್ತ್ರೀ ವ್ಯಕ್ತಿತ್ವ; ಸಾವಿರ ಸಂದರ್ಭದಲ್ಲಿ ನಾವು ನೋಡಿರುವ ಆ ಪ್ರೇಮ, ಆ ದಯ, ಆ ಕನಿಕರ, ಆ ವಿಭ್ರಮ, ಆ ಲಾಲಿತ್ಯ , ಆ ಸೌಕುಮಾರ್ಯ, ಆ ಸ್ತ್ರೀತ್ವ" (ಸುಬ್ಬಣ್ಣ – ಪು ೧೫).

ಮಾಸ್ತಿಯವರದು ಎಂತಹ ವಿಶಾಲ ಮನೋಧರ್ಮವೆಂಬುದು ಇಲ್ಲಿ ವಿದಿತವಾಗುತ್ತವೆ. ಸ್ತ್ರೀಯರ ಬಗೆಗಂತೂ ಅವರಿಗೆ ಅಪಾರ ಗೌರವ. ಕೃತಿಯಲ್ಲಿ ಕಂಡು ಬರುವ ಈ ಮಾತುಗಳೇ ಅವರ ದೃಷ್ಟಿ ಧೋರಣೆ ಎಂತದ್ದು ಎಂಬುದನ್ನು ವಿವರಿಸುತ್ತವೆ.

ಲಲಿತ–ಸುಬ್ಬಣ್ಣರ ದಾಂಪತ್ಯದ ವಿವರವೂ ಈ ಹಿನ್ನಲೆಯಲ್ಲಿಯೇ ಮನಸ್ಸಿನಲ್ಲಿ ಉಳಿಯುತ್ತದೆ. ಲಲಿತಳ ಕೊನೆಯ ದಿನಗಳಲ್ಲಂತೂ ಅವರಿಬ್ಬರೂ ಪತಿ–ಪತ್ನಿಯರಂತೆ ಇರುವುದನ್ನು ಬಿಟ್ಟು, ಧಾರಾಳವಾದ ವಿಚಿತ್ರ ಸ್ನೇಹದಿಂದ ಇದ್ದರೆಂಬ ಮಾತುಗಳು ಬಂದಿವೆ. ಪತಿ–ಪತ್ನಿಯರ ನಡುವೆ ಇರಲೇ ಬೇಕಾದ ಸ್ನೇಹಭಾವಕ್ಕೆ, ಇಲ್ಲಿ ಸ್ಥಾನ ಕಲ್ಪಿಸಿರುವುದು, ಮಾಸ್ತಿಯವರ ದೃಷ್ಟಿಯನ್ನು ಪ್ರತಿಬಿಂಬಿಸುತ್ತದೆ. ಈ ದಾಂಪತ್ಯ ಚಿತ್ರಣ ಶ್ಲಾಘನೀಯವಾದುದು.

ಕಲಾವಿದರು ಕೊಳಕರು, ಅಶ್ಲೀಲರೂ, ಕಾಮುಕರೂ ಆಗಿರುತ್ತಾರೆಂಬ ಪೂರ್ವಾಗ್ರಹ ಭಾವನೆಯೊಂದು ಸಮಾಜದಲ್ಲಿ ಬೆಳೆದು ಬಂದಿದೆ. ಆದರೆ ಇಂತಹ ಭಾವನೆಗಳನ್ನು ಎರಡೂ ಕೃತಿಗಳಲ್ಲು ಕಾಣಲು ಸಾಧ್ಯವಿಲ್ಲ.

ಕಲಾವಿದನ ಬದುಕಿಗೆ ಹೆಣ್ಣು ನೀಡುವಂತಹ ಪ್ರೇರಣೆ, ಸ್ಫೂರ್ತಿಗಳನ್ನು ಇಬ್ಬರೂ ಲೇಖಕರೂ ಗುರುತಿಸಿದ್ದಾರೆ. ಆದ್ದರಿಂದಲೇ ಎರಡೂ ಕೃತಿಗಳಲ್ಲೂ ಲಲಿತ ಮತ್ತು ಜಯ ಅದ್ಭುತ ಪ್ರೇರಕ ಶಕ್ತಿಗಳಾಗಿ ಬೆಳೆದಿದ್ದಾರೆ. ಲಲಿತ ಸುಬ್ಬಣ್ಣನ ಬದುಕನ್ನೂ, ಜಯಾ ಲಕ್ಷ್ಮಣನ ಸಂಗೀತವನ್ನು ಬೆಳಗುತ್ತಾರೆ. ಈ ಎರಡೂ ಕಾದಂಬರಿಗಳ ಈ ದೃಷ್ಟಿ ಒಪ್ಪಲರ್ಹವಾಗಿವೆ.

ಅ.ನ.ಕೃರವರಿಗೆ ಒಂದು ವಿದ್ವತ್ ಪರಂಪರೆಯ ಹಿನ್ನಲೆಯಿತ್ತು. ಬಾಲ್ಯದಿಂದಲೇ ಸಂಗೀತದಲ್ಲಿ ಒಲವಿತ್ತು. ತಾತನ ಸಂಗೀತ ಪರಿಸರ ಅವರಲ್ಲಿ ಪ್ರಭಾವ ಬೀರಿತ್ತು. ಪಂಡಿತ ತಾರಾನಾಥರಲ್ಲಿ ಹಿಂದೂಸ್ತಾನಿ ಸಂಗೀತವನ್ನು ಅಭ್ಯಾಸ ಮಾಡಿದ್ದರೆಂಬುದೂ ತಿಳಿದು ಬರುತ್ತದೆ. ಹೀಗಾಗಿ ಈ ವಿಷಯದಲ್ಲಿ ಅ.ನ.ಕೃರವರಿಗೆ ಒಂದು ಬಗೆಯ ಅಧಿಕೃತತೆ ಪ್ರಾಪ್ತವಾಗಿತ್ತೆಂದರೆ ತಪ್ಪಾಗಲಾರದು ಅವರು ಸಂಗೀತಕ್ಕೆ ಅಪಾರ ಪ್ರಾಮುಖ್ಯತೆಯನ್ನು ತಮ್ಮ ಕೃತಿಯಲ್ಲಿ ನೀಡುವುದಕ್ಕೆ ಇದೂ ಸಹ ಒಂದು ಕಾರಣವಿರಬಹುದು.

ಯಾವುದು ನಿಜವಾದ ಸಂಗೀತ, ಯಾವುದು ಅಲ್ಲವೆಂಬ ತಿಳಿವು ಅವರಿಗಿದ್ದಿತೆಂಬುದು, ಲಕ್ಷ್ಮಣನ ಪಾತ್ರದ ಮೂಲಕ ತಿಳಿದುಬರುತ್ತದೆ. ಸಂಗೀತ ಶಾಂತಿದಾಯಿ; ತಾಯಿಯ ನಲ್ನುಡಿಯನ್ನು ಕೇಳಿದಾಗ ಉಂಟಾಗುವ ಸುಖವನ್ನು ಅದು ನೀಡುತ್ತದೆ; ಸುಪ್ತವಾದ ಚೇತನವನ್ನು ಹೊಡೆದೆಬ್ಬಿಸುವ ಗುರು, ಸಂಗೀತ ಮನಸ್ಸನ್ನು ಉದ್ದರಿಸುತ್ತದೆ– ಎಂಬ ಮಾತುಗಳು ಅ.ನ.ಕೃ ರವರದ್ದೇ ಮಾತುಗಳೆಂಬಂತೆ ತೋರಿಬರುತ್ತವೆ. ಆಗಿನ ಮೈಸೂರಿನ ಸಂಗೀತಗಾರರ ಪರಿಸ್ಥಿತಿಯನ್ನು, ಭೀಮರಾಯರು, ಸುಂದರರಾಯರ ಪಾತ್ರಗಳ ಮೂಲಕ ಲೇಖಕರು ಸೂಚ್ಯವಾಗಿ ವಿವರಿಸುತ್ತಾರೆ. ಮಠಾಧಿಪತಿಗಳ ಭ್ರಷ್ಟಾಚಾರ, ಶ್ರೀಮಂತರ ದರ್ಪ ಮುಂತಾದ ಸಂಗತಿಗಳ ಬಗ್ಗೆ ಲೇಖಕರ ದೃಷ್ಟಿಕೋನವನ್ನು ಇಲ್ಲಿ ಕಾಣಬಹುದಾಗಿದೆ.

ಎರಡೂ ಕೃತಿಗಳಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ, ಕಲೆಯಲ್ಲಿ ದೈನ್ಯ, ಹೃದ್ಯತೆಯ ಭಾವಗಳು ಮೂಡಿ, ಕಲೆಯನ್ನು ತೀವ್ರಗ್ರಾಹಿಯನ್ನಾಗಿ ಮಾಡುತ್ತವೆಯೆಂಬುದು 'ಸುಬ್ಬಣ್ಣ'ನಲ್ಲಿ ಇಂತಹ ದೈನ್ಯ– ಹೃದ್ಯತೆಗಳು ಮೂಡಿ, ಅವನನ್ನು ನಾದ ಯೋಗಿಯನ್ನಾಗಿಸುತ್ತದೆ. ಲಕ್ಷ್ಮಣನೂ ತನ್ನ ಕಲೆಯಲ್ಲಿ ಇಂತಹ ಭಾವಗಳು ಒಡಮೂಡುವುದಕ್ಕಾಗಿ ಇಡೀ ಜೀವನವನ್ನು ಮೀಸಲಾಗಿರಿಸುತ್ತಾನೆ. ಆ ಭಾವಗಳು ಅವನಲ್ಲಿ ಮೂಡಿದಾಗಲೇ, ಅವನದು ನಿಜವಾದ ಸಂಗೀತವಾಗುವುದು.

ಒಟ್ಟಿನಲ್ಲಿ ಎರಡೂ ಕೃತಿಗಳಲ್ಲೂ ಆಯಾ ಲೇಖಕರ ದೃಷ್ಟಿಕೋನಗಳು ಪಡಿ ಮೂಡಿವೆ. ಮುಖ್ಯವಾಗಿ ಮಾಸ್ತಿಯವರು ವ್ಯಕ್ತಿಯ ರೂಕ್ಷತೆ–ಕೆಡಕು, ಅತಿರೇಕಗಳನ್ನು ಚಿತ್ರಿಸುವುದಿಲ್ಲವೆಂಬ ಭಾವನೆಯಿದೆ. ಅಂತೆಯೇ ಸುಬ್ಬಣ್ಣ ಕೃತಿಯಲ್ಲೂ ಇಂತಹ ಯಾವುದೇ ಪಾತ್ರಗಳಿಲ್ಲ. ಬಹುಶಃ ತುಂಬು ಜೀವನವನ್ನು ಬಾಳಿದ ಮಾಸ್ತಿಯವರಿಗೆ ಅಂತಹ ಕೆಡುಕು – ವೈಪರೀತ್ಯಗಳನ್ನು ಕಾಣಲು ಸಾಧ್ಯವಾಗಿಲ್ಲವೇನೋ. ಆದರೆ ಅವರ 'ಸುಬ್ಬಣ್ಣ' ಛಲಗಾರ ಜೀವನದ ಎಲ್ಲಾ ಸಂಕಷ್ಟಗಳನ್ನೂ ದಾಷ್ಟ್ಯವಾಗಿ ಎದುರಿಸುತ್ತಾನೆ; ಪಕ್ವಗೊಳ್ಳುತ್ತಾನೆ. ಇದಕ್ಕೆ ಒತ್ತು ನೀಡಿರುವುದರಿಂದಲೇ ಸುಬ್ಬಣ್ಣ ಒಬ್ಬ ಮಹಾನ್ ಸಂಗೀತಗಾರನಾಗಿ ಕಂಡುಬರುವುದಿಲ್ಲ. ಬದಲಿಗೆ ಮಾಸ್ತಿಯವರ ಜೀವನ ಪ್ರೀತಿಗೆ ಪ್ರತೀಕವಾಗಿದ್ದಾನೆ. ಆದರೆ ಸಂಧ್ಯಾರಾಗದಲ್ಲಿ ಲಕ್ಷ್ಮಣನ ಕಲೆಗೇ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿ, ಅವನ ವ್ಯಕ್ತಿತ್ವವನ್ನು ಗೌಣವಾಗಿಸಿದ್ದಾರೆ. ಈ ಹಿನ್ನಲೆಯಲ್ಲಿಯೇ ಎರಡೂ ಕೃತಿಗಳಲ್ಲಿ ಭಿನ್ನ ಅಂಶಗಳಿಗೆ ಆದ್ಯತೆ ಇದೆ. ಪರಿಣಾಮವಾಗಿ 'ಸುಬ್ಬಣ್ಣ'ನದ್ದು ಹೃದಯ ಪರಿಪಾಕವಾದರೆ, ಲಕ್ಷ್ಮಣದ್ದು ಕಲಾ ಪರಿಪಾಕವಾಗಿದೆ.

### ಈ. ಅಭಿವ್ಯಕ್ತಿ ಸಂಬಂಧ :–

ಯಾವುದೇ ಕೃತಿಯಲಿ ಅಭಿವ್ಯಕ್ತಿ ಮುಖ್ಯ ಅಂಶ. ವಸ್ತು, ಪಾತ್ರ, ಘಟನೆ, ಸನ್ನಿವೇಶಗಳು ಮನಸ್ಸನ್ನು ತುಂಬುವುದು ಅಭಿವ್ಯಕ್ತಿಯ ಮೂಲಕ. ಲೇಖಕರ ಕ್ರಿಯಾಶೀಲತೆ ತಿಳಿದು ಬರುವುದೇ ಆತನ ಅಭಿವ್ಯಕ್ತಿಯ ಕ್ರಮದಿಂದ. ಪ್ರಸ್ತುತ 'ಸುಬ್ಬಣ್ಣ' ಒಂದು ನೀಳ್ಗತೆ ಹಾಗೂ 'ಸಂಧ್ಯಾರಾಗ' ಒಂದು ವಿಸ್ತೃತ ಕಾದಂಬರಿ. ಹಾಗಾಗಿ ಸಹಜವಾಗಿ ಈ ಎರಡರಲ್ಲೂ ಅಭಿವ್ಯಕ್ತಿಕ್ರಮದಲ್ಲಿ ಭಿನ್ನತೆಯಿದೆ.

ಮಾಸ್ತಿಯವರದ್ದು ಸರಳ–ಸುಂದರ ನಿರುದ್ವಿಗ್ನ ಶೈಲಿ. ಕಥನ ಕಲೆ ಅವರಿಗೆ ಚೆನ್ನಾಗಿ ಸಿದ್ಧಿಸಿದೆ. ಅವರ ಅದ್ಭುತ ಕಥನ ಕಲೆಯ ಹಿನ್ನಲೆಯಲ್ಲಿ ಸಣ್ಣ ಕಥೆಗಳ ಜನಕ ಎಂದೇ ಕರೆಸಿಕೊಂಡಿದ್ದಾರೆ. ಬಹುಶಃ ಮಾಸ್ತಿಯವರಂತೆ ನಿರಾಡಂಬರವಾಗಿ ಕತೆ ಹೇಳುವುದು ಮತ್ಯಾರಿಗೂ ಸಾಧ್ಯವಿಲ್ಲವೇನೋ.

ಮಾಸ್ತಿಯವರ ಅಭಿವ್ಯಕ್ತಿಯ ರೀತಿ ವಿಭಿನ್ನ ರೀತಿಯಲ್ಲಿ ತೋರಿಬರುತ್ತದೆ. ಮುಖ್ಯವಾಗಿ ಅವರು ಕತೆ ನಡೆಯುವ ಕಾಲ, ಮತ್ತು ಅದನ್ನು ಹೇಳುವ ಕಾಲ ಎರಡನ್ನೂ ದೂರವಿಡುತ್ತಾರೆ. ತಮ್ಮ ಯಾವುದೇ ಅಭಿಪ್ರಾಯ, ಪೂರ್ವಾಗ್ರಹಗಳನ್ನು ಓದುಗ ಒಪ್ಪಿಕೊಳ್ಳುವಂತೆ ಬಲವಂತ ಪಡಿಸುವುದಿಲ್ಲ. ತಮ್ಮ ಅಭಿಪ್ರಾಯ ಭಾವನೆಗಳನ್ನು ಮುಂದಿಟ್ಟು, ಅವನ್ನು ಅಂಗೀಕರಿಸುವ ಅಥವಾ ನಿರಾಕರಿಸುವ ಆಯ್ಕೆಯನ್ನು ಓದುಗರಿಗೇ ಬಿಡುತ್ತಾರೆ.

'ಸುಬ್ಬಣ್ಣ' ಕೃತಿಯಲ್ಲಿ ಬಳಸಿರುವಂತಹ ಕಥನ ತಂತ್ರ ವಿಶಿಷ್ಟವಾಗಿದೆ. ಕೇವಲ ಏಳು ಪುಟಗಳ ವ್ಯಕ್ತಿಯೊಬ್ಬನ ಕಡೆಯ ದಿನಗಳ ಕಥೆ, ಮಾಸ್ತಿಯವರಲ್ಲಿ ಒಂದಿಡೀ ಜೀವನ ದರ್ಶನಕ್ಕೆ ವ್ಯಾಪಿಸಿದೆ. ಈ ಎಂಬತ್ತಾರು ಪುಟಗಳಲ್ಲಿ 'ಸುಬ್ಬಣ್ಣ'ನ ಜೀವನ ಸಾರವೆಲ್ಲಾ ತುಂಬಿ ನಿಂತಿದೆ. ಕತೆಗೆ ದೂರ ಮತ್ತು ಸಾಮೀಪ್ಯಗಳೆರಡನ್ನು ಇಲ್ಲಿ ಒಟ್ಟಿಗೆಯೇ ಸಾಧಿಸಲಾಗಿದೆ. ಕತೆಯ ಕಾಲ ಸಮಕಾಲೀನವಲ್ಲ. ಸುಬ್ಬಣ್ಣನ ಜೀವನದ ಆರಂಭ ಮುಮ್ಮಡಿಕೃಷ್ಣರಾಜ ಒಡೆಯರರ ಆಳ್ವಿಕೆಯಲ್ಲಿ ಪ್ರಾರಂಭವಾಗಿದ್ದರೆ, ಅವನ ಜೀವನದ ಅಂತ್ಯ, ಮುಮ್ಮಡಿ ಕೃಷ್ಣರಾಜರ ಮೊಮ್ಮಕ್ಕಳ ಕಾಲದಲ್ಲಿ ಆಗುತ್ತದೆ. ಸುಬ್ಬಣ್ಣನು ಪಯಣಿಸುವ ಊರುಗಳಾದ ಕಲ್ಕತ್ತೆ, ಮುಂಬೈ, ಮೈಸೂರುಗಳ ಬಗ್ಗೆ ಲೇಖಕರಿಗೆ ನೇರವಾದಂತಹ ಪರಿಚಯವಿಲ್ಲ. ಅದನ್ನು ಸುಬ್ಬಣ್ಣ ಮತ್ತು ಇತರರಿಂದ ಕೇಳಿ ತಿಳಿದು ವಿವರಿಸಿದ್ದಾರೆ. ಅಂತೆಯೇ ಇಲ್ಲಿ ಲೇಖಕರೂ ಕತೆಯಲ್ಲಿ ಒಂದು ಪಾತ್ರವಾಗಿದ್ದಾರೆ. ಸುಬೇದಾರರ ಮನೆತನದೊಡನೆ ಸುಬ್ಬಣ್ಣನ ಅವಿನಾಭಾವ ಸಂಬಂಧಕ್ಕೆ ಲೇಖಕರು ಒಂದು ಪಾತ್ರವಾಗಿ ಸಾಕ್ಷಿಯಾಗಿದ್ದಾರೆ.

'ಸುಬ್ಬಣ್ಣ'ನ ಬದುಕಿನ ವಿವರಗಳು ಇಲ್ಲಿ ನಿರೂಪಕ ಮತ್ತು ಲೇಖಕನಿಂದ, ಬೇರೆ–ಬೇರೆಯಾಗಿ ದೊರೆಯುತ್ತಾ ಹೋಗುತ್ತದೆ. ನಿರೂಪಕನು ಕಂಡ ವಿವರಗಳನ್ನು ನಾವು ಅವನ ಬಾಯಿಯಿಂದ ಕೇಳಿ ತಿಳಿಯುತ್ತೇವೆಯೇ ಹೊರತು, ನಾವು ನೇರವಾಗಿ ನೋಡುವುದಲ್ಲ.

**"ಇಲ್ಲಿ ಕೊನೆಗಾಲದ ಸಮರ್ಥನೆಗಾಗಿ ಪೂರ್ವ ಜೀವನದ ಪುನಾರಚನೆ ನಡೆದಿದೆ. ಎಂದರೆ ವಾಸ್ತವದ ವಿವರಗಳಲ್ಲಿ ಆಯ್ಕೆ ಹಾಗೂ ಮರು ಹೊಂದಾಣಿಕೆಗಳ ಜೊತೆಗೆ ನಿರೂಪಕನ ವ್ಯಾಖ್ಯಾನ ಕೂಡ ಬೆರೆಯುತ್ತದೆ. ಹೀಗಾಗಿ ಇಲ್ಲಿನ ನಿರೂಪಕ ತನಗೆ ಕಂಡದ್ದನ್ನು ಹೇಳುವವನಲ್ಲ. ತನಗೆ ಬೇಕಾದ್ದನ್ನು ಕಾಣುವವನು"**[೧]

**"ವಾಸ್ತವವಾಗಿ ಈ ಕತೆ ಮೂರು ಎಲೆಗಳಿಂದ ಮುಪ್ಪರಿಗೊಳ್ಳುತ್ತದೆ...... ಒಂದನೆಯ ಎಳೆ ನಿರೂಪಕನದು – --- ಎರಡನೇ ಎಳೆ ಕತೆಗಾರರದು. ಮೂರನೆಯದು ಸುಬ್ಬಣ್ಣನ ಬದುಕಿನ ಕತೆ"**[೨]

---

೧. ಬೇರು–ಕಾಂಡ–ಚಿಗುರು–ಸುಬ್ಬಣ್ಣ ಎಷ್ಟು ಅಧಿಕೃತ? – ಕೆ.ವಿ. ನಾರಾಯಣ – ಪು.ಸಂ. ೩೦೯

೨. ಶ್ರೀನಿವಾಸ– (ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ ಲೇಖಕರು) –ಸುಬ್ಬಣ್ಣ– ಪ್ರೊ. ಜಿ.ಎಸ್. ಸಿದ್ದಲಿಂಗಯ್ಯ ಪು.ಸಂ. ೭೬

'ಸುಬ್ಬಣ್ಣ' ಕತೆಯನ್ನು ಓದಿದಾಗ ಇದು ಬಹಳ ಸರಳವಾದ ಕತೆಯೆಂದು ತೋರಿಬರುತ್ತದೆ. ಇದರಲ್ಲಿ ಕಥನಾ ತಂತ್ರವೇ ಇಲ್ಲವೆಂದು ಭಾಸವಾಗುತ್ತದೆ.

**"ಆದರೆ ಈ ಸರಳತನ ತೋರಿಕೆಯದು, ಭರದಿಂದ ತಿರುಗುವ ಬುಗುರಿ ನಿಶ್ಚಲ ನಿಂತಂತೆ ಕಾಣುವುದಿಲ್ಲವೇ? ಗತಿಯ ಅಲೆಯೇ ಈ ಅಭಾಸಕ್ಕೆ ಕಾರಣ. ಕಲೆಯನ್ನು ಅಡಗಿಸುವ ಕಲೆಗೆ 'ಸುಬ್ಬಣ್ಣ' ಸಾಕ್ಷಿ"**[೧].

ಆದರೆ ಹಾಗೆಂದು 'ಸುಬ್ಬಣ್ಣ' ಕತೆಯು ಅತ್ಯಂತ ವೇಗದಿಂದ ಸಾಗಿದೆ ಎನ್ನುವಂತಿಲ್ಲ ಕೇವಲ ಏಳುಪುಟಗಳ ಕತೆಯು ಎಂಬತ್ತಾರು ಪುಟಗಳಿಗೆ ವ್ಯಾಪಿಸಿರುವುದನ್ನು ಇಲ್ಲಿ ನೆನಪಿಡಬೇಕು. ಮೂರು ಘಟ್ಟಗಳಲ್ಲಿ ಇಲ್ಲಿ ಅವನ ಜೀವನ ಚಿತ್ರಣವಿದೆ. ಮೊದಲನೆಯದು ಅವನ ಆರಂಭದ ಜೀವನ ಚಿತ್ರಣ, ಎರಡನೆಯದು ಅವನ ಸಂಸಾರದ ಚಿತ್ರಣ, ಮೂರನೆಯ ಘಟ್ಟ ಅವನ ಅಂತಿಮ ದಿನಗಳಿಗೆ ಮೀಸಲಾಗಿದೆ. ಇದಿಷ್ಟನ್ನೂ ಲೇಖಕರು ಬಹಳ ನಿರಾಡಂಬರಥವಾಗಿ ನಮ್ಮ ಮುಂದೆ ತೆರೆಯುತ್ತಾ ಹೋಗುತ್ತಾರೆ.

ಕತೆಗಾರರು ಬಹಿರಂಗ ರೀತಿಯಲ್ಲಿ ಕಾದಂಬರಿಯನ್ನು ಪ್ರವೇಶಿಸಿ ಲೇಖಕರ ಮನೋಧರ್ಮವನ್ನು ಕುರಿತು ಹೇಳುವುದು, ತಮ್ಮ ವರ್ಣನೆಯ ಇತಿ–ಮಿತಿಗಳನ್ನು ಕುರಿತು ನೀಡುವ ಪ್ರಾಮಾಣಿಕ ಹೇಳಿಕೆಗಳು, ಲೋಕಾಚಾರ, ವಿಚಾರಗಳ ಬಗ್ಗೆ ತಮ್ಮ ಅನುಭವ–ಅಭಿಪ್ರಾಯಗಳನ್ನು ಮುಂದಿಟ್ಟು ಆಯ್ಕೆ–ನಿರ್ಧಾರಗಳನ್ನು ಓದುಗರಿಗೇ ಬಿಡುವ ರೀತಿ, ಇವೆಲ್ಲವೂ ಅಸಾಧಾರಣ ಮಹತ್ವದಿಂದ ಬೆಳಗುತ್ತವೆ. ಇಲ್ಲಿ ಪಾತ್ರಗಳ ಸ್ವಭಾವ ದರ್ಶನದಲ್ಲಿ ಹೃದಯವಂತಿಕೆಯಿದೆ. ಘಟನೆಗಳನ್ನು ಅರ್ಥೈಸುವ ರೀತಿಯಲ್ಲಿ, ಮೇಲ್‌ಪದರುಗಳು ಒಳಪದರುಗಳನ್ನು ಸುರುಳಿ–ಸುರುಳಿಯಾಗಿ ಬಿಚ್ಚುತ್ತಾ ಹೋಗುತ್ತದೆ.

"ಹೇಗಾದರೂ ಓದುವವರೇ ಊಹಿಸಿ ಸೇರಿಸಿಕೊಳ್ಳಬಹುದಾದ ಬಹುಭಾಗದಿಂದ ಮಾತ್ರ ಈ ಕಥೆ ಸಂಪೂರ್ತಿಯಾಗಬಹುದೇ ಹೊರತು ಇಲ್ಲಿ ಹೇಳಿರುವಷ್ಟರಿಂದ ಮಾತ್ರ ಸಂಪೂರ್ತಿಯಾಗಲಾರದು" (ಸುಬ್ಬಣ್ಣ – ಪು ೨)

"ನನಗೆ ಯೋಗ್ಯತೆ ಇದ್ದರೆ ಇಲ್ಲಿ...... ವರ್ಣಿಸಬೇಕು...... ಆದರೆ ಇವನ್ನು ವರ್ಣಿಸುವ ಶಕ್ತಿ ನನಗೆ ಇಲ್ಲ" (ಪು. ೧೪–೧೫).

"ಈ ವರ್ಣನೆಯಲ್ಲೆಲ್ಲ ಬಣ್ಣ ಸಾಲದೆಂದು ನಾನು ಬಲ್ಲೆ" (ಪು. ೫೨)

ಇಂತಹ ಮಾತುಗಳು ಲೇಖಕರ ಪ್ರಾಮಾಣಿಕತೆಗೆ ಕನ್ನಡಿ ಹಿಡಿಯುತ್ತವೆ. ಅವರು 'ಸುಬ್ಬಣ್ಣ'ನ ಕತೆಯನ್ನು ನಮ್ಮನ್ನು ಎದುರಿಗೆ ಕೂರಿಸಿಕೊಂಡು ಹೇಳುತ್ತಿರುವಂತೆ ಭಾಸವಾಗುತ್ತದೆ. ಕೇಳುಗ 'ಹೂಂ' ಗುಟ್ಟದೆ, ಬೇರೆ ವಿಧಿಯೇ ಇಲ್ಲ.

---

೧. ಶ್ರೀನಿವಾಸ – 'ಸುಬ್ಬಣ್ಣ'ನ ಬಗೆಗೆ ಪುನರ್ವಿಚಾರ – ಗೌರೀಶ ಕಾಯ್ಕಿಣಿ. – ಪು.ಸಂ. ೧೦೭

ಸುಬ್ಬಣ್ಣ ಒಂದು ಸರಳ ಕತೆಯಾದರೂ, ಅದರಲ್ಲಿ ಬರುವ ಉಪಮೆ ಔಚಿತ್ಯಗಳು ಅಷ್ಟೇನೂ ಸರಳವಾದವುಗಳಲ್ಲ. ಅದರಲ್ಲಿ ಆಳವಾದ ಜೀವನಾನುಭವ, ವಿಚಾರಭೋಧಕ ವಿಶಿಷ್ಟತೆಗಳಿವೆ.

"ಬರುವಾಗ ಬಂಬ ಹುಮ್ಮಸ್ಸೇನು, ಈಗ ಸೋತು ಹಿಂದಕ್ಕೆ ಹೋಗುವುದೆಂದರೇನು,...... ಕಾಗೆ ಮಳೇಲಿ ನೆನೆದ ಹಾಗೆ ದುಃಖದಲ್ಲಿ ನೆನೆದದ್ದಾಯಿತು". (ಪು. ೪೧)

ಕಾಗೆ ಮಳೇಲಿ ನೆನೆದ ಹಾಗೆ – ಎಂಬುದು ಎಷ್ಟು ಸರಳವಾದ, ಅಷ್ಟೇ ಅರ್ಥಗರ್ಭಿತವಾದಂತಹ ಉಪಮೆ ಎನಿಸುತ್ತದೆ.

"ಲಲಿತೆಯೂ ಸುಬ್ಬಣ್ಣನೂ ಕತ್ತಲಲ್ಲಿ ಒಂಟಿಯಾಗಿ ಸಿಕ್ಕಿಕೊಂಡ ಮಕ್ಕಳಂತೆ ಎದೆಯೊಡೆದು ನಿಂತರು" (ಪು. ೪೧).

"ಮಕ್ಕಳಾಟದ ಗುಬ್ಬಚ್ಚಿಯ ಗೂಡಿನಂತೆ..... ಆಸೆಯೆಲ್ಲ ಕರಗಿಹೋದವು" (ಪು. ೪೩).

"ಜೀವನವೆನ್ನುವುದು ಸಭಿಕರಿಗೆ ವೇಷ–ಹಾಕಿ ಕುಣಿಸುವ ಬಯಲು ನಾಟಕ" (ಪು. ೪೨).

ಇವು ಒಂದೊಂದು ಎಷ್ಟು ಮಹತ್ವದ ವಿಚಾರಗಳನ್ನು ಒಯ್ದು ಮನಕ್ಕೆ ಮುಟ್ಟಿಸುತ್ತದೆ! ಜೀವನದ ಅಸಂಗತೆ, ಏಕಾಂಗಿತನ, ಅದರಿಂದ ಉಂಟಾಗುವ ಭಯ–ಭೀತಿಗಳನ್ನು ಈ ಮಾತುಗಳು ಬಹಳ ಪರಿಣಾಮಕಾರಿಯಾಗಿ ಬಿಂಬಿಸಿವೆ.

ಕಾದಂಬರಿ ಮುಖ್ಯವಾಗಿ ಸುಬ್ಬಣ್ಣನ ಬಾಳ ಕತೆಯಾದರೂ ಉಳಿದ ಪಾತ್ರಗಳೂ ಜೀವಂತಿಕೆಯಿಂದ ಅಭಿವ್ಯಕ್ತಗೊಳ್ಳುತ್ತವೆ. ಲಲಿತಳ ತ್ಯಾಗ ಜೀವನ, ಸಹನೆ ಭಕ್ತಿಗಳು, ಸುಬೇದಾರರ ಹೆಮ್ಮೆ–ಜಂಭ, ಶಾಸ್ತ್ರಿಗಳ ಘನತೆ–ಗಾಂಭೀರ್ಯ, ಯಜಮಾನಿಯ ಹಟ–ಸ್ವಭಾವ, ವೆಂಕಟರಮಣನ ಉತ್ಸಾಹ–ಲವಲವಿಕೆ, ನೀಲಸಾನಿಯ ಪವಿತ್ರವಾದ, ನಿರ್ಮಲವಾದ ಉಪಾಸನೆ – ಇವೆಲ್ಲವನ್ನೂ ನಾವು ಕಣ್ಣಿನಿಂದ ಕಾಣಬಹುದೆನ್ನುವಷ್ಟು ಸ್ಫುಟವಾಗಿವೆ.

ಸುಬ್ಬಣ್ಣನ ಬದುಕಿನ ಬೆಳವಣಿಗೆಯ ಸಣ್ಣ–ಸಣ್ಣ ಘಟನೆ ಸನ್ನಿವೇಶಗಳ ಮೂಲಕ ಹಂತ–ಹಂತವಾಗಿ ಬೆಳೆಯುತ್ತವೆ. ಅವನ ಜೀವನದ ಅರ್ಥೈಸುವಿಕೆಗೆ ವ್ಯಾಖ್ಯೆಗಳೇ ಬೇಡ ಎನ್ನುವಷ್ಟು ಸ್ಪಷ್ಟವಾಗಿ ಬಂದಿದೆ. ಸುಬ್ಬಣ್ಣ ಮೊದಲ ಬಾರಿ ಹೆಂಡತಿಯನ್ನು ಹೊಡೆಯುವುದು, ಆತ್ಮಾಭಿಮಾನದಿಂದ ಮನೆತೊರೆಯುವುದು. ಸಂಗೀತದಲ್ಲಿ ದೊಡ್ಡ ಹೆಸರಾಗಬೇಕೆಂದು ಬಯಸಿದ ಸುಬ್ಬಣ್ಣ ಸಂಗೀತವನ್ನೇ ಬದುಕಿಗಾಧಾರ ಮಾಡಿಕೊಂಡದ್ದು, ಸಂಗೀತವೂ ಭ್ರಮೆಯೆಂದು ಭಾವಿಸಿ ಪಿಟೀಲನ್ನು ನದಿಗೆಸೆದು ಒದ್ದಾಡುವುದು, ಮತ್ತೆ ಮಾನವ ಸಂಬಂಧಗಳ ಸುಳಿಗೆ ಸಿಲುಕಿ ಲಲಿತಳನ್ನು ನೋಡಲು ಓಡಿ ಬರುವುದು–ಇಂತಹ ಘಟನೆಗಳಲ್ಲೆವೂ ಸುಬ್ಬಣ್ಣ ಬದುಕಿನ ಹಾಗೂ ಕತೆಯ ಬೆಳವಣಿಗೆಯ ರೀತಿಯನ್ನು ಸ್ಪಷ್ಟವಾಗಿ ತಿಳಿಸುತ್ತವೆ.

ಸುಬ್ಬಣ್ಣ ಮೊದಲ ಬಾರಿಗೆ ಹೆಂಡತಿಯನ್ನು ಹೊಡೆಯುವ ಸನ್ನಿವೇಶದಲ್ಲಾಗಲೀ, ಅವರಿಬ್ಬರ ದಾಂಪತ್ಯ ಚಿತ್ರಣದಲ್ಲಾಗಲೀ ಅಥವಾ ನೀಲಸಾನಿ ಸುಬ್ಬಣ್ಣರ ಹೃದಯ ಸಂವಾದದಲ್ಲಾಗಲೀ, ಎಲ್ಲಿಯೂ ಅಶ್ಲೀಲತೆಯಿಲ್ಲ. ಅತ್ಯಂತ ಭಾವಪೂರ್ಣವಾಗಿ, ಮನೋಹರವಾಗಿ ಇವುಗಳನ್ನು ಮಾಸ್ತಿ ಚಿತ್ರಿಸುತ್ತಾರೆ.

'ಸುಬ್ಬಣ್ಣ' ಕೃತಿಯಲ್ಲಿ ಅದ್ಭುತ-ಅನಿರೀಕ್ಷಿತ ತಿರುವುಗಳು ಎದುರಾಗುವುದಿಲ್ಲ. ಒಂದು ದೊಡ್ಡ ಚಮತ್ಕಾರವೇನೋ ನಡೆದಂತೆ ತೋರುವುದಿಲ್ಲ. ಅಂತೆಯೇ ಸುಬ್ಬಣ್ಣನ ವ್ಯಕ್ತಿತ್ವದ ಬದಲಾವಣೆ ಅಸಹಜವಾಗಿ, ನಾವು ನಿರೀಕ್ಷಿಸಿಯೇ ಇಲ್ಲದಂತೆ ನಡೆಯುವಂತದ್ದಲ್ಲ. ಇಂತಹ ಪರಿವರ್ತನೆಗೆ, ಪೂರ್ವಸಿದ್ಧತೆಯ ವೇದಿಕೆಯೊಂದನ್ನು ಲೇಖಕರು ಓದುಗರ ಮನೋಭೂಮಿಕೆಯಲ್ಲಿ ಮೊದಲೇ ನಿರ್ಮಾಣ ಮಾಡಿಬಿಟ್ಟಿರುತ್ತಾರೆ.

'ಸುಬ್ಬಣ್ಣ'ನಿಗೆ ಹಣ್ಣು ಎತ್ತಿಕೊಡುವ ಮಗು, ಮಿಠಾಯಿ ಮಾರುವ ಮುದುಕಿ, ಸುಬೇದಾರರ ಆತ್ಮೀಯತೆ, ಕಡೆಯ ಹಂತದಲ್ಲಿ ಸುಬ್ಬಣ್ಣ ಗಾಡಿಯ ಹಿಂದೆ ಮೂರು ಮೈಲಿ ಓಡಿಬರುವುದು-ಇಂತಹ ಸಹಜ ಸರಳ ಸನ್ನಿವೇಶಗಳ ಮೂಲಕವೇ, ಅವನ ಆತ್ಮೋದ್ಧಾರದ ಮಹತ್ವದ ಸಂಗತಿಯನ್ನು ಲೇಖಕರು ಗ್ರಾಹ್ಯಗೊಳಿಸುತ್ತಾರೆ.

'ಸಂಧ್ಯಾರಾಗ' ಒಂದು ಕಾದಂಬರಿಯ ಮಟ್ಟದಲ್ಲಿರುವುದರಿಂದ, ನೀಳ್ಗತೆಗಿಂತ ಭಿನ್ನವಾದ ಅಭಿವ್ಯಕ್ತಿಯ ರೀತಿ ಇಲ್ಲಿ ಕಂಡುಬರುತ್ತದೆ.

ಅ.ನ.ಕೃರವರ ಪಾತ್ರ ಸೃಷ್ಟಿ ಘಟನಾ ನಿರ್ಮಾಣ, ವಾತಾವರಣ ರಚನೆಗಿಂತಲೂ, ವಿಶೇಷ ಕೌಶಲವನ್ನು ಅವರ ಸಂವಾದ ಶೈಲಿಯಲ್ಲಿ ಕಾಣಬಹುದಾಗಿದೆ. ಅವರ ಕಾದಂಬರಿಯ ಜೀವಾಳವೇ ಈ ಶೈಲಿಯಲ್ಲಿ ಅಡಗಿದೆ. ಅವರ ಸರಳವಾದ ಭಾಷೆಯ ಬಳಕೆಯೇ ವಿಶಿಷ್ಟವೆನ್ನುವಂತೆ ಇಲ್ಲಿ ತೋರಿದೆ. ಇದರ ನಿಜವಾದ ಅಂತಃಸತ್ವ ಇರುವುದು ಸಂಭಾಷಣೆಗಳಲ್ಲಿ. ತೃತೀಯ ಪುರುಷದಲ್ಲಿ ವಾಕ್ಯಗಳನ್ನು ಇಲ್ಲಿ ಅಷ್ಟು ಕಾಣಲು ಸಾಧ್ಯವಿಲ್ಲ. ಓದುಗನನ್ನು ಈ ಸಂವಾದದ ಮೂಲಕ ತೇಲಿಸಿಕೊಂಡು ಹೊಗುತ್ತಾರೆ. ಕತೆಯೂ ಇಲ್ಲಿ ಸಂವಾದದ ಹಾದಿಯನ್ನು ಹಿಡಿದೇ ಮುಂದುವರೆಯುತ್ತದೆ. ಅಂತೆಯೇ ಅವರ ಸಂವಾದ ಶೈಲಿಯ ರಮ್ಯ ಆಕರ್ಷಣೆಯು ಅಷ್ಟೇ ಫಲದಾಯಕವಾಗಿದೆ.

'ಸಂಧ್ಯಾರಾಗ' ಕಾದಂಬರಿಯ ಉತ್ತಮಿಕೆ ಇರುವುದು ಅದರ ಬಂಧದಲ್ಲಿ. ಕತೆಯ ಎಲ್ಲಾ ಸೂತ್ರಗಳೂ ಏಕೀಭವಿಸಿ ಒಮ್ಮುಖವಾಗಿ ಸಾಗುತ್ತವೆ. ಇಲ್ಲಿ ಉಪಕತೆಗಳ ಗೊಂದಲವಿಲ್ಲ. ಆರಂಭದಿಂದ ಮುಕ್ತಾಯದವರೆಗೂ ಒಂದು ಗೀತೆಯಂತೆ ಮೂಡಿ ಬಂದಿದೆ. ಅ.ನ.ಕೃರವರ ಲಲಿತ ಶೈಲಿ ಕಾದಂಬರಿಯ ಸೌಂದರ್ಯವನ್ನು ಹೆಚ್ಚಿಸಿವೆ. ಓತ.ಮಿತವಾದ ವರ್ಣನೆಗಳು, ಚತುರವಾದ ಸಂಭಾಷಣೆ, ಕತೆಯ ಓಟ-ಇವೆಲ್ಲವೂ ಕಾದಂಬರಿಯನ್ನು ಓದುಗರಿಗೆ ಆತ್ಮೀಯಗೊಳಿಸಿದೆ.

ಕಾದಂಬರಿಯ ಆರಂಭವೇ ಪರಿಪಕ್ವವಾದ ರೀತಿಯಲ್ಲಿ ಕಂಡುಬರುತ್ತದೆ.

"ಹತ್ತುಗಂಟೆ ಹೊಡೆದರೂ ಯಾರಿಗೂ ಎಚ್ಚರವಿಲ್ಲ. ಗಡಿಯಾರ ತನ್ನ ಕೆಲಸವನ್ನು ಸಾಗಿಸಿಕೊಂಡು ಹೋಗಿತ್ತು.... ರಾಯರಾಗಲಿ, ಶಾಮಣ್ಣನಾಗಲಿ ಆ ಕಡೆ ಲಕ್ಷ್ಯಕೊಟ್ಟಿರಲಿಲ್ಲ. ಒಳ ತೊಟ್ಟಿಯಲ್ಲಿ ಹೊಸಲಿನ

ಒಂದು ಬದಿಗೆ ಕೂತಿದ್ದ ಗೌರಮ್ಮನವರು ಸೊಸೆಯ ಮುಖವನ್ನು ನೋಡಿ ತೆಪ್ಪಗಾಗಿದ್ದರು..... ಅತ್ತೆಗೆ ಕಾಣದಂತೆ ಕಣ್ಣೀರು ಒರೆಸುತ್ತಾ ಕೂತಿದ್ದ ಮೀನಾಕ್ಷಮ್ಮನವರಿಗೆ ಅತ್ತೆಯ ಚಿಂತೆಯ ಅರಿವೇ ಆಗಲಿಲ್ಲ" ('ಸಂಧ್ಯಾರಾಗ' ಪು.ಸಂ. ೧)

**"ಈ ಒಂದು ಚಿತ್ರದಿಂದ ಕಾದಂಬರಿ ಆರಂಭವಾಗಿದೆ. ಈ ಚಿತ್ರದಲ್ಲಿ ನಮಗೆ ಕಾಣುವ ನಾಲ್ಕು ವ್ಯಕ್ತಿಗಳು ಕಾಲದ ಓಟವನ್ನು ಮರೆತು ಯಾವುದೋ ರಸವಾತಾವರಣದಲ್ಲಿ ತನ್ಮಯರಾಗಿರುವುದು ಕಾಣಬರುತ್ತದೆ. ಇಂಥ ತನ್ಮಯತೆಯ ಚಿತ್ರದಿಂದ, ಓದುಗನ ದೃಷ್ಟಿ ಆ ತನ್ಮಯತೆಯಲ್ಲಿ ಕೇಂದ್ರಿಕೃತವಾಗಿ, ಕಾದಂಬರಿಯ ವಾಚನಕ್ಕೆ ಅಗತ್ಯವಾದ ವಾತಾವರಣವನ್ನು ಓದುಗನ ಚಿತ್ತದಲ್ಲಿ ಮೂಡಿಸುತ್ತದೆ."**[೧]

ಹೀಗೆ ಆರಂಭದಲ್ಲೇ ಬರುವ ಸನ್ನಿವೇಶವು ಓದುಗನನ್ನು ಹಿಡಿದು ನಿಲ್ಲಿಸಿ, ಕಾದಂಬರಿಯೊಳಗೆ ಕೇಂದ್ರೀಕೃತಗೊಳಿಸುತ್ತದೆ. ಕತೆಯ ಆರಂಭದಲ್ಲೇ ಆಸಕ್ತಿ ಹುಟ್ಟಿಸಿ, ಕುತೂಹಲದಿಂದ ಓದಿಕೊಂಡು ಹೋಗಲು ಅಗತ್ಯವಾದ ಸಂದರ್ಭದ ಚಿತ್ರಣವನ್ನು ನಾವಿಲ್ಲಿ ಕಾಣಬಹುದು.

ಕಾದಂಬರಿಯಲ್ಲಿ ಮುಖ್ಯವಾಗಿ ಎರಡು ತಲೆಮಾರಿನ ಜೀವನ ಸಮಗ್ರವಾಗಿ ಚಿತ್ರಿತವಾಗಿದೆ. ಒಂದು ವಿಸ್ತಾರವಾದ ಭೂಮಿಕೆಯಲ್ಲಿ ಕಾದಂಬರಿಯು ಹರಡಿಕೊಂಡಿದೆ. ಆದರೆ ಓದುಗನಿಗೆ ಈ ಕಾಲದ ವ್ಯಾಪ್ತಿಯ ಅರಿವೇ ಉಂಟಾಗುವುದಿಲ್ಲ. ಸುಧೀರ್ಘವಾದ ಘಟನೆಯೊಂದು ನಮ್ಮ ಮುಂದೆ ನಡೆದಂತೆ ಅನಿಸುತ್ತದೆ. ಎಲ್ಲಿಯೂ ಇದು ತುಂಡಾದಂತಾಗಲೀ, ಅದರ ಓಟಕ್ಕೆ, ಧಕ್ಕೆ ಬಂದಂತಾಗಲೀ ಗೋಚರವಾಗುವುದಿಲ್ಲ. ಒಂದು ಸಮಯ ಸಂದರ್ಭದಿಂದ, ಇನ್ನೊಂದು ಸಮಯ-ಸಂದರ್ಭಕ್ಕೆ ಜಾರಿದಂತಹ ಅರಿವು ಓದುಗನಿಗೆ ಉಂಟಾಗುವುದಿಲ್ಲ. ಅದೇ ಇಲ್ಲಿನ ಕಥಾವೇಗದ ವಿಶಿಷ್ಟ ಗುಣ. ಲೇಖಕರು ಇಲ್ಲಿ ಬಹಳ ಜಾಣ್ಮೆಯಿಂದ ಕತೆ ನಡೆಸಿದ್ದಾರೆ.

ಇಲ್ಲಿನ ಭಾಷಾಶೈಲಿ ಸರಳವಾದುದರಿಂದ ಓದುಗರಿಗೆ ಸುಲಭವಾಗಿ ನಿಲುಕುತ್ತದೆ. ಆದರೆ ಇದು ನೀರಸವಾಗಿಲ್ಲ. ಭಾವತೀವ್ರತೆ, ಚಿತ್ರಕಶಕ್ತಿ ಎಲ್ಲವೂ ಇದರಲ್ಲಿ ಕಂಡುಬರುತ್ತವೆ.

"ಮೀನಾಕ್ಷಮ್ಮನವರು ತಲೆ ತಗ್ಗಿಸಿದರು. ಕಣ್ಣಿಗೆ ಆಶ್ರಯ ಕೊಟ್ಟಿದ್ದ ಮೊಣಕಾಲು ನೆನೆಯಿತು. ಗಂಡನ ಮುಖವನ್ನೊಮ್ಮೆ ನೋಡಿ 'ಕ್ಷಮಿಸಿ' ಎಂದರು. ಮಾತು ಮೂಕಾಯಿತು. ಆದರೆ ಹೃದಯದ ಸಂದೇಶ ಹೃದಯಕ್ಕೆ ಮುಟ್ಟಿತು" (ಪು. ೧೬)

ಇಂತಹ ಸರಳ, ಸುಂದರ ಮಾತುಗಳಲ್ಲಿ ಸನ್ನಿವೇಶದ ಭಾವುಕತೆಯನ್ನು ಉಜ್ವಲಗೊಳಿಸುತ್ತಾರೆ.

ಕೆಲವೊಮ್ಮೆ ಈ ಭಾವುಕತೆ ಕೃತಕವಾಗಿಯೂ ತೋರಿಬರುವುದುಂಟು. ಇದನ್ನು ಪಾತ್ರಗಳು ಹೊರಲಾರದಂತೆ ಕಂಡುಬಂದು, ಪಾತ್ರಗಳಿಂದ ಹೊರಸೂಸಲಾಗದ ಭಾವವನ್ನು ಲೇಖಕರೇ ತಮ್ಮ ಮಾತುಗಳಲ್ಲಿ ಹೇಳಿ ಮುಗಿಸಿರುವಂತೆಯೂ ಕಂಡು ಬರುತ್ತದೆ.

---

೧. ಅ.ನ.ಕೃ- ತ.ರಾ.ಸು. ಪು. ೯೬

ಒಮ್ಮೆ ಲಕ್ಷ್ಮಣನ ತಂಗಿ ಶಾಂತ ಗುಲಾಬಿ ಹೂಗಳನ್ನು ಕಿತ್ತು ತಂದು ಲಕ್ಷ್ಮಣನಿಗೆ ತಂದು ತೋರಿಸುತ್ತಾಳೆ. ಅದನ್ನು ಸಹಿಸಲಾಗದೆ ಲಕ್ಷ್ಮಣನ ಕಣ್ಣಿಂದ ಧಾರೆಯಾಗಿ ನೀರು ಹರಿಯುತ್ತದೆ. ಅವನ ಮೃದುಹೃದಯವನ್ನು ಪರಿಚಯ ಮಾಡಿಕೊಡಲು ಬರುವಂತಹ ಸನ್ನಿವೇಶವಿದು. ಆದರೆ ಇಲ್ಲಿ ಲಕ್ಷ್ಮಣನ ಹೃದಯ ಸ್ಪಂದನ ಅಷ್ಟೇನೂ ಸಹಜವಾಗಿ ಮೂಡಿಬಂದಂತಿಲ್ಲ.

ಪಾತ್ರಪೋಷಣೆಯ ಅಭಿವ್ಯಕ್ತಿಯನ್ನು ನೋಡುವುದಾದರೆ, ಮುಖ್ಯ ಪಾತ್ರಗಳಂತೆಯೇ ಉಪಪಾತ್ರಗಳೂ ನೆನಪಿನಲ್ಲುಳಿಯುವಂತೆ ಮಾಡುವ ಶಕ್ತಿ ಲೇಖಕರಲ್ಲಿದೆ. ಭಾರತದ ಶಾಮಣ್ಣ, ತಂಜಾವೂರು ಕೃಷ್ಣಯ್ಯ ಇಂತಹ ಪಾತ್ರಗಳ ಚಿತ್ರಣದಲ್ಲಿ ಲೇಖಕರ ಪ್ರತಿಭೆಯನ್ನು ಕಾಣಬಹುದು. ಆದರೆ ಜಯಾಳ ಪಾತ್ರ ಪೋಷಣೆಯಲ್ಲಿ ಲೇಖಕರು ಸ್ವಲ್ಪ ಮಟ್ಟಿಗೆ ಅನ್ಯಾಯ ಮಾಡಿದಂತಿದೆ. ಅನಿರೀಕ್ಷಿತವಾಗಿ, ಸನ್ನಿವೇಶವನ್ನು ಅರ್ಥಮಾಡಿಕೊಳ್ಳುವ ಮೊದಲೇ ಜಯಾಳ ಪಾತ್ರವನ್ನು ಮರಣಕ್ಕೆ ನೂಕಿರುತ್ತಾರೆ. ಅಂತೆಯೇ ರಾಮಚಂದ್ರನ ಪಾತ್ರಚಿತ್ರಣವೂ ಔಚಿತ್ಯ ಮೀರಿನಿಂತಿದೆ. ಕತೆಯ ಉತ್ತರಾರ್ಧದಲ್ಲಿ ಬರುವ ಕೋರ್ಟು–ಕಛೇರಿ, ಚುನಾವಣೆ, ಪತ್ರಿಕೋದ್ಯಮಗಳ ವಿಚಾರ ದೀರ್ಘವಾಗಿ ಕತೆಯ ಓಟಕ್ಕೆ ಅಡ್ಡಿ ಉಂಟುಮಾಡುತ್ತದೆ ಮತ್ತು ಓದುಗರಲ್ಲಿಯೂ ಬೇಸರ ಮೂಡಿಸುತ್ತದೆ. ಅದೇ ರೀತಿ ಶ್ರೀನಿವಾಸರಾಯರ ಮರಣ, ಶಾಮಣ್ಣನವರ ಗೃಹತ್ಯಾಗ, ಲಕ್ಷ್ಮಣನ ಕಲಾಪ್ರಪಂಚ – ಇವುಗಳಲ್ಲಿ ಅಗತ್ಯಕ್ಕಿಂತ ಹೆಚ್ಚಿನ ಭಾವುಕತೆ ಕಾಣುತ್ತದೆ.

ಲಕ್ಷ್ಮಣನ ಸಂಗೀತ ಸಿದ್ಧಿಯು ಹಂತದಿಂದ ಹಂತಕ್ಕೆ ಸಾಗುವುದು, ಲೇಖಕರು ಹೊರಡಿಸುವ ಉದಾತ್ತ ವೈಭವಯುತ ಹೇಳಿಕೆಗಳಿಂದಲೇ ಹೊರತು, ಅದರ ಯಥಾವತ್ತಾದ ಚಿತ್ರಣ ಕಂಡುಬರುವುದಿಲ್ಲ.

ಆದರೆ ಲಕ್ಷ್ಮಣ ತನ್ನ ಕಲೆಯಲ್ಲಿಯೇ ಐಕ್ಯವಾಗುವಂತಹ ಸನ್ನಿವೇಶವಂತೂ ಅದ್ಭುತ ರೀತಿಯಲ್ಲಿ ಕಣ್ಣುಮುಂದೆ ನಿಲ್ಲುತ್ತದೆ. ಇದು ಲೇಖಕರ ಚಿತ್ರಕಶಕ್ತಿಗೆ ಅದ್ಭುತ ನಿದರ್ಶನ. 'ಸಂಧ್ಯಾರಾಗ', 'ಉದಯ ರಾಗ' – ಎರಡೂ ರಾಗಗಳ ಮಾನಸಿಕ ಚಿತ್ರ ಮನಸ್ಸಿಗೆ ಬರುತ್ತದೆ.

'ಸುಬ್ಬಣ್ಣ' ಕೃತಿಯ ಅಂತ್ಯವೇ ಆಗಲಿ 'ಸಂಧ್ಯಾರಾಗ' ಕಾದಂಬರಿಯ ಅಂತ್ಯವೇ ಆಗಲೀ ಎರಡೂ ಪರಿಣಾಮಕಾರಿಯಾದುದು. ಎರಡೂ ಒಂದೊಂದು ರೀತಿಯಲ್ಲಿ ಕಣ್ಣೀರು ಹರಿಸಿ, ಮನಸ್ಸನ್ನು ತೊಳೆದು, ನಿಟ್ಟುಸಿರು ಬಿಡುವಂತೆ ಮಾಡುತ್ತವೆ.

* * *

ಅಧ್ಯಾಯ – ೭

# ಸಾಹಿತ್ಯಿಕ ಪ್ರಾಮುಖ್ಯತೆ

ಯಾವುದೇ ಸಾಹಿತ್ಯ ಕೃತಿಯು ಸಮಾಜದ ಆಗುಹೋಗುಗಳನ್ನು ತನ್ನ ಒಡಲಿನಲ್ಲಿ ಅಂತರ್ಗತಗೊಳಿಸಿ ಕೊಂಡಿರುತ್ತದೆ. ಮಾತ್ರವಲ್ಲ ಅದನ್ನು ಪ್ರತಿಬಿಂಬಿಸುತ್ತದೆ. ಒಂದು ಕೃತಿ ಸಮಾಜಕ್ಕೆ ಏನನ್ನು ಹೇಳಲು ಬಯಸುತ್ತದೆ? ಜೀವನದ ಯಾವ ಅಂಶಕ್ಕೆ ಹೆಚ್ಚಿನ ಒತ್ತನ್ನು ನೀಡಿದೆ? ಮುಖ್ಯವಾಗಿ ಅದು ಜೀವನವನ್ನು ನೋಡುವ ರೀತಿ ಹೇಗೆ? ಇಂತಹ ವಿಚಾರಗಳಿಗೆ ಕಂಡುಕೊಳ್ಳುವ ಉತ್ತರಗಳು ಆ ಕೃತಿಯ ಮಹತ್ವವನ್ನು ಅರಿಯಲು ನೆರವಾಗುತ್ತವೆ.

ಪ್ರಸ್ತುತ 'ಸಂಧ್ಯಾರಾಗ' 'ಸುಬ್ಬಣ್ಣ' ಕೃತಿಗಳು ಕಲಾವಿದನ ಬದುಕನ್ನು ತಮ್ಮ ವಸ್ತುವನ್ನಾಗಿಸಿಕೊಂಡಿವೆ. ಆದರೆ, ಇವು ಒತ್ತುಕೊಟ್ಟಿರುವ ಅಂಶಗಳು ಬೇರೆ-ಬೇರೆಯಾಗಿವೆ. ಕಲೆ ಮಾನವನ ಜೀವನದಲ್ಲಿ ವಹಿಸುವ ಪಾತ್ರ, ಅದು ಜೀವನವನ್ನೂ ಮೀರಿ ಬೆಳೆಯುವ ರೀತಿ ಇದು ಎರಡೂ ಕಾದಂಬರಿಗಳಲ್ಲಿ ಬರುವ ಮುಖ್ಯ ಅಂಶ.

ಅ.ನ.ಕೃ. ರವರ 'ಸಂಧ್ಯಾರಾಗ' ಅವರು ಬರೆದ ಇತರ ಕಾದಂಬರಿಗಳಲ್ಲೆಲ್ಲ ಹೆಚ್ಚು ಮಹತ್ವವಾದುದು. ಅ.ನ.ಕೃ. ರವರು ಜನಪ್ರಿಯ ಕಾದಂಬರಿಕಾರರಾಗಿ ಬೆಳಕಿಗೆ ಬಂದದ್ದು ಇದೇ ಕಾದಂಬರಿಯಿಂದ. ಈ ಕೃತಿ ಸಮಾಜದ ಎಲ್ಲಾ ವರ್ಗದ, ಎಲ್ಲಾ ರೀತಿಯ ಓದುಗರನ್ನು ತನ್ನೆಡೆಗೆ ಸೆಳೆದುಕೊಂಡಿತು. 'ಸಂಧ್ಯಾರಾಗ' ಅ.ನ.ಕೃ. ರವರ ಪ್ರಾತಿನಿಧಿಕ ಕಾದಂಬರಿ ಎಂಬಂತೆ ತೋರುತ್ತದೆ. ಅವರ ಪ್ರಕಾರ ಒಳಿತು – ಕೆಡುಕುಗಳೆರಡನ್ನೂ ಇಲ್ಲಿ ಕಾಣಬಹುದು. ಸಮಾಜದಲ್ಲಿ ನಡೆಯುವ ವಾಸ್ತವಿಕ ಘಟನೆಗಳನ್ನು ಆಧರಿಸಿ ಸನ್ನಿವೇಶಗಳನ್ನು ಹೆಣೆಯಲು ಅ.ನ.ಕೃ. ರವರು ಪ್ರಯತ್ನಿಸಿದ್ದಾರೆ. ಸಮಾಜದ ಜೀವನ, ಸಂಸ್ಕೃತಿಗಳನ್ನು ಬಿಂಬಿಸುವ ಅಂಶ ಇದರಲ್ಲಿ ಎದ್ದು ಕಾಣುತ್ತದೆ. 'ಸಂಧ್ಯಾರಾಗ' ೧೯೩೮ ರಲ್ಲಿ ರಚಿತವಾಗಿದ್ದು ಅನಂತರ ಹಲವು ಮುದ್ರಣಗಳನ್ನು ಕಂಡಿದೆ. ಹಿಂದಿ, ಇಂಗ್ಲೀಷ್, ಮರಾಠಿ, ತಮಿಳು, ತೆಲುಗು, ಮಲೆಯಾಳಿ ಭಾಷೆಗಳಿಗೆಲ್ಲಾ ಇದು ಅನವಾದಗೊಂಡಿರುವುದು ಇದರ ಜನಪ್ರಿಯತೆಯನ್ನು ತಿಳಿಸುತ್ತದೆ. 'ಸಂಧ್ಯಾರಾಗ' ಚಲನಚಿತ್ರವಾಗಿಯೂ ಯಶಸ್ವಿಯಾಗಿದೆ.

'ಸಂಧ್ಯಾರಾಗ'ದ ಮುನ್ನುಡಿಯಲ್ಲಿ ಅ.ನ.ಕೃ.ರವರು ಇದರ ವಸ್ತು-ವಿಷಯವೇನೆಂಬುದನ್ನು ಕೆಲವು ಮಾತುಗಳಲ್ಲಿ ಹೇಳಿದ್ದಾರೆ.

"ಕಲಾವಿದ ಚಿತ್ರಗಾರನಿರಲಿ, ಗಾಯಕನಿರಲಿ, ಸಾಹಿತಿಯಾಗಿರಲಿ ಜೀವನದ ಸಮುಷ್ಟಿಯ ಕಡೆಗೇ ಬರುತ್ತಾನೆ. ಮೊದಲು ಯಾವುದು ಭಿನ್ನವೋ, ಅದರ ಪೂರ್ಣತೆಯು ಅವನಿಗೆ ಗೋಚರವಾಗುತ್ತದೆ. ಆಗಲೇ ಅವನ ಜೀವನ ಪೂರ್ಣವಾಗುವುದು; ಬಾಳು ಸಾರ್ಥಕವಾಗುವುದು. ಅಂತಹ ಆದರ್ಶದ ಕಡೆಗೆ ಸಾಗಿದ ಒಬ್ಬ ಕಲಾವಿದನ ಚಿತ್ರವೇ 'ಸಂಧ್ಯಾರಾಗ'. (ಮುನ್ನುಡಿ)

ಈ ಮಾತುಗಳಲ್ಲಿ ಲೇಖಕರು ಕಲೆಗೆ ನೀಡಿರುವ ಮಹತ್ವ, ಅದನ್ನು ಗ್ರಹಿಸಿರುವ ರೀತಿ, ಜೀವನದ ಹಿನ್ನೆಲೆಯಲ್ಲಿ ಅದನ್ನು ನೋಡಿರುವ 'ದೃಷ್ಟಿ' ಎಲ್ಲವೂ ಮನದಟ್ಟಾಗುತ್ತದೆ. ಯಾವುದೇ ಒಬ್ಬ ಕಲಾವಿದನಿಗೆ ಜೀವನದ ಸಮಷ್ಟಿಯ ಅರಿವು ಉಂಟಾಗುವುದು, ಅವನ ಬಾಳು ಸಾರ್ಥಕತೆಯನ್ನು ಕಂಡು ಪೂರ್ಣವಾಗುವುದು ಅವನು ಕಲೆಗಾಗಿ ತನ್ನನ್ನು ಅರ್ಪಿಸಿಕೊಂಡಾಗ – ಎಂಬ ಭಾವನೆಗಳು ಇಲ್ಲಿ ಕಂಡು ಬರುತ್ತದೆ. ಅವನ ಜೀವನದ ಸಿದ್ಧಿ – ಸಾರ್ಥಕತೆಗಳು ಸಾಧ್ಯವಾಗುವುದು ಕಲೆಯಿಂದಲೇ, ಮೊದಲು ಕಲೆ ಮತ್ತು ಕಲಾವಿದ ಅಭಿನ್ನವಾಗಿ ಕಂಡು ಬಂದರೂ, ಅವರಿಬ್ಬರೂ ಒಂದಾಗುವ ಹಂತದಲ್ಲಿ ಆದರ್ಶ ಜೀವನ, ಪೂರ್ಣ ಬದುಕು ನಿರ್ಮಾಣವಾಗುತ್ತದೆಯೆಂಬುದು ಇದರ ತಿರುಳು.

ಈ ಪೂರ್ಣತೆಯನ್ನು ಪಡೆಯುವವನು ಇಲ್ಲಿನ ಕಲಾವಿದ 'ಲಕ್ಷ್ಮಣ'. ಅಂತೆಯೇ ಅವನ ಇಡೀ ಬಾಳು ಕಲಾದೇವಿಯ ಆರಾಧನೆಗೆ ಮುಡಿಪಾಗುತ್ತದೆ. ಅವನ ಜೀವನದಲ್ಲಿ 'ಸಂಧ್ಯಾರಾಗ' ಬಹಳ ಮಹತ್ವವಾದ ಪಾತ್ರ ವಹಿಸುತ್ತದೆ. ಲಕ್ಷ್ಮಣನ ಜೀವನದ ಆರಂಭ ಅಂತ್ಯಗಳೆರಡೂ ಈ ರಾಗದೊಂದಿಗೇ ಬೆಸೆದುಕೊಂಡಿದೆ. ತನ್ನ ಜೀವನದುದ್ದಕ್ಕೂ ಅವನು ಪ್ರತೀಕ್ಷಿಸುವುದು ಪೂರ್ವಿರಾಗದ ಸಾರ್ಥಕತೆಗಾಗಿ.

ಉಷ್ಣಾಂಶ, ವಾತವರಣದ ಪರಿಸ್ಥಿತಿ, ನಮ್ಮ ದೇಹ ಹಾಗೂ ನರಮಂಡಲದ ಮೇಲೆ ಉಂಟಾಗುವಂತಹ ಅನುಕೂಲ ಅಥವಾ ಪ್ರತಿಕೂಲ ಪರಿಣಾಮಗಳನ್ನು ಗಮನಿಸಿ, ಯಾವ–ಯಾವ ಕಾಲದಲ್ಲಿ ಯಾವ ಯಾವ ರಾಗಗಳನ್ನು ಹಾಡಿದರೆ, ಹೆಚ್ಚು ಪರಿಣಾಮಕಾರಿ, ಹೆಚ್ಚು ಸುಶ್ರಾವ್ಯವಾಗಿ ಮುಡಿಬರುತ್ತದೆ, ಒಳ್ಳೆಯದು ಎಂಬುದನ್ನು ನಮ್ಮ ಋಷಿಮುನಿಗಳು ಮನಗಂಡಿದ್ದಾರೆ. ಈ ನಿಟ್ಟಿನಲಿ ರಾಗಗಳನ್ನು ವಾತಾವರಣಕ್ಕೆ ಅನುಗುಣವಾಗಿ ವಿಭಾಗಿಸಿದ್ದಾರೆ. ಕೆಲವು ಮಧ್ಯಾಹ್ನ, ಕೆಲವು ಸಂಜೆ, ಕೆಲವು ಪ್ರಾತಃಕಾಲದಲ್ಲಿ, ಕೆಲವು ಬೆಳಗಿನ ಜಾವದಲ್ಲಿ ಮತ್ತೆ ಕೆಲವು ರಾತ್ರಿಯ ವೇಳೆಯಲ್ಲಿ ಹಾಡತಕ್ಕವು. ಈ ಕ್ರಮವನ್ನೇ ಸಂಗೀತದಲ್ಲಿ ರೂಢಿಗೆ ತರಲಾಗಿದೆ. ಪೂರ್ವಿಕಲ್ಯಾಣಿ ಸಾಯಂಕಾಲದಲ್ಲಿ ಹಾಡುವಂತಹ ರಾಗ. ಇದನ್ನೇ 'ಸಂಧ್ಯಾರಾಗ' ವೆಂದು ಇಲ್ಲಿ ಕರೆಯಲಾಗಿದೆ. ವಾಸ್ತವವಾಗಿ ಇದು ಯಾವ ಕಾಲದಲ್ಲಾದರೂ ಹಾಡುವಂತಹ ಸಾರ್ವಕಾಲಿಕ ರಾಗ; ಆದರೆ ಇದನ್ನು ಸಂಜೆಯ ವೇಳೆ ಹೇಳಿದರೆ ಹೆಚ್ಚು ಪರಿಣಾಮಕಾರಿ.

ಅದೇ ರೀತಿ ಲಕ್ಷ್ಮಣ ತನ್ನ ಜೀವನ ಸಂಧ್ಯೆಯನ್ನು ಈ ರಾಗದೊಂದಿಗೆ ಮುಗಿಸುತ್ತಾನೆ. ಪೂರ್ವಿರಾಗ ಪರಿಣಾಮಕಾರಿಯಾಗುವುದು ಅದರಲ್ಲಿ ದೈನ್ಯ – ಅಸಹಾಯಭಾವಗಳು ಆಳವಾಗಿಬೆರೆತಾಗ ಲಕ್ಷ್ಮಣ ಈ ಸಾರ್ಥಕತೆಗಾಗಿ ತನ್ನಿಡೀ ಜೀವನವನ್ನು ಮೀಸಲಿಡುತ್ತಾನೆ. ಯಾವಾಗ ಅವನ ಸಂಗೀತದಲ್ಲಿ ಅವನ ಹೃದಯವೂ ಬಂದು ಸೇರುತ್ತದೋ, ಆಗಲೇ 'ಸಂಧ್ಯಾರಾಗ' ಅವನ ಎದೆಯನ್ನೂ ಭೇದಿಸಿಕೊಂಡು ಬರುವುದು. ಮಾತ್ರವಲ್ಲ ಅವನ ಆತ್ಮ ಸಂಗೀತದಲ್ಲಿ ಲೀನವಾಗುವುದೂ ಇದೇ ಹಂತದಲ್ಲಿ.

ಅ.ನ.ಕೃ.ರವರಿಗೆ ಸಂಗೀತದಲ್ಲಿ ತಕ್ಕಮಟ್ಟಿಗಿನ ಪರಿಣಿತಿ ಇತ್ತು. ಈ ಪರಿಣಿತಿಯೇ ಅವರಿಗೆ 'ಸಂಧ್ಯಾರಾಗ'ದಂತಹ ವಸ್ತುವನ್ನು ಸಾಕಷ್ಟು ಪರಿಣಾಮಕಾರಿಯಾಗಿ ನಿರ್ವಹಿಸಲು ನೆರವಾಗಿದೆ. ಕಲೆ ಕಲಾವಿದ

ಇಬ್ಬರೂ ಐಕ್ಯಗೊಳ್ಳುವಂತಹ ಭವ್ಯ ಸಿದ್ಧಿಯನ್ನು ಆಲೋಚಿಸಲು ಇಲ್ಲಿ ಸಾಧ್ಯವಾಗಿದೆ. ಲೇಖಕರಿಗೆ ಸಂಗೀತದಲ್ಲಿ ಇದ್ದ ಪರಿಣಿತಿ – ಪ್ರತಿಭೆಗಳನ್ನು ಇನ್ನೂ ಪೂರ್ಣರೀತಿಯಲ್ಲಿ ಬಳಸಿಕೊಳ್ಳುವ ಅವಕಾಶವಿತ್ತು. ಆದರೆ ಬಳಸಿಕೊಂಡಂತೆ ಕಾಣುವುದಿಲ್ಲ.

ಲಕ್ಷ್ಮಣನ ಕಲಾಜೀವನವನ್ನು ಉತ್ಕೃಷ್ಟ ರೀತಿಯಲ್ಲಿ ಚಿತ್ರಿಸಿದಂತೆ ತೋರುವುದಿಲ್ಲ. ಅವನ ಕಲೆಯು ಹಂತದಿಂದ ಹಂತಕ್ಕೆ ಬೆಳೆಯುತ್ತಾ ಹೋಗುವುದಿಲ್ಲ. ಪ್ರತಿಯೊಂದು ಘಟ್ಟದಲ್ಲೂ ಅವನಿಗೆ ಅವನ ಕಲೆಯಲ್ಲಿ ಪೂರ್ಣತೆಯಿದ್ದು ಅದು ಮತ್ತಷ್ಟು ಬೆಳಗುತ್ತಾ – ಪ್ರಕಾಶಿಸುತ್ತಾ ಹೋಗುತ್ತದೆ. ಇಲ್ಲಿ ಲಕ್ಷ್ಮಣ ಸಿದ್ಧ; ಸಾಧಕನಲ್ಲ. ಅವನು ಪರಿಶ್ರಮಪಟ್ಟು, ಸೆಣಸಾಟ ನಡೆಸಿ ತನ್ನ ಕಲೆಯನ್ನು ಅಭಿವೃದ್ಧಿಗೊಳಿಸಿಕೊಳ್ಳುವುದಿಲ್ಲ. ಅದೇ ರೀತಿ ಲಕ್ಷ್ಮಣನ ಕಲಾಜೀವನದಲ್ಲಿ ಯಾವುದೇ ಸವಾಲುಗಳಿಲ್ಲ; ಅದು ಸಾಕಷ್ಟು ನಿರಾತಂಕವಾಗಿದೆ. ಅವನಿಗೆ ಪರೀಕ್ಷೆಗಳು ಬರುವುದು, ಅವನ ಜೀವನದಿಂದ, ಈ ಮಟ್ಟಿಗೆ ಅವನ ಕಲೆ ಯಾವುದೇ ಅಡ್ಡಿ ಆತಂಕಗಳಿಲ್ಲದೇ ಪಾರಾಗಿದೆ. ಕೃತಿಯಲ್ಲಿ ಲಕ್ಷ್ಮಣನ ಕಲೆಗೇ ಒತ್ತು ನೀಡಿರುವುದರಿಂದ, ಆ ಕಲೆಯು ಹಲವು ಸವಾಲುಗಳನ್ನೆದುರಿಸಿ, ಜಯಿಸಿ ಯಶಸ್ವಿಯಾಗಿದ್ದರೆ ಪರಿಣಾಮ ಚೆನ್ನಾಗಿರುತ್ತಿತ್ತೇನೋ. ಆಗ ಲೇಖಕರೇ ಹೇಳಿರುವ ಆದರ್ಶ ಕಲಾ ಜೀವನದ ಪರಿಕಲ್ಪನೆಗೆ ನಿಜವಾಗಿಯೂ ಅರ್ಥ ಹೆಚ್ಚುತ್ತಿತ್ತು. ಆದರೆ ಕೃತಿಯಲ್ಲಿ ಅವನ ಕಲೆಗೆ ಸತ್ವಪರೀಕ್ಷೆಗಳೇ ಇಲ್ಲ.

ಇನ್ನು ಲಕ್ಷ್ಮಣ ಒಬ್ಬ ಮಹಾನ್ ಕಲಾವಿದನಾಗಿ ಕಾದಂಬರಿಯ ಉದ್ದಕ್ಕೂ ಸ್ಥಾಪಿತವಾಗುವುದು ಹೇಗೆ? ಲಕ್ಷ್ಮಣನ ಕಲಾಪ್ರತಿಭೆ ಓದುಗರಿಗೆ ಅರ್ಥವಾಗುವುದು ಅಥವಾ ಸಾಬೀತಾಗುವುದು, ಅವನ ಸಾಮರ್ಥ್ಯದಿಂದಲ್ಲ. ಅಂದರೆ ಇದು ಲಕ್ಷ್ಮಣನೇ ತನ್ನ ಕಲಾನಿಪುಣತೆಯಿಂದ ಸಾಧಿಸಿ ತೋರಿಸುವುದಲ್ಲ; ಬದಲಿಗೆ ಲೇಖಕರು ಹಾಗೂ ಕೃತಿಯಲ್ಲಿ ಬರುವ ಇನ್ನಿತರ ಪಾತ್ರಗಳೂ ನೀಡುವ ವೈಭವಯುತ ಹೇಳಿಕೆಗಳಿಂದ.

ಕಾದಂಬರಿಯಲ್ಲಿ ಪ್ರಬಲವಾಗಿರುವುದು ಅದರ ಪರಿಣಾಮಕಾರಿ ಅಂತ್ಯ. ಇಲ್ಲಿ ಲೇಖಕರ ಚಿತ್ರಕ ಶಕ್ತಿ, ಕೌಶಲಗಳು ಉನ್ನತವಾಗಿ ಕೆಲಸ ಮಾಡಿವೆ. ಲಕ್ಷ್ಮಣನ ಆನಂದ ಭೈರವಿ, ಪೂರ್ವಿಕಲ್ಯಾಣಿಗಳು ಓದುಗರ ಸ್ಮೃತಿಪಟಲದಲ್ಲಿ ರಾರಾಜಿಸುತ್ತವೆ. ಅವನು ಸಂಧ್ಯಾರಾಗವನ್ನು ಹಾಡುತ್ತಿದ್ದ ಹಾಗೇ, ಓದುಗರು ಉಸಿರು ಬಿಗಿಹಿಡಿಯುವಂತಾಗಿ, ಅವನ ಅಂತ್ಯದೊಂದಿಗೆ ಓದುಗರು ತಟಸ್ಥಗೊಳ್ಳುತ್ತಾರೆ. ನಿಜ, ಒಬ್ಬ ಕಲಾವಿದನಾಗಿ ಲಕ್ಷ್ಮಣನ ಸಾಧನೆ ಅನಪಮ. ಆದರೆ ಒಬ್ಬ ವ್ಯಕ್ತಿಯಾಗಿ? ಅವನು ಸೋತಿದಾನೆಂದೇ ಹೇಳಬೇಕು. ತನ್ನ ಜೀವನದಲ್ಲಿ ಎದುರಾಗುವ ಸಂಕಷ್ಟಗಳಿಗೆ ಅವನು ಬೆನ್ನು ತಿರುಗಿಸುತ್ತಾನೆ. ಒಂದು ಹಂತದಲ್ಲಂತೂ ಲಕ್ಷ್ಮಣ ಪಲಾಯನವಾದಿಯಂತೆಯೇ ಕಾಣುತ್ತಾನೆ. ಲಕ್ಷ್ಮಣನಲ್ಲಿ ಇರುವ ಕಲಾವಿದ ವ್ಯಕ್ತಿತ್ವವನ್ನು ಚಿತ್ರಿಸುವ ಭರದಲ್ಲಿ ಲೇಖಕರು ಅವನ ವ್ಯಕ್ತಿತ್ವ ಚಿತ್ರಣಕ್ಕೆ ಅಷ್ಟು ಪ್ರಾಮುಖ್ಯತೆ ಕೊಟ್ಟಂತಿಲ್ಲ. ಅಥವಾ ಅವನ ವ್ಯಕ್ತಿತ್ವದ ಸೋಲನ್ನು ನಿರ್ಲಕ್ಷಿಸಲಾಗಿದೆ ಎನ್ನಬಹುದು.

ಕಾದಂಬರಿಯ ಸಂವಾದ ಶೈಲಿ, ಸಂಭಾಷಣೆ, ಕತೆಯ ಓಟ – ಅಚ್ಚುಕಟ್ಟಾಗಿ ಮೂಡಿಬಂದಿದೆ. ಪೀಳಿಗೆಯಿಂದ ಪೀಳಿಗೆಗೆ ಸಾಗುವ ವ್ಯಾಪ್ತಿಯ ಅರಿವು ಉಂಟಾಗದಂತೆ ಕತೆ ಮುಂದುವರಿಯುವುದು ವಿಶಿಷ್ಟವಾಗಿದೆ.

ಪಾತ್ರಗಳು ಒಂದು ಆದರ್ಶದ ನೆಲೆಯಲ್ಲಿ ಹೊಂದಿಕೊಂಡಿವೆ. ಇಂತಹ ನಿರ್ದಿಷ್ಟ ಪರಿಕಲ್ಪನೆಯ ಹಿನ್ನೆಲೆಯಲ್ಲಿ ನೋಡಿದಾಗ ಇವು ಇಷ್ಟವಾಗುತ್ತವೆ.

ಒಟ್ಟಿನಲ್ಲಿ ಕಲಾವಿದನೊಬ್ಬ ತನ್ನ ಕಲೆಯಲ್ಲಿ ಇದಕ್ಕಿಂತಲೂ ಹೆಚ್ಚಿನದಾದ್ದನ್ನು ಸಾಧಿಸಲು ಸಾಧ್ಯವೇ ಇಲ್ಲ. ಅವನ ಕಲೆ ಎಷ್ಟು ತೀವ್ರವಾದುದು ಎಂತಹ ಸ್ಫೋಟಕ ಶಕ್ತಿಯುಳ್ಳದ್ದು, ಜೀವನವನ್ನೂ ಮೀರಿ ಬೆಳಗಬಲ್ಲದು – ಎಂಬುದನ್ನು ಇಲ್ಲಿ ತಿಳಿದುಕೊಳ್ಳಬಹುದು. ಕಲೆ ಇಲ್ಲಿ ಬದುಕಿಗಿಂತಲೂ ದೊಡ್ಡದಾಗಿ ಕಂಡಿದೆ. ಕಲೆಯನ್ನು ಒಂದು ತಪಸ್ಸಾಗಿ, ಉಪಾಸನೆಯನ್ನಾಗಿ ಮಾಡಿಕೊಂಡವರಿಗೆ ಮಾತ್ರವೇ ಇದು ಸಾಧ್ಯವಾಗುವಂತದ್ದು. ಕಲಾಮಾರ್ಗ, ಆ ಮಾರ್ಗದ ಸಾಧನೆ ಎಷ್ಟು ಕಠಿಣವಾದದ್ದು ಎಂಬುದನ್ನಿಲ್ಲಿ ಅರಿಯಬಹುದು. ಆದರೆ ಲಕ್ಷ್ಮಣನ ಬದುಕಿನಲ್ಲಿ ಇಂತಹ ಮುಕ್ತಾಯದ ಅಗತ್ಯವಿತ್ತೆ? ಎಂಬ ಪ್ರಶ್ನೆ ಮೂಡುವುದು ಸಹಜ. ಆದರೆ ಲಕ್ಷ್ಮಣ ಹೀಗೆ ಅಂತ್ಯ ಕಂಡಿದ್ದರಿಂದಲೇ ಅವನು ಓದುಗರ ಹೃದಯದಲ್ಲಿ ಚಿರಂತನವಾಗಿ ನೆಲೆನಿಲ್ಲಲು ಸಾಧ್ಯವಾಗಿದೆ ಎಂದು ಹೇಳಬಹುದು.

ಮಾಸ್ತಿಯವರ 'ಸುಬ್ಬಣ್ಣ' ೧೯೨೮ ರಲ್ಲಿ ಮೊದಲ ಮುದ್ರಣವನ್ನು ಕಂಡ ಕೃತಿ. ಅನಂತರ ಅದು ಹಲವು ಮುದ್ರಣಗಳನ್ನು ಕಂಡಿದೆ. ಇಲ್ಲಿಯವರೆಗೆ ೧೯ ಮುದ್ರಣಗಳನ್ನು ಕಾಣುತ್ತಿರುವ ಜನಪ್ರಿಯ ಕೃತಿ ಇದಾಗಿದೆ. ಮಾಸ್ತಿಯವರ ಜೀವನ ದರ್ಶನವನ್ನು ಹಿಡಿದಿಟ್ಟುರುವ ಕೃತಿ ಇದು. ಇದು ಅವರ ಮಿತ್ರರಾದ ನವರತ್ನರಾಮರಾಯರಿಂದ ಇಂಗ್ಲಿಷ್‌ಗೂ ಅನುವಾದಗೊಂಡಿದೆ. ಇಲ್ಲಿ ಸುಬ್ಬಣ್ಣ ಸಂಗೀತಗಾರನಾದರೂ, ಅವನನ್ನು ಮಹಾನ್ ಸಂಗೀತಗಾರನಾಗಿ ಚಿತ್ರಿಸುವುದು ಕಾದಂಬರಿಯ ಉದ್ದೇಶವಲ್ಲ. ವ್ಯಕ್ತಿಯೊಬ್ಬನ ಆತ್ಮೋದ್ಧರ ಇದರ ಕೇಂದ್ರಸ್ಥಾನ. ಹೀಗಾಗಿ ಇಲ್ಲಿ 'ಸುಬ್ಬಣ್ಣ' ಕಲಾಮಾರ್ಗದಲ್ಲಿ ಸಾಗಿ, ನಿಜವಾದ ಕಲಾವಿದನು ಮಾಡುವಂತಹ ಸಾಧನೆಯನ್ನೇನೂ ಮಾಡುವುದಿಲ್ಲ. ಸುಬ್ಬಣ್ಣ ಒಬ್ಬ ವ್ಯಕ್ತಿಯಾಗಿ ಬೆಳೆಯುತ್ತಾನೆಯೇ ಹೊರತು ಕಲಾವಿದನಾಗಿ ಅಲ್ಲ. ಈ ನಿಟ್ಟಿನಲ್ಲಿ ಲೇಖಕರ ಉದ್ದೇಶ ಸ್ಪಷ್ಟವಿದೆ.

'ಸುಬ್ಬಣ್ಣ' ಒಂದು ನೀಳ್ಗತೆಯಾದರೂ ಇದರ ತಾಂತ್ರಿಕತೆ ವಿಶಿಷ್ಟವಾದುದು. ಸುಬ್ಬಣ್ಣನ ಜೀವನದ ವಿವರಗಳು ಮೂರು ಘಟ್ಟಗಳಲ್ಲಿ ಸಮಗ್ರವಾಗಿ ಚಿತ್ರಿತವಾಗಿದೆ. ಇಲ್ಲಿ ನಿರೂಪಕರು, ಲೇಖಕರಿಂದ ಸುಬ್ಬಣ್ಣನ ಬದುಕಿನ ವಿವರಗಳು ದೊರೆಯುತ್ತಾ ಹೋಗುವುದು ಸ್ವಲ್ಪ ಗೊಂದಲವನ್ನು ಉಂಟುಮಾಡುತ್ತದೆ. ಆದ್ದರಿಂದಲೇ ಇದು ಎಷ್ಟು ಅಧಿಕೃತವೆಂಬ ಪ್ರಶ್ನೆ ಮೂಡುತ್ತದೆ. ಆದರೆ ಕೃತಿಯಲ್ಲಿ ಎಲ್ಲಿಯೂ ಕೃತಕತೆ ತೋರುವುದಿಲ್ಲ. ವರ್ಣಿಸುವುದಕ್ಕಾಗಿ ವರ್ಣನೆಯಿಲ್ಲ; ಉತ್ಪ್ರೇಕ್ಷೆಯೂ ಕಂಡುಬರುವುದಿಲ್ಲ. ಕತೆಗೆ ನಿರೂಪಕರಿಂದ ಸರ್ವಸಾಕ್ಷಿತ್ವ ಒದಗಿದಂತೆ ಕಂಡುಬರುತ್ತದೆ.

ಜೀವನದ ಅಸಂಗತೆ, ಏಕಾಂಗಿತನ, ಇವುಗಳನ್ನು ಎದುರಿಸಬೇಕಾದುದು ಜೀವನ ವಿಮುಖತೆಯಿಂದಲ್ಲ; ಎಂಬುದು ಇಲ್ಲಿನ ನಿಲುವು. ಆದ್ದರಿಂದಲೇ ಇಲ್ಲಿ 'ಸುಬ್ಬಣ್ಣ' ಫಲಾಯನವಾದಿಯಾಗಿಲ್ಲ.

**"ಸುಬ್ಬಣ್ಣನ ಜೀವನ ನಿರ್ಲಿಪ್ತತೆಯ, ವಿರಕ್ತಿಯ ಅಂಶಗಳಿಂದ ಕೂಡಿ ಪೂರ್ಣವಾಗಿತ್ತು ಎಂಬುದು ಕತೆಯಲ್ಲಿ ಮಂಡಿತವಾಗುವ 'ಹೇಳಿಕೆ'ಯಾದರೆ, ಆತನ ಜೀವನ ಏಕಾಂಗಿತನ ತಂದೊಡ್ಡುವ ಇಕ್ಕಟ್ಟುಗಳಿಂದ ರಕ್ಷಿತ ಪ್ರದೇಶಕ್ಕೆ ಹೋಗುವ ಆಸಕ್ತಿಯನ್ನು ತೋರುವುದು ಕತೆಯಲ್ಲಿ 'ಕಾಣುವ' ಸಂಗತಿಯಾಗಿದೆ"**[೧].

ಮೇಲಿನ ಈ ಹೇಳಿಕೆ ಅಷ್ಟು ಸಮಂಜಸವೆನಿಸುವುದಿಲ್ಲ. ಸುಬ್ಬಣ್ಣ 'ರಕ್ಷಿತ' ಪ್ರದೇಶಕ್ಕೆ ಹೋಗುವ ಆಸಕ್ತಿ ಅವನು ಜೀವನಕ್ಕೆ ಬೆನ್ನು ತಿರುಗಿಸುವಂತದ್ದಲ್ಲ. ಒಂದು ಬಗೆಯ ಶೂನ್ಯ. ಆದರೆ ಆ ಶೂನ್ಯವೂ ಅವನಲ್ಲಿ ಪೂರ್ತಿಯಾಗಿ ಉಳಿಯುವುದಿಲ್ಲ. ಸಹಮಾನವ ಪ್ರೇಮದಿಂದ ಸುಬ್ಬಣ್ಣ ಅದನ್ನು ತುಂಬಿಕೊಂಡಿದ್ದಾನೆ. ಆ ಮೂಲಕ ಶೂನ್ಯತೆಯಿಂದ ಉಂಟಾಗುತ್ತಿದ್ದ ಅಪಾಯವನ್ನು ತಪ್ಪಿಸಿಕೊಂಡಿದ್ದಾನೆ.

'ಸುಬ್ಬಣ್ಣ'ನಲ್ಲಿ ಉದ್ದಕ್ಕೂ ಬಿಡುಗಡೆಯ ತವಕ ಮಿಡಿದರೂ; ಅದು ಜೀವನದ ಬಗೆಗಿನ ಜಿಗುಪ್ಸೆ ಅಲ್ಲ. ಸಾಕೆಂಬ ಭಾವನೆ ಮಾತ್ರ. ಇವನ್ನು ನಿರೂಪಕರೂ ಸಹ ಸ್ಪಷ್ಟಪಡಿಸುತ್ತಾರೆ. ಸುಬ್ಬಣ್ಣ ತನ್ನ ಸಂಗೀತವನ್ನು ಬಿಡಲು ಪ್ರಯತ್ನಿಸುವಾಗ ಅವನಲ್ಲಿದ್ದ ಭಾವನೆಯೇ ಬೇರೆ. ಆದರೆ ಅದನ್ನು ಅವನು ಕಳೆದುಕೊಂಡಾಗ ಅವನು ಅನುಭವಿಸುವ ಸಂಕಟ ಅವನ ನಿಜವಾದ ಮಿಡಿತವನ್ನು ತಿಳಿಸುತ್ತದೆ.

'ಸುಬ್ಬಣ್ಣ'ನ ಆತ್ಮಕೇಂದ್ರಿತ ವ್ಯಕ್ತಿತ್ವ ಆತ್ಮೋದ್ದಾರಕ್ಕೆ ಅನುವಾಗುವುದು, ಅವನ ಸಂಗೀತದ ಮೂಲಕವೇ ಎಂಬುದನ್ನು ನೆನಪಿಡಬೇಕು. ಅವನ ವ್ಯಕ್ತಿತ್ವ ಸಂಸ್ಕಾರಗೊಳ್ಳಲು ಸಂಗೀತವೇ ಅವನಿಗೆ ಹಾದಿ ನಿರ್ಮಿಸುತ್ತದೆ. ಇಲ್ಲಿನ ಕಲಾವಿದ ಸಂಧ್ಯಾರಾಗದ ಕಲಾವಿದನಿಗಿಂತ ಭಿನ್ನನಾಗಿದ್ದಾನೆ. ಆರಂಭದಲ್ಲಿ 'ಸುಬ್ಬಣ್ಣ'ನಿಗೆ ಸಂಗೀತವೇ ಪ್ರಪಂಚ. ಆದರೆ ಅನಂತರ ಅವನು ಅದನ್ನು ಆಸರೆಯಾಗಿ ಬಳಸಿಕೊಳ್ಳುತ್ತಾನೆ. ಮುಂದೆ ಅವನಲ್ಲಿ ವೈರಾಗ್ಯ ಹುಟ್ಟಿದಾಗ, ಮಾನವ ಜೀವನದ ನೆಲೆಗೆ ಅವನನ್ನು ಎಳೆದು ತರುವುದು ಅವನ ಸಂಗೀತವೇ.

ಇಲ್ಲಿ ಕಲೆಯು ಬದುಕಿನ ಅನಿವಾರ್ಯ ಭಾಗವಾಗಿದೆ. ಸುಬ್ಬಣ್ಣನ ಜೀವನದಲ್ಲಿ ಮನಶ್ಯಾಂತಿ ಸಮಾಧಾನಗಳು ದೊರೆಯುವುದು ಈ ಕಲೆಯಿಂದಲೇ. ಇಲ್ಲಿ ಸುಬ್ಬಣ್ಣ ಕಲೆಯಿಂದ ಉದ್ಧಾರವಾಗಿದ್ದಾನೆ ಅವನಿಂದ ಕಲೆಯಲ್ಲ. ಅವನ ಆತ್ಮೋದ್ಧಾರದಿಂದಲೇ ಅವನ ಸಂಗೀತವೂ ಹೃದಯ ಗಾನವಾಗಿ ಹೊಮ್ಮಿದೆ. ಆ ಮೂಲಕವೇ ಸುಬ್ಬಣ್ಣನಿಗೆ ಸಂಗೀತದಿಂದ ಸರ್ವತತ್ವಗಳೂ ತಿಳಿಯುವುದು. ಅವನು ಕಲಾವಿದನೊಬ್ಬನ ನಿಜವಾದ ಸಾಧನೆಯನ್ನಾಗಲೀ, ತಪಸ್ಸನ್ನಾಗಲೀ ಮಾಡಿಲ್ಲ. ಅವನನ್ನು ಒಬ್ಬ ಉನ್ನತ ಕಲಾವಿದನನ್ನಾಗಿ ಕಾದಂಬರಿ ಚಿತ್ರಿಸಲು ಹೊರಟಿಲ್ಲ. ಅದರ ಮುಖ್ಯ ಉದ್ದೇಶ – ಸುಬ್ಬಣ್ಣನ ಆತ್ಮಕೇಂದ್ರಿತ ವ್ಯಕ್ತಿತ್ವ ವಿಶ್ವಕೇಂದ್ರಿತವಾಗುವ ರೀತಿಯನ್ನು ಚಿತ್ರಿಸುವುದು. ಆದರೆ ಈ ಮಾರ್ಗ ಅವನ ಸಂಗೀತದ ಸಹಕಾರವಿಲ್ಲದೆ ಸಾಗುತ್ತಿರಲಿಲ್ಲ; ಅವನ ಪಕ್ವತೆಯಲ್ಲಿ ಅವನ ಸಂಗೀತವೂ ತನ್ನ ಮಹತ್ತರ ಪಾತ್ರವನ್ನು ವಹಿಸಿದೆ ಎಂಬುದನ್ನು ಮನದಟ್ಟು ಮಾಡುತ್ತದೆ.

---

೧. **ಬೇರು ಕಾಂಡ ಚಿಗುರು – 'ಸುಬ್ಬಣ್ಣ' ಎಷ್ಟು ಅಧಿಕೃತ – ಕೆ. ವಿ. ನಾರಾಯಣ – ಪು. ೩೧೬**

'ಸುಬ್ಬಣ್ಣ' ಮುಕ್ತಿಯನ್ನು ಪಡೆಯುವುದು ಸಾಂಪ್ರದಾಯಿಕ ಮೌಲ್ಯಗಳ ಆಶ್ರಯದಲ್ಲಿಯೇ; ಜ್ಞಾನ-ಭಕ್ತಿ-ವೈರಾಗ್ಯಗಳ ಮೂಲಕವೇ. ಆದರೆ ಇವುಗಳ ನಡುವೆ ಅನನ್ಯ ಜೀವನ ಪ್ರೀತಿ ಅವನ ಆತ್ಮಸಂಸ್ಕಾರವನ್ನು ಪೂರ್ಣಗೊಳಿಸುತ್ತದೆ. ಇಲ್ಲಿ ಮಾಸ್ತಿಯವರದ್ದು ಸಾಂಪ್ರದಾಯಿಕ ದೃಷ್ಟಿ ಇದ್ದರೂ ಸಂಪೂರ್ಣವಾಗಿ ಮುಚ್ಚಿಕೊಂಡ ಮನೋಧರ್ಮವಲ್ಲ.

'ಸುಬ್ಬಣ್ಣ' ನೀಲಸಾನಿಗೆ ಹಣಹಿಂದಿರುಗಿಸುವುದು, ಮೈಸೂರಿನಲ್ಲಿ ಸೂಳೆಯರಿಗೆ ಪಾಠ ಹೇಳಲು ಒಪ್ಪದೆ ಇದ್ದದ್ದು - ತನ್ನನ್ನು ತಾನು ಪರಿಶುದ್ಧಗೊಳಿಸಿಕೊಳ್ಳುವ ಹಂಬಲದಿಂದ ಎಂದು ಕೆ.ವಿ.ನಾರಾಯಣ್ ಅವರು ಹೇಳುತ್ತಾರೆ.

**"ತನ್ನನ್ನು ಹೀಗೆ 'ಪರಿಶುದ್ಧ' ವಾಗಿರಿಸಿಕೊಳ್ಳುವ ಬಯಕೆಯನ್ನು ಸುಬ್ಬಣ್ಣ ತನ್ನ ಕೊನೆಗಾಲದವರೆಗೂ ಬಿಟ್ಟು ಕೊಡುವುದಿಲ್ಲ"**[೧].

ಈ ಅಭಿಪ್ರಾಯವು ಪರಿಶೀಲನಾರ್ಹ. ಸುಬ್ಬಣ್ಣ ತನ್ನನ್ನು ಪರಿಶುದ್ಧಗೊಳಿಸಿಕೊಳ್ಳುವ ಸಾಂಪ್ರದಾಯಿಕ ದೃಷ್ಟಿಕೋನವನ್ನು ಮಾಸ್ತಿಯವರು ತಂದಿಲ್ಲ. ಸುಬ್ಬಣ್ಣ ಮೈಸೂರಿನಲ್ಲಿ ಸೂಳೆಯರಿಗೆ ಪಾಠ ಹೇಳಿಕೊಡಲು ಒಪ್ಪದಿದ್ದುದು, ಅದು ತಂದೆಗೆ ಇಷ್ಟವಾಗುವುದಿಲ್ಲ ಎಂಬ ಕಾರಣಕ್ಕೆ. ಅವನು ನೀಲಸಾನಿಗೆ ಹಣವನ್ನು ಹಿಂತಿರುಗಿಸುವುದು, ಮೈಸೂರಿನ ತನ್ನ ಎಲ್ಲಾ ಋಣಗಳನ್ನೂ ಮುಕ್ತಗೊಳಿಸಲು; ಆತ್ಮಾಭಿಮಾನದಿಂದ, ತನ್ನನ್ನು ಪರಿಶುದ್ಧವಾಗಿಸಿಕೊಳ್ಳುವ ಬಯಕೆಯಿಂದಲ್ಲ. ಅಂತಹ ಮನೋಧರ್ಮ ಲೇಖಕರಿಗಾಗಲೀ, ಸುಬ್ಬಣ್ಣನಿಗಾಗಲೀ ಇದ್ದಿದ್ದರೆ, ಅವನು ನಟುವರ ವೆಂಕಟರಮಣನಿಗೆ ಪ್ರೀತಿಯಿಂದ ಪಾಠ ಹೇಳಿಕೊಡಲು ಸಾಧ್ಯವಾಗುತ್ತಲೇ ಇರಲಿಲ್ಲ.

ಮಾಸ್ತಿಯವರು 'ಸುಬ್ಬಣ್ಣ' ಕೃತಿಯ ಮೂಲಕ ವಿರಕ್ತಿಯನ್ನಾಗಲೀ, ಜೀವನ ವಿಮುಖತೆಯನ್ನಾಗಲೀ ಬೋಧಿಸುತ್ತಿಲ್ಲ. ಅದು ಕೃತಿಯಲ್ಲಿ ಸ್ಪಷ್ಟವೂ ಇದೆ. ಬದಲಿಗೆ ಅವರು ಹೇಳಹೊರಟಿರುವುದು ಜೀವನ ಪ್ರೀತಿಯನ್ನು. ಮುಕ್ತಿಯ ಮಾರ್ಗ ಬದುಕಿನ ಆಚೆಗೆ ದೊರೆಯುವ ಸ್ಥಿತಿಯಲ್ಲ, ಎಂತಹ ಸಾಧಾರಣ ಮಾನವ ಹೃದಯವೂ ಪ್ರಯತ್ನ ಪಟ್ಟರೆ, ಉನ್ನತ ನೆಲೆಗೆ ಏರಿ, ತನ್ನ ಜೀವನದಲ್ಲೇ ಇದನ್ನು ಸಾಧಿಸಬಹುದೆಂಬ ಸತ್ಯವನ್ನು ಇಲ್ಲಿ ತೆರೆದಿಟ್ಟಿದ್ದಾರೆ. ತುಂಬು ಜೀವನವನ್ನು ಕಂಡ ಲೇಖಕರಿಗೆ ಆದರ್ಶ, ಕನಸುಗಾರಿಕೆ, ಜೀವನ ಪ್ರೀತಿ ಇವೆಲ್ಲವೂ ಮೈಗೂಡಿವೆ. ತಮ್ಮ ಕೃತಿಯ ಮೂಲಕ ಅವರು ಹೇಳುವುದು ಇವನ್ನೇ. ಕಲೆ-ಜೀವನ-ಮುಕ್ತಿ - ಈ ಎಲ್ಲಾ ಅಂಶಗಳೂ ಕತೆಯಲ್ಲಿ ಹಾಸುಹೊಕ್ಕಾಗಿ ಮುಡಿಬಂದು, ಓದುಗರನ್ನು ಚಿಂತನೆಗೆ ಹಚ್ಚುತ್ತದೆ.

ಒಟ್ಟಿನಲ್ಲಿ ಎರಡೂ ಕೃತಿಗಳು ಸಾಹಿತ್ಯದ ದೃಷ್ಟಿಯಿಂದ ವಿಶಿಷ್ಟವಾಗಿದೆ. ಎರಡೂ, ತಮ್ಮದೇ ಆದ ಭಿನ್ನ ವಿಚಾರಗಳನ್ನು ಸ್ಪಷ್ಟ ಪಡಿಸುತ್ತವೆ. 'ಕಲಾವಿದನ ಬದುಕು' ಎರಡೂ ಕೃತಿಗಳ ವಸ್ತುವಾಗಿದೆ. ಆದರೆ ಜೀವನ - ಕಲೆಗಳ ಬಗ್ಗೆ ಈ ಎರಡೂ ಕೃತಿಗಳು ತಳೆದಿರುವ ನಿರ್ಧಾರ ಬೇರೆ-ಬೇರೆ. 'ಸುಬ್ಬಣ್ಣ' ಜೀವನಕ್ಕೆ ಪ್ರಾಮುಖ್ಯತೆ

---

೧. ಬೇರು -ಕಾಂಡ-ಚಿಗುರು- ಸುಬ್ಬಣ್ಣ! ಎಷ್ಟು ಅಧಿಕೃತ: ಕೆ.ವಿ.ನಾರಾಯಣ ಪು. ೩೧೭

ನೀಡಿದ್ದರೆ, 'ಸಂಧ್ಯಾರಾಗ' – ಕಲೆಯನ್ನೇ ಪ್ರಧಾನ ಅಂಶವಾಗಿ ನೋಡಿದೆ. ಜೀವನದ ದೃಷ್ಟಿಯಿಂದ 'ಸುಬ್ಬಣ್ಣ', ಕಲೆಯ ದೃಷ್ಟಿಯಿಂದ 'ಲಕ್ಷ್ಮಣ' ಇಬ್ಬರೂ ಆದರ್ಶಪಾತ್ರವಾಗಿದ್ದಾರೆ. ಆದರೆ ಜೀವನ ಮತ್ತು ಕಲೆ ಇವುಗಳಿಗೆ ನೀಡಬೇಕಾದ ಮಹತ್ವ ಎಂಥದ್ದೂ ಎಂಬ ಜಿಜ್ಞಾಸೆ ನಮ್ಮಲ್ಲಿ ಹುಟ್ಟುತ್ತದೆ. ಜೀವನವೇ ಎನ್ನುವುದಾದರೆ 'ಸುಬ್ಬಣ್ಣ' ಕೃತಿಯೇ ಹೆಚ್ಚು ಮುಖ್ಯವಾಗುತ್ತದೆ.

* * *

ಅಧ್ಯಾಯ – ೮

# ಉಪಸಂಹಾರ

ಮಾನವನು ತನ್ನ ಜೀವನದಲ್ಲಿ ಹಲವು ವಿಚಾರಗಳಿಗೆ ಪ್ರಾಮುಖ್ಯತೆ ನೀಡಿದ್ದಾನೆ. ಕಲೆ–ಸಾಹಿತ್ಯ ಈ ಮುಂತಾದ ವಿಚಾರಗಳಿಂದ ತನ್ನ ಬದುಕನ್ನು ಇನ್ನಷ್ಟು ಸುಂದರಗೊಳಿಸಿದ್ದಾನೆ. ಬಹು ಹಿಂದಿನಿಂದಲೂ ಇವು ಮಾನವನ ಜೀವನೊಂದಿಗೆ ಬೆಸೆದುಕೊಂಡು ಬಂದು, ಅವನ ಜೀವನಕ್ಕೆ ಒಂದು ಸಾಂಸ್ಕೃತಿಕ ಚೌಕಟ್ಟನ್ನು ನಿರ್ಮಿಸಿವೆ; ಬದುಕನ್ನು ಚೆಲುವೂ – ಅರ್ಥಪೂರ್ಣವೂ ಆಗಿಸಿವೆ. ಒಂದೊಂದು ಕಾಲದಲ್ಲೂ ಇವುಗಳಿಗೆ ದೊರೆತ ಪ್ರೋತ್ಸಾಹ ಬೇರೆ ಬೇರೆ. ಜೀವನ ಅಸಂಗತೆ, ಸಂಕೀರ್ಣತೆ, ನೋವು – ಸಂಕಷ್ಟ – ಇವುಗಳೆಲ್ಲದರ ನಡುವೆ ಶಾಂತಿದಾಯಿಯಾಗಿ ನಿಲ್ಲುವ, ಆನಂದವನ್ನು ತುಂಬಿ ಮನಸ್ಸನ್ನು ಮುದಗೊಳಿಸುವ ಶಕ್ತಿ ಕಲೆಗಿದೆ. ಇಂತಹ ಹಲವಾರು ಕಲೆಗಳು ಮಾನವನ ಬದುಕನ್ನು ತೊಳಗಿ ಬೆಳಗಿವೆ. ಅವುಗಳಲ್ಲಿ ಸಂಗೀತವೂ ಒಂದು. ಇದು ಪ್ರಕೃತಿಯಲ್ಲಿಯೇ ಜನಿಸಿರುವಂತದ್ದೂ, ನಮ್ಮ ಋಷಿ ಮುನಿಗಳೂ ಇವುಗಳನ್ನು ಕಂಡು, ಮೆಚ್ಚಿ ಬೆಳೆಸಿರುವರೆಂದು ನಂಬಲಾಗಿದೆ. ಇಂತಹ ಸಂಗೀತ ಕಲೆಗೆ ಪ್ರಸ್ತುತ ಸಾಕಷ್ಟು ಮನ್ನಣೆ – ಪ್ರೋತ್ಸಾಹಗಳನ್ನೂ ನೀಡಲಾಗಿದೆ. ಕೆಲವರಿಗೆ ಇದು ಜೀವನದ ಒಂದು ಭಾಗವಾಗಿದ್ದರೆ, ಇನ್ನು ಕೆಲವರಿಗೆ ಇದೇ ಜೀವನವಾಗಿದೆ. ಈ ಎರಡೂ ದೃಷ್ಟಿಕೋನಗಳ ಪರಿಶೀಲನೆ ಅತ್ಯಗತ್ಯ. ಇದಕ್ಕಾಗಿ ಈ ವಿಚಾರದ ವಿಶ್ಲೇಷಣೆಗೆ ಪೂರಕವಾದ ಶ್ರೀನಿವಾಸ ಅವರ 'ಸುಬ್ಬಣ್ಣ', ಮತ್ತು ಅ.ನ.ಕೃ. ಅವರ 'ಸಂಧ್ಯಾರಾಗ' – ಕಾದಂಬರಿಯನ್ನು ಆಧಾರವಾಗಿಟ್ಟುಕೊಂಡು ತೌಲನಿಕವಾಗಿ ವಿಶ್ಲೇಷಿಸಲಾಗಿದೆ. ಈ ನಿಬಂಧದಲ್ಲಿ ಒಟ್ಟಾರೆಯಾಗಿ ವ್ಯಕ್ತಗೊಂಡಿರುವ ಅಂಶಗಳನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

ಒಟ್ಟು ಈ ಅಧ್ಯಾಯವನ್ನು ಸೇರಿ ಎಂಟೂ ಅಧ್ಯಾಯಗಳಲ್ಲಿ ಈ ವಿಷಯವನ್ನು ಬಿಡಿ–ಬಿಡಿಯಾಗಿ ನಿರೂಪಿಸಲಾಗಿದೆ.

ಮೊದಲನೇ ಅಧ್ಯಾಯದಲ್ಲಿ ಪ್ರಸ್ತುತ ವಿಷಯವನ್ನು ಆಯ್ದುಕೊಂಡ ಉದ್ದೇಶ, ಕೃತಿಗಳ ಲೇಖಕರ ಮನೋಧರ್ಮದ ಪರಿಚಯ, ಕೃತಿಗಳಲ್ಲಿ ವಿಷಯಗಳು ನಿರೂಪಣೆಗೊಂಡಿರುವ ಬಗೆ, ವಿಷಯದ ವ್ಯಾಪ್ತಿ, ಈ ವಿಷಯಕ್ಕೆ ಹಿಂದಿನಿಂದಲೂ ದೊರೆತ ಪ್ರೋತ್ಸಾಹ, ಈಗ ದೊರೆಯುತ್ತಿರುವ ಮನ್ನಣೆ, ಈ ಹಿನ್ನಲೆಯಲ್ಲಿ ವಿಷಯದ ಅಧ್ಯಯನ ಎಷ್ಟು ಅಗತ್ಯ ಎಂಬವುಗಳನ್ನು ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ 'ಸುಬ್ಬಣ್ಣ' ನೀಳ್ಗತೆಯ ವಸ್ತುವಿನ ಸ್ವರೂಪ, ಅದರ ವಸ್ತುವಿನ್ಯಾಸ, ಕಥಾವಿನ್ಯಾಸಗಳು, ಹಾಗೂ ಅವು ವಸ್ತು, ಪಾತ್ರಗಳಲ್ಲಿ ಮೈದೋರಿರುವ ಬಗೆ, ಈ ಮೂಲಕ ಲೇಖಕರ ನಿಲವು – ಈ ಮುಂತಾದ ವಿಷಯಗಳನ್ನು ಕುರಿತು ಚರ್ಚಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಅ.ನ.ಕೃ. ರವರ 'ಸಂಧ್ಯಾರಾಗ' ಕಾದಂಬರಿಯನ್ನು ಕುರಿತು ಚರ್ಚಿಸಲಾಗಿದೆ. 'ಸಂಧ್ಯಾರಾಗ' ಕಾದಂಬರಿಯ ವಸ್ತುವಿನ ಸ್ವರೂಪ, ಕಥಾವಿನ್ಯಾಸ ಮುಂತಾದವುಗಳನ್ನೆಲ್ಲಾ ವಿವರಿಸಿರುವುದಲ್ಲದೆ ಆ ಕುರಿತು ಲೇಖಕರ ನಿಲುವು ಏನೆಂಬುದನ್ನು ಕುರಿತು ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ 'ಸುಬ್ಬಣ್ಣ' ನೀಳ್ಗತೆಯ ಪಾತ್ರಗಳನ್ನು ಕುರಿತು ದೀರ್ಘವಾಗಿ ವಿವೇಚಿಸಲಾಗಿದೆ. 'ಸುಬ್ಬಣ್ಣ' ಕೃತಿಯ ನಾಯಕನ ಧೋರಣೆಗಳನ್ನು, ಇವುಗಳಿಗೆ ಪೂರಕವಾಗಿ ಬರುವಂತಹ ಸಂದರ್ಭ – ಸನ್ನಿವೇಶಗಳನ್ನು ಕುರಿತು ವಿವರಿಸಲಾಗಿದೆ. ನಾಯಕನ ಪಾತ್ರಕ್ಕೆ ಪೋಷಕನಾಗಿ ಬರುವ ಇನ್ನಿತರ ಪಾತ್ರಗಳನ್ನು ಕುರಿತು ಚರ್ಚಿಸಲಾಗಿದೆ. ವಿಶೇಷವಾಗಿ ಇವು ನಾಯಕನ ಆತ್ಮೋದ್ಧಾರಕ್ಕಾಗಿ ಹೇಗೆ ಕಾರಣವಾಗುತ್ತವೆ; ನೆರವಾಗುತ್ತದೆ. ಈ ಕೇಂದ್ರ ಆಶಯಕ್ಕಾಗಿ ಹೇಗೆ ದುಡಿದಿವೆ ಎಂಬ ವಿಚಾರಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಸ್ತ್ರೀಪಾತ್ರಗಳು ವಿಶೇಷವಾಗಿ, ಎಷ್ಟರಮಟ್ಟಿಗೆ ಮೂಡಿ ಬಂದಿವೆ ಎಂಬುದನ್ನು ಕುರಿತು ಚರ್ಚಿಸಲಾಗಿದೆ. ಇಲ್ಲಿನ ಪಾತ್ರಗಳು ವೈಚಾರಿಕತೆಯನ್ನು ಹೊಂದಿವೆಯೋ ಅಥವಾ ಭಾವಯುಕ್ತವೋ ಎಂಬುದನ್ನು ನೋಡಲಾಗಿದೆ. ಇಲ್ಲಿ ವಿಚಾರವಾದದ ಕೆಲವು ಅಂಶಗಳು ಗೋಚರಿಸುವುದು ನಾಯಕನಲ್ಲಿ ಮಾತ್ರವೇ. ಉಳಿದಂತೆ ಪಾತ್ರಗಳು ಸ್ವಲ್ಪಮಟ್ಟಿಗೆ ಭಾವಯುಕ್ತವಾಗಿವೆ. ಆದರೆ ಕೃತಕವೆನಿಸುವುದಿಲ್ಲ. ಏಕೆಂದರೆ ಇವು ಸಾಕಷ್ಟು, ಪ್ರಾಕೃತಜನ್ಯವಾಗಿವೆ. ಪ್ರಕೃತಿಯಿಂದಲೇ ಮೂರ್ತೀಭವಿಸಿದಂತಿವೆ. ಆದ್ದರಿಂದಲೇ ಇವು ಸಹಜವಾಗಿವೆ. ಇವು ನಾಯಕನ ಆತ್ಮಸಂಸ್ಕಾರಕ್ಕಾಗಿ ಬರುವ ಪಾತ್ರಗಳೆಂಬುದು ನಿಜ; ಏಕೆಂದರೆ ಕತೆಯ ಉದ್ದೇಶ ಇದೇ ಆಗಿದೆ. ಈ ಉದ್ದೇಶಕ್ಕಾಗಿಯೇ ಇಲ್ಲಿನ ಪಾತ್ರಗಳನ್ನು ದುಡಿಸಿಕೊಳ್ಳಲಾಗಿದೆ. ಆದರೆ, ಪ್ರತಿಯೊಂದು ಪಾತ್ರವೂ ತನ್ನದೇ ಆದ ಛಾಪನ್ನು ಮೂಡಿಸುವಲ್ಲಿ ಯಶಸ್ವಿಯಾಗಿವೆ. ಒಂದೊಂದೂ ವಿಶಿಷ್ಟ ನೆಲೆಯಲ್ಲಿ ಕಂಗೊಳಿಸಿವೆ – ಈ ಅಂಶಗಳನ್ನು ಕುರಿತು ವಿಶ್ಲೇಷಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ 'ಸಂಧ್ಯಾರಾಗ' ಕಾದಂಬರಿಯ ಪಾತ್ರಗಳನ್ನು ಕುರಿತು ವಿವರವಾಗಿ ವಿವೇಚಿಸಲಾಗಿದೆ. ಇಲ್ಲಿ ನಾಯಕನ ಕಲಾವಿಚಾರಗಳೊಂದಿಗೆ, ಅವನ ಸಾಂಸಾರಿಕ ಜೀವನದ ವಿವರಗಳು ವಿಸ್ತೃತವಾಗಿ ಮೂಡಿಬಂದಿದೆ. ಆದ್ದರಿಂದಲೇ ಇಲ್ಲಿ ಪಾತ್ರಗಳ ಸಂಖ್ಯೆ ಹೆಚ್ಚು. ಈ ಪಾತ್ರಗಳ ಆಲೋಚನಾ ಮಟ್ಟ, ಸ್ವಭಾವ – ನಡತೆಗಳಲ್ಲಿ ಅಷ್ಟೇನೂ ವ್ಯತ್ಯಾಸಗಳನ್ನು ಗುರುತಿಸುವುದು ಸಾಧ್ಯವಿಲ್ಲ. ಇಲ್ಲಿನ ಭಾಗಶಃ ಪಾತ್ರಗಳು ಏಕಮುಖವಾಗಿವೆ; ಒಂದೇ ಆದರ್ಶದ ನೆಲೆಯಲ್ಲಿ ಗೋಚರಿಸುತ್ತವೆ. ಜೀವನ ಕಲೆಯನ್ನು ಯಶಸ್ವಿಯಾಗಿ ನಿರ್ವಹಿಸಿವೆ. ಈ ಹಿನ್ನಲೆಯಲ್ಲಿ ನೋಡಿದಾಗಲೇ ಇವು ಸ್ವೀಕೃತವಾಗುವುದು. ಈ ಪಾತ್ರ ಚಿತ್ರಣದಲ್ಲಿ ವಾಸ್ತವಿಕತೆಯ ಕೊರತೆ ನಿಚ್ಚಳವಾಗಿವೆ. ಈ ಏಕತೆಯಲ್ಲಿ ಸ್ವಲ್ಪ ಭಿನ್ನತೆಯನ್ನು ತರಲು ಲೇಖಕರು ಸೃಷ್ಟಿಸಿದ ದುರ್ನಡತೆಯ ಪ್ರತೀಕವಾದ ಪಾತ್ರವಂತೂ ಔಚಿತ್ಯವನ್ನು ಮೀರಿದೆ. ಇಲ್ಲಿನ ಪಾತ್ರ ಚಿತ್ರಣ ಒಳಿತು – ಕೆಡುಕು ಎಂಬ ಎರಡೇ ಗುಣಗಳಗನುಗುಣವಾಗಿ ಬಂದಿರುವುದರಿಂದ ಸರಳವಾಗಿವೆ. ಸಂಕೀರ್ಣ ವ್ಯಕ್ತಿತ್ವ ಇಲ್ಲಿನ ಯಾವ ಪಾತ್ರಗಳಲ್ಲೂ ಇಲ್ಲ. ಎಲ್ಲಕ್ಕಿಂತಲೂ ಹೆಚ್ಚಾಗಿ ಇಲ್ಲಿ ಯಾವ ಪಾತ್ರವೂ ವೈಚಾರಿಕತೆಯ ಅಂಶಗಳನ್ನು ಮೇಳವಿಸಿಕೊಂಡಿಲ್ಲ. ಭಾವನಾಪರವಶತೆಯಲ್ಲಿಯೇ ತೇಲಾಡಿವೆ. ಈ ಎಲ್ಲಾ ಅಂಶಗಳನ್ನು ಐದನೆಯ ಅಧ್ಯಾಯದಲ್ಲಿ ಎಳೆ–ಎಳೆಯಾಗಿ ವಿವರಿಸಲಾಗಿದೆ.

ಆರನೆಯ ಅಧ್ಯಾಯವು ಪ್ರಸ್ತುತ ನಿಬಂಧದ ಮುಖ್ಯ ಘಟ್ಟ. ನಿಬಂಧದ ಪ್ರಮುಖ ಅಂಶವನ್ನು ಎತ್ತಿಹಿಡಿಯುತ್ತದೆ. ಅಂದರೆ 'ಸುಬ್ಬಣ್ಣ' ಮತ್ತು 'ಸಂಧ್ಯಾರಾಗ' – ಕಾದಂಬರಿಗಳಲ್ಲಿ ಕಂಡುಬರುವ ಸಾಮ್ಯ ವೈಷಮ್ಯಗಳನ್ನು ಕುರಿತು ದೀರ್ಘವಾಗಿ ವಿವೇಚಿಸಲಾಗಿದೆ. ಈ ಸಾಮ್ಯ, ವೈಷಮ್ಯಗಳನ್ನು ವಿವರಿಸಲು ಅನುಕೂಲವಾಗುವಂತೆ ಈ ಅಧ್ಯಾಯವನ್ನು ನಾಲ್ಕು ಪ್ರಮುಖ ವಿಭಾಗಗಳಾಗಿ ಮಾಡಿಕೊಳ್ಳಲಾಗಿದೆ. ಅವುಗಳೆಂದರೆ ವಸ್ತುವಿನ ಸ್ವರೂಪ, ಪಾತ್ರ ಸಂಬಂಧ, ದೃಷ್ಟಿಸಂಬಂಧ ಮತ್ತು ಅಭಿವ್ಯಕ್ತಿ ಸಂಬಂಧ ಎಂದು ವಿಭಾಗಿಸಿಕೊಳ್ಳಲಾಗಿದೆ.

ಈ ನಾಲ್ಕು ನೆಲೆಗಳಲ್ಲಿ ಮೊದಲನೆಯದಾದ ವಸ್ತುವಿನ ಸ್ವರೂಪದಲ್ಲಿ ಎರಡೂ ಕೃತಿಗಳಲ್ಲಿ ವಸ್ತುವಿಗಿರುವ ಸಾಮ್ಯತೆ, ವೈಷಮ್ಯಗಳನ್ನು ಕುರಿತು ವಿವರಿಸಿರುವುದಲ್ಲದೆ, ಅದನ್ನು ಲೇಖಕರು ನಿರೂಪಿಸಿರುವ ಬಗೆ, ತಳೆಯುವ ನಿರ್ಧಾರ ಇತ್ಯಾದಿಗಳನ್ನು ಕುರಿತು ಚರ್ಚಿಸಲಾಗಿದೆ. ಏಕೆಂದರೆ ಇಲ್ಲಿ ಎರಡೂ ಕೃತಿಗಳಲ್ಲಿರುವ 'ವಸ್ತು' ಒಂದೇ. ಆದರೆ ಆ ವಸ್ತುವನ್ನು ಬಳಸಿಕೊಂಡಿರುವಂತಹ ರೀತಿಯಲ್ಲಿ ವ್ಯತ್ಯಾಸವಿದೆ. ಆದ್ದರಿಂದ ಇಲ್ಲಿ ವಸ್ತುವಿನಲ್ಲಿ ಕಂಡುಬರುವ ವ್ಯತ್ಯಾಸಗಳು ಹಾಗೂ ಅದಕ್ಕೆ ನೆರವಾಗುವ ಸಂದರ್ಭ – ಸನ್ನಿವೇಶಗಳನ್ನು ಕುರಿತು ಚರ್ಚಿಸಲಾಗಿದೆ.

ಎರಡನೆಯ ವಿಭಾಗವಾದ ಪಾತ್ರಸಂಬಂಧದ ವಿವೇಚನೆಯಲ್ಲಿ, ಎರಡೂ ಕೃತಿಗಳಲ್ಲಿ ಕಂಡುಬರುವ ಪಾತ್ರಗಳಿಗಿರುವ ಪರಸ್ಪರ ಹೋಲಿಕೆ, ವ್ಯತ್ಯಾಸಗಳನ್ನು ಕುರಿತು ಚರ್ಚಿಸಲಾಗಿದೆ. ಎರಡೂ ಕೃತಿಗಳಲ್ಲು ಪಾತ್ರಗಳು ಎದುರಿಸುವ ಏಕರೀತಿಯ ಸನ್ನಿವೇಶಗಳು, ಅದಕ್ಕೆ ಅವು ಪ್ರತಿಕ್ರಿಯಿಸುವ ಭಿನ್ನರೀತಿಗಳು ಇವುಗಳನ್ನು ಕುರಿತು ವಿವರಿಸಲಾಗಿದೆ. ಈ ಕೃತಿಗಳ ಪಾತ್ರಗಳಲ್ಲಿ ಯಾವುದು ಹೆಚ್ಚು ಸಹಜವಾಗಿ ಮೂಡಿಬಂದಿವೆ? ಲೇಖಕರು ಆರೋಪಿಸುವಂತಹ ಗುಣ–ಸ್ವಭಾವಗಳನ್ನು ಯಾವ ಪಾತ್ರಗಳು ಸಮರ್ಪಕವಾಗಿ ಹೊರುತ್ತವೆ? ಸ್ತ್ರೀ ಪಾತ್ರಗಳು ಎರಡೂ ಕೃತಿಗಳಲ್ಲಿ ಹೇಗೆ ಮೂಡಿ ಬಂದಿವೆ? – ಈ ಪಾತ್ರಪೋಷಣೆಯಲ್ಲಿ ಲೇಖಕರು ಯಾವ ರೀತಿಯಲ್ಲಿ ಯಶಸ್ವಿಯಾಗಿದ್ದಾರೆ ಮತ್ತು ಎಲ್ಲಿ ಮಂಕಾಗಿದ್ದಾರೆ – ಎಂಬೆಲ್ಲಾ ಅಂಶಗಳನ್ನು ಕುರಿತು ಚರ್ಚಿಸಲು ಇಲ್ಲಿ ಸಾಧ್ಯವಾಗಿದೆ. ಅಲ್ಲದೇ, ಪಾತ್ರಗಳ ಗುಣ–ಸ್ವಭಾವವು ಲೇಖಕರ ನಿಲುವನ್ನು ಎತ್ತಿಹಿಡಿಯಲು ಹೇಗೆ ಸಮರ್ಥವಾಗಿವೆ ಎಂಬುದನ್ನು ಕುರಿತು ದೀರ್ಘವಾಗಿ ವಿಶ್ಲೇಷಿಸಲಾಗಿದೆ.

ಮೂರನೆಯ ವಿಭಾಗವನ್ನು 'ದೃಷ್ಟಿ ಸಂಬಂಧ'ವಾಗಿ ವಿಶ್ಲೇಷಿಸಲಾಗಿದೆ. ಅಂದರೆ ಇಬ್ಬರೂ ಲೇಖಕರ ದೃಷ್ಟಿಕೋನಗಳಲ್ಲಿರುವ ಪರಸ್ಪರ ಹೋಲಿಕೆ – ಭಿನ್ನತೆ, ಪ್ರಭಾವ ಬೀರಿರುವ ಅಂಶಗಳು ಇವುಗಳನ್ನು ಕುರಿತು ವಿವರಿಸಲಾಗಿದೆ. ಇಲ್ಲಿ ಎರಡೂ ಕೃತಿಗಳ ವಸ್ತು ಒಂದೇ ಆಗಿದ್ದರೂ ಅದನ್ನು ಇಬ್ಬರೂ ಲೇಖಕರು ನೋಡಿರುವ ರೀತಿ ಬೇರೆಯಾಗಿವೆ. ಅಂತೆಯೇ ಎರಡೂ ಕೃತಿಗಳಲ್ಲಿ ಭಿನ್ನ ಅಂಶಗಳಿಗೆ ಪ್ರಾಧಾನ್ಯತೆ ನೀಡಲಾಗಿದೆ. ಇದಕ್ಕೆ ಲೇಖಕರ ಮೇಲೆ ಪರಿಸರ, ಪಂಥಗಳು ಬೀರಿರುವ ಪ್ರಭಾವಗಳೂ ಕಾರಣವಾಗಿದೆ. ಈ ಹಿನ್ನಲೆಯಲ್ಲಿ, ಎರಡೂ ಕೃತಿಗಳ ವಸ್ತು ಒಂದೇ ಆದರೂ, ಅದು ಎರಡರಲ್ಲು ಭಿನ್ನ ರೀತಿಯಲ್ಲಿ ನಿರೂಪಿಸಲ್ಪಟ್ಟಿವೆ. ಈ ಭಿನ್ನತೆ ಯಾವ ರೀತಿಯಲ್ಲಿ ಕಂಡುಬಂದಿವೆ ಎಂಬುದನ್ನು ಲೇಖಕರ ದೃಷ್ಟಿಕೋನದ ಹಿನ್ನೆಲೆಯಲ್ಲಿ ವಿವೇಚಿಸಲಾಗಿದೆ.

ನಾಲ್ಕನೆಯ ವಿಭಾಗದಲ್ಲಿ 'ಅಭಿವ್ಯಕ್ತಿ ಸಂಬಂಧ'ವಾಗಿ ಎರಡೂ ಕೃತಿಗಳನ್ನು ಹೋಲಿಸಿ ವಿವರಿಸಲಾಗಿದೆ. ಇಲ್ಲಿ ಲೇಖಕರಲ್ಲಿ ಕಂಡು ಬರುವಂತಹ ಸೃಜನಶೀಲತೆಯ ಮಟ್ಟ, ಭಾಷೆಯ ಬಳಕೆ, ಉಪಮೆ, ಔಚಿತ್ಯ, ಪಾತ್ರಚಿತ್ರಣದ ರೀತಿ, ಚಿತ್ರಕ ಶಕ್ತಿ ಇವುಗಳನ್ನು ವಿವರಿಸಲಾಗಿದೆ. ಎರಡೂ ಕೃತಿಗಳು ತಮ್ಮ ವಸ್ತುವನ್ನು ನಿರೂಪಿಸಲು ಬಳಸಿಕೊಂಡಿರುವ ತಂತ್ರ – ವಿಧಾನಗಳನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ. 'ಸುಬ್ಬಣ್ಣ' ಕೃತಿಯಲ್ಲಿ ನಿರೂಪಕರು, ಲೇಖಕರೂ ಸೇರಿ ಕತೆಯನ್ನು ನಡೆಸುತ್ತಾರೆ. ಇಲ್ಲಿ ಸಂಭಾಷಣೆ ಕಡಿಮೆ. ಆದರೆ ಇದಕ್ಕೆ ವಿರುದ್ಧವಾಗಿ 'ಸಂಧ್ಯಾರಾಗ'ದಲ್ಲಿ ಸಂಭಾಷಣೆಯೇ ಜೀವಾಳವಾಗಿದೆ. ತೃತೀಯ ಪುರಷರ ನಿರೂಪಣೆಯೇ ಇಲ್ಲಿಲ್ಲ. ಸಂವಾದ ಶೈಲಿಯ ಮೂಲಕವೇ ಇಲ್ಲಿ ಕತೆ ಸಾಗುತ್ತದೆ. 'ಸುಬ್ಬಣ್ಣ' ಕೃತಿಯಲ್ಲಿ ಒಬ್ಬನೇ ವ್ಯಕ್ತಿಯ ಸಮಗ್ರ ಜೀವನವನ್ನು ಮೂರುಘಟ್ಟಗಳಲ್ಲಿ ಚಿತ್ರಿಸಲಾಗಿದ್ದರೆ, 'ಸಂಧ್ಯಾರಾಗ'ದಲ್ಲಿ ಎರಡು ಪೀಳಿಗೆಗಳ ವಿಸ್ತಾರವಾದ ಜೀವನವನ್ನು ಅಭಿವ್ಯಕ್ತಿಸಲಾಗಿದೆ. ಹೀಗೆ ಎರಡೂ ಕೃತಿಗಳ ಭಾಷೆ, ಶೈಲಿ, ಮಾರ್ಗಗಳ ಅಭಿವ್ಯಕ್ತಿಯಲ್ಲಿ ಭಿನ್ನತೆಯನ್ನು ಗುರುತಿಸಬಹುದು.

ಹೀಗೆ ಈ ಅಧ್ಯಾಯದಲ್ಲಿ 'ಸುಬ್ಬಣ್ಣ' ಮತ್ತು 'ಸಂಧ್ಯಾರಾಗ' ಕಾದಂಬರಿಯನ್ನು ಪರಸ್ಪರ ತುಲನಾತ್ಮಕ ದೃಷ್ಟಿಯಿಂದ ವಿಶ್ಲೇಷಿಸಲಾಗಿದೆ. ವಸ್ತು, ಪಾತ್ರ, ದೃಷ್ಟಿಕೋನ, ಅಭಿವ್ಯಕ್ತಿಗಳಲ್ಲಿ ಕಂಡುಬಂದಿರುವ ಸಾಮ್ಯತೆ, ಭಿನ್ನತೆಗಳನ್ನು ಕಂಡುಕೊಳ್ಳಲು ಇಲ್ಲಿ ಪ್ರಯತ್ನಿಸಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಈ ಹಿಂದಿನ ಅಧ್ಯಾಯಗಳನ್ನು ಆಧಾರವಾಗಿಟ್ಟುಕೊಂಡು 'ಸುಬ್ಬಣ್ಣ' ಮತ್ತು 'ಸಂಧ್ಯಾರಾಗ' ಕಾದಂಬರಿಗಳ ಸಾಹಿತ್ಯಿಕ ಮಹತ್ವವೇನು? ಅವುಗಳ ಶ್ರೇಷ್ಠತೆಯ ಮಟ್ಟವೆಷ್ಟು ಮತ್ತು ಆ ಕೃತಿಗಳು ಪಡೆದಿರುವ ಜನಪ್ರಿಯತೆ ಪುರಸ್ಕಾರಗಳೇನು? ಎಂಬಿತ್ಯಾದಿ ಅಂಶಗಳನ್ನು ಕುರಿತು ವಿವರಿಸಲಾಗಿದೆ.

ಈ ಎರಡೂ ಕೃತಿಗಳಲ್ಲಿನ ವಸ್ತುಗಳ ನಿರೂಪಣೆಯಲ್ಲಿ ಯಾವುದು ಶ್ರೇಷ್ಠ, ಯಾವ ಕೃತಿಯ ಪಾತ್ರಗಳು ನೈಜವಾಗಿ ವರ್ತಿಸುತ್ತವೆ ಮತ್ತು ತಮ್ಮ ಗುಣ–ವರ್ತನೆಗಳಿಂದ ಯಾವುದು ನಮಗೆ ಹೆಚ್ಚು ಆಪ್ತವಾಗುತ್ತದೆ. ವಸ್ತುವಿನ ಮೂಲಕ ಈ ಎರಡೂ ಕೃತಿಗಳು ತಳೆದಿರುವ ಧೋರಣೆ ಯಾವ ರೀತಿಯದ್ದು – ಎಂಬತ್ಯಾದಿಗಳನ್ನು ಕುರಿತು ವಿವರಿಸಲಾಗಿದೆ.

ಈ ಎಲ್ಲಾ ಹೇಳಿಕೆಗಳನ್ನು ಕೆಲವು ವಿಮರ್ಶಕರ ಮಾತನ್ನು ಉಲ್ಲೇಖಿಸಿ ನಿರೂಪಿಸಲಾಗಿದೆ. ಮತ್ತು ಕೆಲವು ವಿಚಾರಗಳನ್ನು ಸ್ಪಷ್ಟಪಡಿಸಲಾಗಿದೆ.

ಕೊನೆಯ ಅಧ್ಯಾಯವಾದ 'ಉಪಸಂಹಾರ' – ಎಂಬ ಈ ಅಧ್ಯಾಯದಲ್ಲಿ ನಿಬಂಧದ ಸಂಕ್ಷಿಪ್ತ ಪರಿಚಯ ಮಾಡಿಕೊಡಲಾಗಿದೆ. ಇಡೀ ನಿಬಂಧದ ಸ್ವರೂಪ, ವಿವರಣೆಯನ್ನು ತಿಳಿಸುವ ಪಕ್ಷಿನೋಟವಾಗಿ ಈ ಆಧ್ಯಾಯ ಕಂಡು ಬರುತ್ತದೆ.

'ಸುಬ್ಬಣ್ಣ' ಮತ್ತು 'ಸಂಧ್ಯಾರಾಗ' – ಈ ಎರಡೂ ಕೃತಿಗಳ ವಸ್ತು ಒಂದೇ ಆಗಿದೆ. ಅದು ಕಲೆ ಮತ್ತು ಕಲಾವಿದನ ಬದುಕಿನ ಚಿತ್ರಣ. ಕಲಾವಿದನ ಬದುಕಿನಲ್ಲಿ ಕಲೆ ವಹಿಸುವ ಪಾತ್ರ, ಬೀರುವ ಪರಿಣಾಮ – ಇವೇ

ಎರಡೂ ಕೃತಿಗಳಲ್ಲು ಬರುವಂತಹ ಕಥಾಹಂದರ. ಆದರೆ ಎರಡೂ ಕೃತಿಗಳಲ್ಲೂ ಈ ವಸ್ತುವನ್ನು ಬೇರೆ – ಬೇರೆ ರೀತಿಯಲ್ಲಿ ನಿರೂಪಿಸಲಾಗಿದೆ. ಹಲವಾರು ವ್ಯತ್ಯಾಸಗಳೂ ಇಲ್ಲಿ ಕಂಡುಬರುತ್ತವೆ.

'ಸುಬ್ಬಣ್ಣ' – ಕೃತಿ ಮುಖ್ಯವಾಗಿ ಅವನ ಆತ್ಮೋದ್ಧಾರವನ್ನು ಚಿತ್ರಿಸುವಂತದ್ದು. ಇಲ್ಲಿ 'ಸುಬ್ಬಣ್ಣ' ಒಬ್ಬ ಸಂಗೀತಗಾರನಾದರೂ, ಆ ಕಲೆಯಲ್ಲಿ ಅವನ ಸಾಧನೆಯನ್ನು ಚಿತ್ರಿಸುವ ಉದ್ದೇಶ ಕಾದಂಬರಿಗಿಲ್ಲ. ಆದ್ದರಿಂದಲೇ 'ಸುಬ್ಬಣ್ಣ' ಒಬ್ಬ ಮಹಾನ್ ಕಲಾವಿದನಾಗಿ ಬೆಳೆಯದೇ, ಸಂಸ್ಕಾರವಂತ ವ್ಯಕ್ತಿಯಾಗಿ ಉನ್ನತಿ ಸಾಧಿಸುತ್ತಾನೆ. ಆ ಮೂಲಕವೇ ಅವನು ಮುಕ್ತಿಯನ್ನು ಸಾಧಿಸುತ್ತಾನೆಂಬುದು ನಿರೂಪಕರ ಅಭಿಪ್ರಾಯ. ಅವನ ಕಲೆಯು ಉತ್ಕೃಷ್ಟದ ಹಂತಕ್ಕೆ ಏರುವುದಕ್ಕಿಂತಲೂ ಹೆಚ್ಚಾಗಿ, ಅವನ ವ್ಯಕ್ತಿತ್ವ, ಬದುಕು ಉದ್ಧಾರಗೊಳ್ಳುವುದು ಇಲ್ಲಿ ಕತೆಯ ಮುಖ್ಯ ಉದ್ದೇಶವಾಗಿದೆ. ಇಲ್ಲಿ ಸುಬ್ಬಣ್ಣನ ಕಲೆಗೂ ಗಮನಾರ್ಹವಾದ ಸ್ಥಾನವಿದೆ. ಆತ ಉದ್ದಕ್ಕೂ ಒಬ್ಬ ಸಂಗೀತಗಾರನಾಗಿಯೇ ಕಂಡುಬರುವುದು. ಆದರೆ ಅತ್ಯದ್ಭುತ ಕಲಾವಿದನಾಗಿ ಅಲ್ಲ. ಅಂತೆಯೇ ಅವನ ಜೀವನದಲ್ಲಿ ಎದುರಾಗುವ ಹಲವು ಶೋಕ ಪರಂಪರೆ ಅವನನ್ನು ಆತ್ಮೋದ್ಧಾರದ ಹಾದಿಗೆ ಹಚ್ಚಿತು. ಈ ಹಾದಿಗೆ ಅವನ ಸಂಗೀತದ ಪ್ರಭಾವವೂ ಒದಗಿದೆ. ತನ್ನ ಜೀವನದ ಎಲ್ಲಾ ಸಂಕಷ್ಟಗಳನ್ನು ಸುಬ್ಬಣ್ಣ ಶಾಂತವಾಗಿ, ಧೈರ್ಯವಾಗಿ ಎದುರಿಸುವುದು ಸಾಧ್ಯವಾದುದು, ಅವನಿಗೆ ಅವನ ಸಂಗೀತದ ಜೊತೆಯಿದ್ದುದರಿಂದಲೇ.

**"It is a like a quiet stream, which is enriched by a hundred rivuletes and retains its serenity till it reaches the sea"[1]**

ಮೇಲಿನ ಮಾತುಗಳಂತೆ 'ಸುಬ್ಬಣ್ಣ' ಕೃತಿಯು ಸಾವಿರಾರು ಒಳಸುಳಿಗಳನ್ನು – ಜೀವನ ಸಂಕಷ್ಟಗಳನ್ನು ತನ್ನೊಳಗೆ ಅಡಗಿಸಿಕೊಂಡು, ಸಾಗರವನ್ನು ಮುಟ್ಟುವವರೆಗು ಪ್ರಶಾಂತವಾಗಿ ತೋರಿಬರುವ ಪ್ರವಾಹದಂತೆ. 'ಸುಬ್ಬಣ್ಣ'ನ ಆತ್ಮೋದ್ಧಾರದ ಹಾದಿ ಸ್ಪಷ್ಟವಾಗುವವರೆಗೂ ಅವನು ಅನುಭವಿಸಿದ ಕಷ್ಟ ಪರಂಪರೆಗಳ ತೀವ್ರತೆ ನಮಗೆ ಅರಿವೇ ಆಗುವುದಿಲ್ಲ. ವಿರಕ್ತಿಯತ್ತ ಹೆಜ್ಜೆಯಿಟ್ಟ ಅವನು, ಸಂಪೂರ್ಣ ವಿರಾಗಿಯಾಗುವುದಿಲ್ಲ. ತನ್ನ ಜೀವನದ ಶೂನ್ಯವನ್ನು ಮಾನವ ಪ್ರೇಮದಿಂದ ತುಂಬಿಕೊಳ್ಳುತ್ತಾನೆ. ಈ ಹಿನ್ನೆಲೆಯಲ್ಲಿ ಅವನ ಸಂಗೀತ, ಅವನನ್ನು ಹೊರಜಗತ್ತಿಗೆ ಬೆಸೆಯುವಂತಹ ಒಂದು ತಂತುವಿನಂತೆ ಗೋಚರವಾಗುತ್ತದೆ. ಅವನ ಸಂಗೀತವಿಲ್ಲದಿದ್ದರೆ ಇದು ಅವನಿಗೆ ಸಾಧ್ಯವಾಗುತ್ತಲೇ ಇರಲಿಲ್ಲ. ಈ ಹಿನ್ನೆಲೆಯಲ್ಲಿಯೇ 'ಸುಬ್ಬಣ್ಣ' ನಾದಯೋಗಿಯಾಗಿದ್ದಾನೆ. ತನ್ನ ಮುಕ್ತಿಯನ್ನು ಬದುಕಿದ್ದಾಗಲೇ ಸಾಧಿಸಿದ್ದಾನೆ. ಗಾನದ ಮೂಲಕ ಸರ್ವತತ್ತ್ವಗಳನ್ನೂ ಅವನು ತಿಳಿಯುವುದು ಈ ರೀತಿಯಿಂದ. ಇಲ್ಲಿ ಅವನು ಉದ್ಧಾರವಾದುದರಿಂದ ಅವನ ಸಂಗೀತವೂ ಉದ್ಧಾರವಾಗುತ್ತವೆ. ಆ ಮೂಲಕ ಹೊಸ ಅರಿವೊಂದು ಸುಬ್ಬಣ್ಣನಲ್ಲಿ ಮೂಡುತ್ತದೆ. ಇಲ್ಲಿ ಮುಖ್ಯವಾಗಿರುವುದು ಜೀವನಪ್ರೀತಿ, ಉದಾತ್ತತೆ. ಅದು ಸಾಧಿತವಾಗುವುದೂ ಅವನ ಸಂಗೀತದ ನೆರವಿನಿಂದ. ಇಲ್ಲಿ ಅವನ ಕಲೆಗಿಂತ ಅವನ ಉದ್ಧಾರಕ್ಕೆ ಹೆಚ್ಚಿನ

---

**1. Masti Venkatesa Ayaangar (Kannda Writers and their work )- L.S. Sheshgiri Rao - P.No. 37)**

ಪ್ರಾಮುಖ್ಯತೆ ನೀಡಲಾಗಿದೆ. ಆದರೆ ಕಲೆಗೂ ಯೋಗ್ಯಸ್ಥಾನ ದೊರಕಿದೆ. ಆದರೆ ಕಲೆಗಿಂತಲೂ ಜೀವನವನ್ನು ಮುಖ್ಯವಾಗಿ ಇಲ್ಲಿ ನೋಡಲಾಗಿದೆ. ಆದ್ದರಿಂದಲೇ ಇಲ್ಲಿ ಮುಖ್ಯವಾಗಿರುವುದು ಸುಬ್ಬಣ್ಣನ ಕಲೆಯಲ್ಲ, ಅವನ ಉದ್ಧಾರ.

'ಸಂಧ್ಯಾರಾಗ'ದಲ್ಲಿ ಇದಕ್ಕೆ ಭಿನ್ನವಾದ ರೀತಿಯಲ್ಲಿ ವಸ್ತುವಿನ ನಿರೂಪಣೆಯಿದೆ. ಇಲ್ಲಿ ಜೀವನಕ್ಕಿಂತಲೂ ಮಿಗಿಲಾಗಿ ಕಲೆಯ ಪಾತ್ರವಿದೆ. ಅದು ಜೀವನವನ್ನು ಮೀರಿ ನಿಲ್ಲುವಂತಹ ಅದ್ಭುತ ಶಕ್ತಿಯಾಗಿ ಪರಿಣಮಿಸಿದೆ. ಅದೇ ರೀತಿ ಲಕ್ಷ್ಮಣ ತನ್ನಿಡೀ ಬದುಕನ್ನು ಈ ಕಲೆಯ ಆರಾಧನೆಗಾಗಿ ಮುಡಿಪಾಗಿಡುತ್ತಾನೆ. ಯಾವಾಗ ಅವನ ಕಲೆಯಲ್ಲಿ ದೈನ್ಯತೆ, ಹೃದ್ಯತೆಗಳು ಬಂದು ಸೇರುವುದೋ ಆಗ ಅವನದ್ದು, ನಿಜವಾದ ಸಂಗೀತವಾಗಿ, ತನ್ನ ಕಲೆಗಾಗಿ ತನ್ನ ಪ್ರಾಣವನ್ನೇ ಅವನು ಅರ್ಪಿಸುತ್ತಾನೆ. ಇಲ್ಲಿ ಲಕ್ಷ್ಮಣನ ಕಲೆಗೆ ಪ್ರಾಮುಖ್ಯತೆಯನ್ನು ನೀಡಿರುವುದರಿಂದ ಅವನ ಜೀವನ ಕಲೆಗೆ ಹೆಚ್ಚು ಒತ್ತು ಕೊಟ್ಟಂತೆ ಕಾಣುವುದಿಲ್ಲ. ನಿಜವಾಗಿ ಲಕ್ಷ್ಮಣ ತನ್ನ ಜೀವನದಲ್ಲಿ ಸೋತಿದ್ದಾನೆ. ಜಯಾಳ ಮರಣವೇ ಇದಕ್ಕೆ ನಿದರ್ಶನ. ಆದರೆ ಅವನ ಈ ದೊಡ್ಡ ದೌರ್ಬಲ್ಯದೆಡೆಗೆ ಕಾದಂಬರಿ ಲಕ್ಷ್ಯ ಹರಿಸಿಲ್ಲ. ಆದರೆ ಒಬ್ಬ ಕಲಾವಿದನಾಗಿ ಕಲಾದೇವತೆಯನ್ನೇ ಸಾಕ್ಷಾತ್ಕರಿಸಿಕೊಳ್ಳುವುದೂ, ಕಲೆಗಾಗಿ ತನ್ನ ಜೀವನವನ್ನೇ ಮುಡಿಪಾಗಿಡುವುದು ಎಲ್ಲರಿಗೂ ಸಾಧ್ಯವಾಗುವಂತದ್ದಲ್ಲ. ಈ ನಿಟ್ಟಿನಲ್ಲಿ ಲಕ್ಷ್ಮಣ ಸಾಧಿಸುವುದ ಅದ್ಭುತ – ಅನನ್ಯ. ಆದರೆ ಅವನ ಈ ಸಾಧನೆಯನ್ನು ಚಿತ್ರಿಸುವ ಭರದಲ್ಲಿ ಅವನ ವ್ಯಕ್ತಿತ್ವವನ್ನು ಮಂಕುಗೊಳಿಸಲಾಗಿದೆ.

ಎರಡೂ ಕೃತಿಗಳನ್ನೂ ನೋಡಿದಾಗ 'ಸುಬ್ಬಣ್ಣ' ಕೃತಿಯಲ್ಲಿ ಕಲಾವಿದನ ಬದುಕಿಗೆ ಪ್ರಾಮುಖ್ಯತೆ ನೀಡಿರುವುದೂ, 'ಸಂಧ್ಯಾರಾಗ'ದಲ್ಲಿ ಕಲಾವಿದನ ಕಲೆಗೆ ಪ್ರಾಧಾನ್ಯ ನೀಡಿರುವುದು ಸ್ಪಷ್ಟವಿದೆ. ಇಲ್ಲಿ ಇಬ್ಬರೂ ಕಲಾವಿದರ ಬದುಕಿನ ಚಿತ್ರಣವಿದ್ದರೂ, ಕಲೆಯು ಅವರ ಜೀವನದಲ್ಲಿ ವಹಿಸಿರುವ ಪಾತ್ರ, ಕಲಾಮಾರ್ಗದಲ್ಲಿ ಮತ್ತು ಜೀವನದ ಹಾದಿಯಲ್ಲಿ ಇಬ್ಬರೂ ಮಾಡಿರುವ ಸಾಧನೆಯು ಭಿನ್ನವಾಗಿದೆ.

'ಸುಬ್ಬಣ್ಣ' ಒಬ್ಬ ವ್ಯಕ್ತಿಯಾಗಿ ಸಿದ್ಧಿಯನ್ನು ಕಂಡರೆ, ಲಕ್ಷ್ಮಣ ಒಬ್ಬ ಕಲಾವಿದನಾಗಿ ಸಾಕ್ಷಾತ್ಕಾರವನ್ನು ಕಂಡಿದ್ದಾನೆ.

'ಸುಬ್ಬಣ್ಣ' ಬಹು ಹರ್ಷದಿಂದ ಸಂಗೀತವನ್ನು ಕಲಿತು, ಜೀವನದ ಸಂಕಷ್ಟಗಳನ್ನು ಎದುರಿಸಿ, ಅದಕ್ಕೆ ಆಸರೆಯಾಗಿ ಸಂಗೀತವನ್ನು ಬಳಸಿಕೊಳ್ಳುತ್ತಾನೆ. ಆತ ಸಂಗೀತದ ಸಹಾಯದಿಂದ ತತ್ತ್ವಜ್ಞಾನಿಯಾದನು. ಲಕ್ಷ್ಮಣ ತನ್ನ ಜೀವನದಲ್ಲಿ ಬರುವ ಸಂಕಷ್ಟಗಳನ್ನು ಎದುರಿಸಲಾಗದೆ, ಫಲಾಯನವಾದಿಯಾದ, ಒಂದು ಹಂತದಲ್ಲಿ ಹುಚ್ಚನೂ ಆದ, ಆದರೆ ಕೊನೆಯಲ್ಲಿ ಕಲಾದೇವತೆಗೆ ತನ್ನನ್ನು ತಾನು ಅರ್ಪಿಸಿಕೊಂಡ.

ಇಲ್ಲಿ ಯಾವ ಕೃತಿ ಹೆಚ್ಚು, ಯಾವುದು ಕಡಿಮೆ ಎನ್ನುವುದಕ್ಕಿಂತ – ಯಾವುದರ ವಿಚಾರ ಹೆಚ್ಚು ಸಮರ್ಪಕ ಎಂದು ಯೋಚಿಸುವುದು ಅಗತ್ಯ. ಒಂದು ಕೃತಿಯಲ್ಲಿ ಕಲೆಯ ಮೇಲಗೈ ಇದೆ. ಆ ಮೂಲಕ ಜೀವನದ ಇತರ ಮುಖಗಳು ಗೌಣವಾಗಿದೆ. ಇನ್ನೊಂದರಲ್ಲಿ ಜೀವನವೇ ಪ್ರಮುಖವಾಗಿ ಕಲೆಯೂ ಆ ನಿಟ್ಟಿನಲ್ಲಿ ಒಂದು ಉನ್ನತ ಪಾತ್ರವಹಿಸಿದೆ.

'ಸುಬ್ಬಣ್ಣ' ಕಲೆಯಿಂದ ಬದುಕಿದನು, 'ಲಕ್ಷ್ಮಣ' ಕಲೆಗಾಗಿಯೇ ಬದುಕಿದನು. ಸುಬ್ಬಣ್ಣನದು ಆತ್ಮಪರಿಪಕ್ವತೆ, ಲಕ್ಷ್ಮಣನದು ಕಲಾಪರಿಪಕ್ವತೆ. ಇದೇ ಇವರಿಬ್ಬರೂ ಕಲಾವಿದರ ನಡುವಿನ ವ್ಯತ್ಯಾಸ. ಆದರೆ ಇಬ್ಬರದ್ದೂ ಒಂದೊಂದು ರೀತಿಯ ದೈನ್ಯದ ತಪಸ್ಸು. ಸುಬ್ಬಣ್ಣನ ಬದುಕಿನ ಕಷ್ಟನಷ್ಟಗಳಿಂದಾಗಿ ಅವನ ಜೀವನ ದೈನ್ಯತೆಯನ್ನು ಪಡೆದರೆ, ಲಕ್ಷ್ಮಣನ ಸಂಧ್ಯಾರಾಗದ ಸಾರ್ಥಕತೆ, ಅವನ ಕಲಾಮಾರ್ಗದ, ಹೃದ್ಯತೆ, ದೈನ್ಯತೆಗಳ ಫಲವೇ ಆಗಿದೆ. 'ಸುಬ್ಬಣ್ಣ' ವ್ಯಕ್ತಿಯಾಗಿ ಬೆಳೆದಿದ್ದಾನೆ, 'ಲಕ್ಷ್ಮಣ' ಕಲಾವಿದನಾಗಿ ಔನ್ನತ್ಯಕ್ಕೇರಿದ್ದಾನೆ.

ಕಲೆ ಜೀವನಕ್ಕೆ ಅಗತ್ಯ – ಒಮ್ಮೊಮ್ಮೆ ಅನಿವಾರ್ಯ. ಆದರೆ ಅದೇ ಜೀವನವಲ್ಲ. ಆ ಮಾರ್ಗದಲ್ಲಿ ಸಾಧನೆ – ಸಿದ್ಧಿಗಳು ಅಗತ್ಯ. ಆದರೆ ಅದು ಜೀವನವನ್ನೇ ಗೌಣವಾಗಿಸುವ ಅಂಶವಾಗಬಾರದು. ಲಕ್ಷ್ಮಣನ ಸಿದ್ಧಿ–ಸಾಕ್ಷಾತ್ಕಾರಗಳ ಬಗ್ಗೆ ಎರಡು ಮಾತಿಲ್ಲ. ಆದರೆ ಜೀವನಕ್ಕಿಂತಲು ದೊಡ್ಡದು ಬೇರೊಂದಿಲ್ಲ. ಅದನ್ನು ಅರ್ಥಪೂರ್ಣಗೊಳಿಸುವುದೇ ಮೊದಲು ಮುಖ್ಯವಾಗುತ್ತದೆ. ಅನಂತರ ಜೀವನದ ಇತರ ಅಂಶಗಳಿಗೆ ಪ್ರಾಮುಖ್ಯತೆ ನೀಡುಬಹುದು. ಕಲೆಯನ್ನು ಒಂದು ತಪಸ್ಸನ್ನಾಗಿ ಸ್ವೀಕರಿಸುವುದು ಅದ್ಭುತವೇ!, ಆದರೆ, ಜೀವನವನ್ನು ಅರ್ಥಪೂರ್ಣಗೊಳಿಸುವುದೂ, ವ್ಯಕ್ತಿತ್ವನ್ನು ಸಂಸ್ಕಾರಗೊಳಿಸುವುದು, ಅದಕ್ಕಿಂತಲು ಮುಖ್ಯವಾದ ವಿಚಾರ ಮತ್ತು ಅದು ಕಲೆಯ ಸಿದ್ಧಿಗಿಂತಲೂ ಕಠಿಣವಾದುದು ಎಂಬುದೂ ಸತ್ಯ.

ಈ ಹಿನ್ನೆಲೆಯಲ್ಲಿಯೂ, ನಿರೂಪಣೆ, ಸಹಜತೆ, ವಿಚಾರ ವಿಶ್ಲೇಷಣೆ, ಔಚಿತ್ಯ – ಈ ಎಲ್ಲಾ ದೃಷ್ಟಿಯಿಂದಲೂ 'ಸಂಧ್ಯಾರಾಗ' ಕೃತಿಗಿಂತ 'ಸುಬ್ಬಣ್ಣ' ಕೃತಿಯೇ ಹೆಚ್ಚು ಸತ್ವಯುತವಾದುದು ಎಂಬುದು ನನ್ನ ಅಭಿಪ್ರಾಯವಾಗಿದೆ.

* * *

# ಗ್ರಂಥಋಣ


೧. ಅ.ನ.ಕೃ – **ತ.ರಾ.ಸು**
ಸಂ. – ನಾ. ಪ್ರಭಾಕರ್
ತ.ರಾ.ಸು. ಪ್ರತಿಷ್ಠಾನ
ಮೈಸೂರು (೧೯೭೭)

೨. ಅ.ನ.ಕೃ. (ಸಾಹಿತ್ಯ ಲೋಕದ ಪ್ರಾತಃ ಸ್ಮರಣೀಯರು) – **ಬೆ. ಗೊ. ರಮೇಶ್ (೨೦೦೩)**

೩. ಕೃತಿ ಚಿಂತನ – ೧ – **ಮಾಸ್ತಿ ಅಧ್ಯಯನ ಪೀಠ ನಡೆಸಿದ ಉಪನ್ಯಾಸಗಳು**
ಮಾಸ್ತಿ ಅಧ್ಯಯನ ಪೀಠ
ಬೆಂಗಳೂರು (೨೦೦೧)

೪. ಬೇರು – ಕಾಂಡ – ಚಿಗುರು – **ಕೆ. ವಿ. ನಾರಾಯಣ**
ವಿವೇಕ ಪ್ರಕಾಶನ
ವಿಚಾರ ವೇದಿಕೆ
ಬೆಂಗಳೂರು (೧೯೭೭)

೫. ಮಾಸ್ತಿ (ಜ್ಞಾನಪೀಠ ಪ್ರಶಸ್ತಿ ವಿಜೇತರು) – **ರಾ. ಲಕ್ಷ್ಮೀನಾರಾಯಣ**
ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು (೨೦೦೪)

೬. **Masti Venkatesa Ayyangar** (Kannada Writers and Their Work) - **L. S. Sheshariri Rao**
Institute of Kannda Studies
Mysore (1976)

೭. ರಸಚೇತನ – **ಸಂ. ಶಾ. ಮಂ. ಕೃಷ್ಣರಾಯ**
ಗೋವಾ ಕನ್ನಡ ಸಂಘ (ರಿ)
ಗೋವಾ (೧೯೭೦)

೮. ಶ್ರೀನಿವಾಸ (ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕೃತ ಕನ್ನಡ ಲೇಖಕರು) – **ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯ**
ಸಂ. ಡಾ॥ ಪ್ರಧಾನ್ ಗುರುದತ್ತ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್
ಬೆಂಗಳೂರು (೨೦೦೫)

೯. ಶ್ರೀನಿವಾಸ – **ಸಂ. ಮಾವಿನಕೆರೆ ರಂಗನಾಥನ್**
ಪುರೋಗಾಮಿ ಸಾಹಿತ್ಯ ಸಂಘ
ಬೆಂಗಳೂರು (೧೯೭೨)

೧೦. ಶ್ರೀ ಮಾಸ್ತಿಯವರ ಕಥೆಗಳು – **ಎ. ಎನ್. ಮೂರ್ತಿರಾವ್**
ಕಾವ್ಯಾಲಯ ಪ್ರಕಾಶನ
ಮೈಸೂರು (೧೯೯೯)

೧೧. ಸಣ್ಣಕತೆಗಳ ಜನಕ ಮಾಸ್ತಿ ವೆಂಕಟೇಶ್ ಅಯ್ಯಂಗಾರ್ – ಎಲ್. ಎನ್. ಕಾಡದೇವರಮಠ
ವಿದ್ಯಾನಿಧಿ ಪ್ರಕಾಶನ
ಗದಗ (೨೦೦೫-೦೬)

೧೨. ಸುಬ್ಬಣ್ಣ – ಶ್ರೀನಿವಾಸ
ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಜೀವನ ಕಾರ್ಯಾಲಯ ಟ್ರಸ್ಟ್
ಬೆಂಗಳೂರು (೨೦೦೪)

೧೩. ಸಿರಿಸಂಪದ – ಎಲ್. ಎಸ್. ಶೇಷಗಿರಿರಾವ್
ಪುರೋಗಾಮಿ
ಬೆಂಗಳೂರು (೧೯೯೨)

೧೪. ಸಂಧ್ಯಾರಾಗ – ಅ.ನ.ಕೃ.
ವಿಶ್ವಕನ್ನಡ ಸಮ್ಮೇಳನ
ಬೆಂಗಳೂರು (೧೯೮೨)

---

* ಪ್ರಸ್ತುತ ನಿಬಂಧಕ್ಕಾಗಿ ವಿದ್ವಾನ್ ಎಮ್. ಎಚ್. ಸಂಪತ್ಕುಮಾರ್ ಆಚಾರ್ ಅವರಿಂದ 'ಸಂಧ್ಯಾರಾಗ'ದ [ತ್ರ್ಯಂಬಕ] ಬಗ್ಗೆ ಕೆಲವು ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ.

# ಅನುಬಂಧ



ಅ. ನ. ಕೃಷ್ಣರಾಯರು



ಮಾಸ್ತಿ ವೆಂಕಟೇಶ ಅಯ್ಯಂಗಾರ್

